


# ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

## (ಕರ್ನಾಟಕ ಸರ್ಕಾರದ ಒಂದು ಉದ್ಯಮ)

6ನೇ ಮಹಡಿ, ಜಯನಗರ ವಾಣಿಜ್ಯ ಸಂಕೀರ್ಣ, 4ನೇ ಬ್ಲಾಕ್, ಜಯನಗರ, ಬೆಂಗಳೂರು–560 011
ಫೋನ್ : 080–26632792, 26542307. ಫ್ಯಾಕ್ಸ್ : 080–26542308 ಇ–ಮೇಲ್ : md.kswdc@gmail.com

**ಪೀಠಿಕೆ :** ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ೧೯೮೭ರಲ್ಲಿ ಕಂಪನಿಯ ಅಧಿನಿಯಮ ೧೯೫೬ರ ಅಡಿಯಲ್ಲಿ ಸ್ಥಾಪಿಸಲ್ಪಟ್ಟಿದೆ. ೨೦೦೧ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಜನಸಂಖ್ಯೆ ೫,೨೭,೩೩,೯೫೮ ಇದರಲ್ಲಿ ಪ್ರತಿಶತ ಶೇಕಡ ೪೯.೦೭ರಂತೆ ಒಟ್ಟು ೨,೫೮,೭೭,೬೧೫ ಮಹಿಳೆಯರಿರುತ್ತಾರೆ. ರಾಜ್ಯದ ಒಟ್ಟು ಸಾಕ್ಷರತೆ ಶೇಕಡವಾರು ೬೬.೬೪% ರಾಜ್ಯದ ಒಟ್ಟು ಮಹಿಳೆಯರ ಸಾಕ್ಷರತೆ ಶೇಕಡವಾರು ೫೭.೪% ಆಗಿರುತ್ತದೆ. ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ಹಾಗೂ ನಗರದ ಕೆಲವು ಪ್ರದೇಶಗಳಲ್ಲಿ ದುರ್ಬಲ ವರ್ಗದ ಮಹಿಳೆಯರು ಅನಕ್ಷರಸ್ಥರು, ಹಿಂದುಳಿದ ಮಹಿಳೆಯರು ವಾಸಿಸುತ್ತಿದ್ದು, ಇವರುಗಳ ಆರ್ಥಿಕ ಸಬಲೀಕರಣಕ್ಕೆ ನಿಗಮವು ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಮಹಿಳೆಯರ ಸಬಲೀಕರಣದಿಂದಲೇ ರಾಜ್ಯದ ಹಾಗೂ ರಾಷ್ಟ್ರದ ಅಭಿವೃದ್ಧಿಹೊಂದಲು ಸಾಧ್ಯವಾಗುತ್ತದೆ. ಇದೇ ಈ ನಿಗಮದ ಮುಖ್ಯ ಉದ್ದೇಶವಾಗಿರುತ್ತದೆ.

**ನಿಗಮದ ಮುಖ್ಯ ಉದ್ದೇಶಗಳು** * ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗೆ ಯೋಜನೆಗಳನ್ನು ರೂಪಿಸಿ ಮಹಿಳೆಯರ ಅಭಿವೃದ್ಧಿಗೆ ಶ್ರಮಿಸುವುದು. ಭಾವಿ ಮಹಿಳಾ ಉದ್ಯಮಿಗಳನ್ನು ಗುರುತಿಸುವುದು. * ನಿಗಮದ ವ್ಯಾಪ್ತಿಯಲ್ಲಿ ಬರುವ ಮಹಿಳೆಯರಿಗೆ ಆದಾಯ ಉತ್ಪನ್ನಕರ ಚಟುವಟಿಕೆಗಳ ಬಗ್ಗೆ ಮಾರ್ಗದರ್ಶನ ನೀಡುವುದು ಹಾಗೂ ತಾಂತ್ರಿಕ ಸಲಹಾ ಸೇವೆಯನ್ನು ಒದಗಿಸುವುದು. * ಬ್ಯಾಂಕ್ ಹಾಗೂ ಇತರೆ ಆರ್ಥಿಕ ಸಂಸ್ಥೆಗಳಲ್ಲಿ ಲಭ್ಯವಿರುವ ಸಾಲವನ್ನು ಒದಗಿಸುವಲ್ಲಿ ಅನುಕೂಲ ಕಲ್ಪಿಸುವುದು. * ಮಾರುಕಟ್ಟೆಯ ಅನುಕೂಲಗಳನ್ನು ಕಲ್ಪಿಸುವುದು. * ಮಹಿಳಾ ಸಂಘಗಳನ್ನು, ಸಮಾಜಗಳನ್ನು, ಮಂಡಳಿಗಳನ್ನು ಸಹಕಾರಿಗಳನ್ನು ಉತ್ತೇಜಿಸುವುದು ಹಾಗೂ ಬಲಪಡಿಸುವುದು. * ಸರ್ಕಾರಿ/ಸರ್ಕಾರೇತರ ಸಂಸ್ಥೆಗಳ ಮೂಲಕ ಮಹಿಳೆಯರು ಸ್ವ–ಉದ್ಯೋಗಿಗಳಾಗಲು ಕೌಶಲ್ಯ ಅಭಿವೃದ್ಧಿ ತರಬೇತಿಯನ್ನು ಹಮ್ಮಿಕೊಳ್ಳುವುದು.

## ಯೋಜನೆಗಳ ಹೆಸರು ಮತ್ತು ವಿವರಗಳು

### ಕರ್ನಾಟಕ ಸರ್ಕಾರದ ಯೋಜನೆಗಳು

#### ೧. ಉದ್ಯೋಗಿನಿ

* ಮಹಿಳೆಯರು ಆದಾಯ ಉತ್ಪನ್ನಕರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡು ಸ್ವಯಂ ಉದ್ಯೋಗಿಗಳಾಗಲು ಸಾಲ ಮತ್ತು ಸಹಾಯಧನ ನೀಡುವ ಮೂಲಕ ಉತ್ತೇಜನ.
* ಈ ಯೋಜನೆಯನ್ನು ಬಲಪಡಿಸಲು ಭೌತಿಕ ಗುರಿಯ ೧/೩ರಷ್ಟು ವೈಯಕ್ತಿಕ ಫಲಾನುಭವಿಗಳಿಗೆ ಬ್ಯಾಂಕಿನಿಂದ ಸಾಲ ಮತ್ತು ಸಹಾಯಧನ ನೀಡುವುದರ ಜೊತೆಗೆ ೨/೩ರಷ್ಟು ಸ್ವ –ಸಹಾಯ ಗುಂಪಿನ ಸದಸ್ಯರಿಗೂ ಸಹ ಸಾಲ ಮತ್ತು ಸಹಾಯಧನ ವಿತರಣೆ.
* ನಿಗಮವು ಗುರುತಿಸಿರುವ ೧೦೧ ಚಟುವಟಿಕೆಗಳಿಗೆ ಅಥವಾ ಇನ್ನಾವುದೇ ಲಾಭದಾಯಕ ಚಟುವಟಿಕೆಗಳಿಗೆ ಸಾಲ ಮತ್ತು ಸಹಾಯಧನ ನೀಡಲಾಗುವುದು. ಇವುಗಳ ಪೈಕಿ ಒಂದನ್ನು ಆಯ್ಕೆ ಮಾಡಿಕೊಂಡು ಮಹಿಳೆಯರು ಆದಾಯ ಉತ್ಪನ್ನಕರ ಚಟುವಟಿಕೆಯಲ್ಲಿ ತೊಡಗಬಹುದಾಗಿರುತ್ತದೆ.
* ಗರಿಷ್ಠ ಯೋಜನಾ ವೆಚ್ಚ ರೂ. ೧.೦೦ ಲಕ್ಷ
* ಬ್ಯಾಂಕುಗಳು ಮತ್ತು ಇತರೇ ಆರ್ಥಿಕ ಸಂಸ್ಥೆಗಳು ಸಾಲವನ್ನು ಒದಗಿಸುವುವು.
* ವಿಶೇಷ ವರ್ಗದ ಮಹಿಳೆಯರಿಗೆ (ಪ.ಜಾತಿ/ಪ.ವರ್ಗ, ವಿಧವೆಯರು ಮತ್ತು ಅಂಗವಿಕಲೆಯರು) ಯೋಜನಾ ವೆಚ್ಚದ ಶೇ. ೩೦ರಷ್ಟು (ಗರಿಷ್ಠ ರೂ. ೧೦,೦೦೦/–) ಹಾಗೂ ಇತರೆ ಮಹಿಳೆಯರಿಗೆ ಯೋಜನಾ ವೆಚ್ಚದ ಶೇ. ೨೦ರಷ್ಟು (ಗರಿಷ್ಠ ರೂ. ೭,೫೦೦/–) ನಿಗಮದಿಂದ ಸಹಾಯಧನ.
* ಆಯಾಯ ಜಿಲ್ಲೆಗಳ ಉಪ ನಿರ್ದೇಶಕರ ಮೂಲಕ ಸಹಾಯಧನವನ್ನು ನೀಡಲಾಗುತ್ತದೆ.
* ಕುಟುಂಬದ ವಾರ್ಷಿಕ ಆದಾಯ ರೂ. ೪೦,೦೦೦/– ಮೀರದ ೧೮ರಿಂದ ೪೫ ವರ್ಷದೊಳಗಿನ ಮಹಿಳೆಯರು ಈ ಯೋಜನೆಯ ಸೌಲಭ್ಯಕ್ಕೆ ಅರ್ಹರು.
* ವಿಧವೆ ಸಂಕಷ್ಟಕ್ಕೊಳಗಾದ ಮಹಿಳೆ ಮತ್ತು ಅಂಗವಿಕಲ ಮಹಿಳೆಯರಿಗೆ ಆದಾಯದ ಮಿತಿ ಇರುವುದಿಲ್ಲ.
* ಸಾಲ ಮಂಜೂರಾದ ನಂತರ ಸಾಲ ಬಿಡುಗಡೆಯ ಮುನ್ನ ಈ ಯೋಜನೆಯ ಫಲಾನುಭವಿಗಳಿಗೆ ೩ ದಿನಗಳ ಉದ್ಯಮಶೀಲ ತರಬೇತಿ ನೀಡಲಾಗುವುದು.
* ಮಹಿಳೆಯರು ಆದಾಯ ಉತ್ಪನ್ನಕರ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಖಾಸಗಿ ಆರ್ಥಿಕ ಸಂಸ್ಥೆಗಳಿಗೆ ಪಡೆಯುವ ಸಾಲಕ್ಕೆ ಹೆಚ್ಚಿನ ಬಡ್ಡಿ ತೆರುವುದನ್ನು ತಪ್ಪಿಸುವುದು ಈ ಯೋಜನೆಯ ಉದ್ದೇಶವಾಗಿದೆ.

#### ೨. ಲಿಂಗತ್ವ ಅಲ್ಪಸಂಖ್ಯಾತರ ಪುನರ್ವಸತಿ ಯೋಜನೆ

ಈ ಯೋಜನೆಯಡಿಯಲ್ಲಿ ಲಿಂಗತ್ವ ಅಲ್ಪಸಂಖ್ಯಾತರ ಸ್ವಯಂ ಉದ್ಯೋಗಕ್ಕಾಗಿ ಸಾಲ, ಸೌಲಭ್ಯ ಹಾಗೂ ಕೌಶಲ್ಯ ತರಬೇತಿ ಕೊಡಿಸಿ ಇವರು ಗೌರವಾನ್ವಿತ ಜೀವನವನ್ನು ನಡೆಸಲು ಸಹಾಯವನ್ನು ಕಲ್ಪಿಸಲಾಗುವುದು.

#### ೩. ಲೈಂಗಿಕ ಕಾರ್ಯಕರ್ತೆಯರಿಗೆ ಪುನರ್ವಸತಿ ಯೋಜನೆ

ಈ ಯೋಜನೆಯಡಿ ಆಸಕ್ತಿಯುಳ್ಳ ಲೈಂಗಿಕ ಕಾರ್ಯಕರ್ತೆಯರಿಗೆ ಸ್ವಯಂ ಉದ್ಯೋಗಕ್ಕಾಗಿ ಸಾಲ ಸೌಲಭ್ಯ ಹಾಗೂ ಆಸಕ್ತಿಯುಳ್ಳ ಲೈಂಗಿಕ ಕಾರ್ಯಕರ್ತೆಯರಿಗೆ ಕೌಶಲ್ಯ ತರಬೇತಿ ಕೊಡಿಸಿ ಇವರು ವೃತ್ತಿಯಿಂದ ಹೊರಬಂದು ಗೌರವಾನ್ವಿತ ಜೀವನವನ್ನು ನಡೆಸಲು ಸಹಾಯವನ್ನು ಕಲ್ಪಿಸಲಾಗುವುದು.

#### ೪. ಮಾರುಕಟ್ಟೆ ನೆರವು ಯೋಜನೆ

* ಮಹಿಳಾ ಉದ್ಯಮಿಗಳನ್ನು ಮತ್ತು ಸಮರ್ಥ ಗ್ರಾಹಕರನ್ನು ಒಂದುಗೂಡಿಸಿ, ಮಹಿಳಾ ಉದ್ದಿಮೆದಾರರು ತಯಾರಿಸಿದ ವಸ್ತುಗಳಿಗೆ ಮಾರುಟ್ಟೆ . ಸೌಲಭ್ಯ ಒದಗಿಸುವುದು.
* ಅಂತರರಾಷ್ಟ್ರೀಯ ಮಹಿಳಾ ದಿನಚರಣೆ ಅಂಗವಾಗಿ ರಾಜ್ಯ ಮಟ್ಟದ ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳ ಹಾಗೂ ಎಲ್ಲ ಜಿಲ್ಲೆಗಳಲ್ಲಿ ತಾಲ್ಲೂಕು ಕೇಂದ್ರ ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳಗಳ ವ್ಯವಸ್ಥೆ.
* ಸಮರ್ಥ ಮಹಿಳಾ ಉದ್ದಿಮೆದಾರರುಗಳನ್ನು ಇತರೆ ಸಂಘ ಸಂಸ್ಥೆಗಳು ಹಾಗೂ ಕೇಂದ್ರ ಸರ್ಕಾರದ ಯೋಜನೆಯಡಿ ಏರ್ಪಡಿಸಿರುವ ವಿವಿಧ ವಸ್ತು ಪ್ರದರ್ಶನ ಮತ್ತು ಮಾರಾಟ ಮೇಳಗಳಲ್ಲಿ ಭಾಗವಹಿಸಲು ಮಹಿಳಾ ಉದ್ದಿಮೆದಾರರನ್ನು ನಿಯೋಜಿಸಲಾಗುವುದು.

#### ೫. ದೇವದಾಸಿ ಪುನರ್ವಸತಿ ಕಾರ್ಯಕ್ರಮ

ದೇವದಾಸಿ ಪದ್ಧತಿ ಮಹಿಳಾ ವರ್ಗಕ್ಕೆ ಕಳಂಕ ತರುವ ಒಂದು ಅನಿಷ್ಟ ಪದ್ಧತಿಯೆಂದು ಗುರುತಿಸಿದ ಸರ್ಕಾರವು ಸಮರ್ಪಣೆಯನ್ನು ನಿಷೇಧಗೊಳಿಸಿ, ಸಮರ್ಪಣೆ ಮಾಡಲು ಪ್ರಚೋದಿಸುವುದನ್ನು ಶಿಕ್ಷಾರ್ಹ ಎಂದು ಕರ್ನಾಟಕ ದೇವದಾಸಿ (ಸಮರ್ಪಣಾ ನಿಷೇಧ) ಕಾಯಿದೆ ೧೯೮೪ನ್ನು ಜಾರಿಗೊಳಿಸಿದೆ. ಈ ಪದ್ಧತಿಯಿಂದ ಬಾಧಿತರಾದವರ ಪುನರ್ವಸತಿಗಾಗಿ ಕೆಳಕಂಡ ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ೧೯೯೩–೯೪ರ ಮತ್ತು ೨೦೦೭–೦೮ರ ಸಮೀಕ್ಷೆಯಂತೆ ಒಟ್ಟು ೪೬,೬೬೦ ಮಾಜಿ ದೇವದಾಸಿಯರನ್ನು ಗುರುತಿಸಲಾಗಿದೆ.

* ಈ ಯೋಜನೆಯ ಅನುಷ್ಠಾನಕ್ಕೆ ಬಾಗಲಕೋಟೆ, ಬಿಜಾಪುರ, ರಾಯಚೂರು, ಕೊಪ್ಪಳ, ಧಾರವಾಡ, ಹಾವೇರಿ, ಗದಗ್, ಬಳ್ಳಾರಿ, ಗುಲ್ಬರ್ಗಾ, ಯಾದಗಿರಿ, ಚಿತ್ರದುರ್ಗ, ಶಿವಮೊಗ್ಗ ಮತ್ತು ದಾವಣಗೆರೆಯಲ್ಲಿ ಜಿಲ್ಲಾ ಯೋಜನಾ ಅನುಷ್ಠಾನ ಕಚೇರಿಗಳನ್ನು ತೆರೆಯಲಾಗಿದೆ.
* ಮೇಲ್ಕಾಣಿಸಿದ ೧೪ ಜಿಲ್ಲೆಗಳಲ್ಲಿ ಈ ಪದ್ಧತಿಯ ಸಂಪೂರ್ಣ ತಡೆಗಟ್ಟುವಿಕೆ ಹಾಗೂ ಮಾಜಿ ದೇವದಾಸಿಯರ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನ ನಿಗಮದ ಮುಖ್ಯ ಕಾರ್ಯಕ್ಷೇತ್ರವಾಗಿರುತ್ತದೆ.
* ಈ ಪದ್ಧತಿಯ ವಿರುದ್ಧ ವ್ಯಾಪಕ ಪ್ರಚಾರ, ಜನಾಂದೋಲನ, ಮಾಜಿ ದೇವದಾಸಿಯರ ಸ್ವ–ಸಹಾಯ ಗುಂಪುಗಳ ರಚನೆ, ಕಾನೂನು ಅರಿವು ಜಾತ್ರಾ ಜಾಗೃತಿ ಶಿಬಿರ, ಆರೋಗ್ಯದಾಯಕ್ಕೆ ಆರೋಗ್ಯ ತಪಾಸಣೆ ಮುಂತಾದ ಸಾಮಾಜಿಕ ಕಾರ್ಯಕ್ರಮಗಳ ಮೂಲಕ ಅರಿವು ಮೂಡಿಸುವಿಕೆ.
* ಆದಾಯ ಉತ್ಪನ್ನಕರ ಚಟುವಟಿಕೆಗಳಿಗಾಗಿ ಯೋಜನಾ ವೆಚ್ಚ ರೂ. ೨೦,೦೦೦/–ಗಳಲ್ಲಿ ಶೇ. ೫೦ರಷ್ಟು ನಿಗಮದಿಂದ ಸಹಾಯಧನ ಹಾಗೂ ಉಳಿದ ಮೊತ್ತ ಬ್ಯಾಂಕ್ ಮುಖಾಂತರ ಸಾಲ ನೀಡಲಾಗುವುದು.
* ೨೦೦೭–೦೮ನೇ ಸಾಲಿನ ಸಮೀಕ್ಷಾ ಪಟ್ಟಿಯು ಸರ್ಕಾರದ ಹಂತದಲ್ಲಿ ಅನುಮೋದನೆಗೊಂಡ ನಂತರ ಹಂತ ಹಂತವಾಗಿ ಮಾಜಿ ದೇವದಾಸಿ ಮಹಿಳೆಯರಿಗೆ ಆದಾಯ ಉತ್ಪನ್ನಕರ ಚಟುವಟಿಕೆಗಳಿಗೆ ಸಹಾಯಧನ, ಮಾಸಾಶನ ಮತ್ತು ವಸತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಕಿರುಸಾಲ ಯೋಜನೆ :** ಮಾಜಿ ದೇವದಾಸಿ ಮಹಿಳೆಯರಿಂದ ರಚಿತವಾದ ಸ್ವ–ಸಹಾಯ ಗುಂಪಿನ ಸದಸ್ಯರಿಗೆ ರೂ. ೫,೦೦೦/–ದಿಂದ ರೂ. ೧೫,೦೦೦/– (ಗರಿಷ್ಠ) ಶೇಕಡ ೬ರ ಬಡ್ಡಿ ದರದಲ್ಲಿ ೨೪ ತಿಂಗಳುಗಳ ಮರುಪಾವತಿಯ ಷರತ್ತಿನೊಂದಿಗೆ ನೀಡಲಾಗುವುದು.

**ಮಾಜಿ ದೇವದಾಸಿ ಮಹಿಳೆಯರಿಗೆ ಮಾಸಾಶನ :** ಮಾಜಿ ದೇವದಾಸಿ ಮಹಿಳೆಯರು ಪುನರ್ವಸತಿಗಾಗಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ದೇವದಾಸಿ ಪುನರ್ವಸತಿ ಕಾರ್ಯಕ್ರಮ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದೆ. ೨೦೦೭–೦೮ನೇ ಸಾಲಿನಿಂದ ಜಾರಿಗೆ ಬರುವಂತೆ ಕರ್ನಾಟಕ ಸರ್ಕಾರವು ಅದರಂತೆ ಮಾಸಾಶನ ನೀಡಲಾಗುತ್ತದೆ. ಸಮೀಕ್ಷೆ ಪ್ರಕಾರ ಗುರುತಿಸಿರುವ ೪೬,೬೬೦/– ಮಾಜಿ ದೇವದಾಸಿಯಲ್ಲಿ ೪೫ ವರ್ಷ ಮೇಲ್ಪಟ್ಟ ೨೮,೧೨೫ ದೇವದಾಸಿಯರಿಗೆ ಹಾಲಿ ರೂ. ೫೦೦/–ರಂತೆ ಮಾಸಾಶನ ನೀಡಲಾಗುತ್ತಿದೆ.

ಹೆಚ್ಚಿನ ಮಾಹಿತಿಗಾಗಿ ಆಯಾ ಜಿಲ್ಲೆಯ ಸಹಾಯಕ ನಿರ್ದೇಶಕರು/ಉಪ ನಿರ್ದೇಶಕರು. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಥವಾ ನಿಗಮದ ಕೇಂದ್ರ ಕಛೇರಿಯನ್ನು ಸಂಪರ್ಕಿಸಬಹುದು.

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ತನು, ರವಿ ಹೆಗ್ಗಡಿ, ಕಮಲಂ ಅರಸು, ಸ್ಮಿತಾ ಕೌಶಿಕ್, ಜಿಎಂಬೊ

**ಮುಖಪುಟ :** ೨೦೧೫ರ 'ಚಿತ್ರಸಂತೆ'ಯಲ್ಲಿ ಗಮನ ಸೆಳೆದ ಎಲ್. ಎಸ್. ಕಾಳೆ ಅವರ ಒಂದು ಕಲಾಕೃತಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಮರುಮತಾಂತರದ ಅವಾಂತರ ಈಗ. ಇದರಿಂದ ಅಲ್ಪಸಂಖ್ಯಾತ ಅನ್ಯಧರ್ಮೀಯರು ಕಂಗಾಲಾಗಿದ್ದಾರೆ. ಸಂಘಪರಿವಾರದ ಅಂಗಸಂಸ್ಥೆಗಳಾದ ಬಜರಂಗದಳ, ವಿಶ್ವ ಹಿಂದೂ ಪರಿಷತ್ತು ಮೊದಲಾದ ಹಿಂದುತ್ವಪರ ಸಂಘಟನೆಗಳು ಇದರಲ್ಲಿ ಮುಂದಳದಲ್ಲಿವೆ. ಹೊಸ ಹೊಸ ಘೋಷಣೆಗಳನ್ನು – ಮರಳಿ ಮನೆಗೆ (ಘರ್ ವಾಪಸಿ), ಮಗಳನ್ನು ಕಾಪಾಡಿ, ಸೊಸೆಯನ್ನು ತನ್ನಿ (ಬೇಟಿ ಬಚಾವ್, ಬಹೂ ಲಾವ್) ಇತ್ಯಾದಿ – ಹೆಣೆಯುತ್ತಿವೆ. ಮರುಮತಾಂತರವನ್ನು ಒಂದು ವ್ಯಾಪಕ ಚಳವಳಿಯಾಗಿ ಬೆಳೆಸಲು ಹೊರಟಿವೆ. ಮತಾಂತರ, ಮರುಮತಾಂತರ ಇಂಥವೆಲ್ಲ ಹಿಂಸಾಚಾರಕ್ಕೆ ಎಡೆಕೊಡುತ್ತವೆ. ಇದು ಹೊಸದೇನಲ್ಲ ಭಾರತದ ಮಟ್ಟಿಗೆ. ಕೇಂದ್ರದಲ್ಲಿ ಭಾಜಪ ನೇತೃತ್ವದ ಸರಕಾರ ಸ್ಥಾಪನೆಯಾಗುತ್ತಿದ್ದಂತೆಯೇ ಹಿಂದುತ್ವಪರ ಸಂಘಟನೆಗಳು ಹೊಸ ಚೇತನ ಪಡೆದುಕೊಂಡವು. ಆರೆಸ್ಸೆಸ್‌ಸರ ಸಂಘಚಾಲಕ ಮೋಹನ್ ಭಾಗವತ್ ಭಾಜಪದ ನರೇಂದ್ರ ಮೋದಿ ಅಧಿಕಾರ ಸ್ವೀಕರಿಸುತ್ತಿದ್ದ ಹಾಗೇ ಅನ್ಯಧರ್ಮೀಯರಿಗೆ ಎಚ್ಚರಿಕೆ ನೀಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಇದುವರೆಗೆ ನೈತಿಕ ಪೊಲೀಸರಂತೆ ನಡೆದುಕೊಳ್ಳುತ್ತಿದ್ದ ಹಿಂದುತ್ವಪರ ಸಂಸ್ಥೆಗಳು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮರುಮತಾಂತರ ಸಂಘಟಿಸುತ್ತಿವೆ. ದೇಶದ ಹಲವೆಡೆ ಹಮ್ಮಿಕೊಂಡು ನಡೆಸಿದ ಈ ಕಾರ್ಯಾಚರಣೆ ಪಾರ್ಲಿಮೆಂಟಿನ ಉಭಯ ಸದನಗಳ ಕಲಾಪವನ್ನೂ ನುಂಗಿಹಾಕಿತು. ಪ್ರಧಾನ ಮಂತ್ರಿ ನರೇಂದ್ರ ಮೋದಿ ಈ ವಿಚಾರದಲ್ಲಿ ಪೂರ್ಣ ಮೌನ. ಭಾಜಪದ ವಕ್ತಾರರು, ಪಾರ್ಲಿಮೆಂಟ್ ಸದಸ್ಯರುಗಳು, ಸಚಿವರು ಒಂದು ಬಗೆಯಲ್ಲಿ ಮರುಮತಾಂತರವನ್ನು ಸಮರ್ಥಿಸಿಕೊಂಡಿದ್ದಾರೆ. ಇನ್ನೊಂದೆಡೆ ತಮಗೂ ಹಿಂದುತ್ವಪರ ಸಂಘಟನೆಗಳ ಚಟುವಟಿಕೆಗಳಿಗೂ ಏನೂ ಸಂಬಂಧವಿಲ್ಲ ಎಂದು ವಾದಿಸಿದ್ದಾರೆ. ಅಲ್ಲದೆ, ಮತಾಂತರ ನಿಷೇಧ ಮಸೂದೆ ತರುವ ವಿಚಾರ ಮಂಡಿಸುತ್ತಿದ್ದಾರೆ. ಸಂವಿಧಾನದಲ್ಲಿ ನೀಡಿರುವ ಮತೀಯ ಸ್ವಾತಂತ್ರ್ಯವನ್ನೇ ಎಂದರೆ, ತಮಗೆ ಬೇಕಾದ ಮತವನ್ನು ಆಯ್ಕೆಮಾಡಿಕೊಳ್ಳಲು ನಾಗರಿಕರಿಗೆ ಇರುವ ಹಕ್ಕನ್ನು ತೊಡೆದುಹಾಕಲು ಭಾಜಪ ಸರಕಾರ ಪ್ರಯತ್ನಿಸುತ್ತಿದೆ. ಹಿಂದುತ್ವಪರ ಸಂಘಟನೆಗಳಿಗೆ ಬೇಕಾಗಿರುವುದು ಕೂಡ ಇಂಥ ಒಂದು ಕಾನೂನು. ಅಭಿವೃದ್ಧಿ ಮಂತ್ರ ಜಪಿಸಿ ಅಧಿಕಾರಕ್ಕೇರಿರುವ ಮೋದಿ ಸರಕಾರ ದೇಶದಲ್ಲಿ ಒಡಕುಂಟುಮಾಡುವ ಪ್ರಕ್ರಿಯೆಗೆ ಕುಮ್ಮಕ್ಕು ನೀಡುತ್ತಿದೆ. ಇದಕ್ಕೆ ಮರುಮತಾಂತರ ಸೃಷ್ಟಿಸಿರುವ ಆತಂಕವೇ ಸಾಕ್ಷಿ.

ಸಂಖ್ಯಾಬಲ ವರ್ಧನೆಗಾಗಿ ಪ್ರಮುಖವಾಗಿ ಇಸ್ಲಾಮ್ ಮತ್ತು ಕ್ರೈಸ್ತ ಧರ್ಮೀಯರು ನಾನಾ ಬಗೆಯ ಆಮಿಷಗಳನ್ನು ಒಡ್ಡಿ, ಬಲವಂತವಾಗಿ ಹಿಂದೂಗಳನ್ನು ಮತಾಂತರಗೊಳಿಸುತ್ತಾರೆ ಎಂಬ ಆರೋಪ ಬಹಳ ಹಿಂದಿನಿಂದ ಬಂದದ್ದು. ಹತ್ತು ಹಲವು ಕಾರಣಗಳಿಂದ ಜನ ಅನ್ಯಧರ್ಮವನ್ನು ಸ್ವೀಕರಿಸುತ್ತ ಬಂದಿದ್ದಾರೆ. ಹಿಂದೂಧರ್ಮ ಎಂದು ಕರೆಯುವ ಬಹುಸಂಖ್ಯಾತರ ಭಾರತದಲ್ಲಿರುವ ಜಾತಿಪದ್ಧತಿ, ಅದರೊಂದಿಗೆ ಬಂದಿರುವ ತಾರತಮ್ಯತೆ, ಮೇಲುಕೀಳೆಂಬ ಭಾವನೆ, ಅಸ್ಪೃಶ್ಯತೆ ಇವು ಎಷ್ಟು ಕಾರಣ ಎಂಬುದನ್ನು ನಿಖರವಾಗಿ ಹೇಳಬರುವುದಿಲ್ಲ. ಆದರೆ ಅದೂ ಒಂದು ಮುಖ್ಯ ಕಾರಣ ಎಂಬುದು ಸ್ಪಷ್ಟ. ಮತ್ತೆ ಮತಾಂತರ ಗೊಂಡವರಲ್ಲಿ ಹೆಚ್ಚಿನವರು ಕಡುಬಡವರು. ಹಿಂದೂ ಧರ್ಮದಲ್ಲಿ ಬೇರೂರಿರುವ ಜಾತಿವ್ಯವಸ್ಥೆಯನ್ನು ತೊಡೆದುಹಾಕುವುದಕ್ಕೆ ಇತಿಹಾಸ ದುದ್ದಕ್ಕೂ ಬೇಕಾದಷ್ಟು ಪ್ರಯತ್ನಗಳು ನಡೆದಿವೆ. ಆದರೆ ಯಾವುದೂ ಫಲಕಾರಿಯಾಗಲಿಲ್ಲ ಎಂಬುದು ವಾಸ್ತವ. ಹಾಗಾಗಿ ಇಪ್ಪತ್ತೊಂದನೇ ಶತಮಾನದಲ್ಲೂ ಅದು ಮುಂದುವರಿಯುತ್ತಿದೆ. ಈ ಮರುಮತಾಂತರಕ್ಕೆ ಒಳಗಾಗುತ್ತಿರುವವರು ಕೂಡ ಬಡಜನರೇ. ಇದು ಗಮನಿಸಬೇಕಾದ ಸಂಗತಿ.

*(೭ನೇ ಪುಟಕ್ಕೆ)*




ಸಂಪುಟ-೧೬ ಸಂಚಿಕೆ-೭ ಫೆಬ್ರವರಿ ೨೦೧೫

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

■ *ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



## ಸಂಪಾದಕೀಯ

# ವಿಜ್ಞಾನದಲ್ಲಿ ಶಿಸ್ತು ಮತ್ತು ಪ್ರಗತಿ

**೨೦೧೫**ರ ಆರಂಭ ಬಹಳ ಅಶುಭವಾಯಿತು. ಮುಂಬೈನಲ್ಲಿ ನಡೆದ ವಿಜ್ಞಾನಿಗಳ ಸಮ್ಮೇಳನದಲ್ಲಿ ಅಸಂಬದ್ಧ ಪ್ರಲಾಪ, ಪ್ರಾಚೀನ ತಂತ್ರಜ್ಞಾನದ ಬಾಲಿಶ ನಿರೂಪಣೆ, ಇವನ್ನೆಲ್ಲಾ ಕಂಡರೆ ವಿಜ್ಞಾನವನ್ನು ಅಜ್ಞಾನದೊಂದಿಗೆ ಸಮೀಕರಿಸುವ ಶೋಚನೀಯ ಸ್ಥಿತಿಯನ್ನು ಮುಟ್ಟಿದೆವೆಂದು ಖೇದವು ಆವರಿಸುತ್ತದೆ. ಕೇಂದ್ರ ಸಚಿವರನ್ನು ಕರೆದು ವಿಜ್ಞಾನದ ಬೋಧೆ ಪಡೆದ ವಿಜ್ಞಾನಿಗಳು, ಸಮ್ಮೇಳನದ ಆಯೋಜಕರು, ವಿಜ್ಞಾನವೆಂದರೆ ಒಂದು ಆಟಿಕೆಯೆಂಬಂತೆ ನಡೆದುಕೊಂಡಿದ್ದು ಖಂಡನೀಯ. ಮುಂಬೈ ವಿಶ್ವವಿದ್ಯಾನಿಲಯವು ಇಷ್ಟು ಕಳಪೆಯ ಜ್ಞಾನದೇಗುಲ ಎನಿಸಿಕೊಳ್ಳಬಾರದಾಗಿತ್ತು. ಸರ್ಕಾರದ ವರದಾನಕ್ಕೆ ಗಿಂಜುವ ಪರಿಸ್ಥಿತಿಗೆ ವಿಜ್ಞಾನಿಗಳು ಇಳಿದಿದ್ದು ಕ್ಷಮಾರ್ಹವಲ್ಲ. ಪುರಾಣದ ಕತೆಗಳಿಗೂ ವೈಜ್ಞಾನಿಕ ಪ್ರಯೋಗಗಳಿಗೂ ವ್ಯತ್ಯಾಸವಿಲ್ಲವೆಂಬ ಮೂರ್ಖ ಸಂದೇಶ ನೀಡಲು ಅಷ್ಟು ದೊಡ್ಡ ಸಮ್ಮೇಳನ ಆಯೋಜಿಸಬೇಕಿತ್ತೆ ?

ವಿಜ್ಞಾನದ ಲಕ್ಷಣಗಳು ಅಧ್ಯಾತ್ಮದ ಲಕ್ಷಣಗಳಂತಲ್ಲ. ವಿಜ್ಞಾನದಲ್ಲಿ ಸಾರ್ವಕಾಲಿಕ ಸತ್ಯದ ಮಾತನ್ನಾಡುವುದು ಅಪರೂಪ. 'ಇಂದಿಗೆ ಇಷ್ಟು ಸತ್ಯವೆಂದು ತಿಳಿದುಬಂದಿದೆ' ಎಂಬ ನಿಲುವು ವಿಜ್ಞಾನದ್ದು. ಅದು ತ್ರಿಕಾಲಾಬಾಧಿತವೆಂಬ ಭ್ರಾಂತಿಯನ್ನು ವಿಜ್ಞಾನವು ಪೋಷಿಸಿ ಬೆಳೆಸುವಂತಿಲ್ಲ. ಸತ್ಯದ ಹುಡುಕಾಟವು ನಿರಂತರವಾಗಿ ನಡೆಯುತ್ತಲೇ ಇರುವ ಕ್ರಿಯೆ. ಯಾವ ತಾಂತ್ರಿಕ ಸಾಧನೆಗೆ ಎಂತಹ ಜ್ಞಾನ ಎಷ್ಟು ಲಭ್ಯವಿರಬೇಕೆಂಬುದು ಹುಡುಗಾಟದ ಬುಡುಬುಡಿಕೆ ಮಾತಲ್ಲ. ಕತ್ತೆಯ ಮೂತ್ರ ಮತ್ತು ಹುರುಳಿಕಾಳು ವಿಮಾನದ ಇಂಧನವಾಗಬಲ್ಲುದೆಂದು ಹೇಳುವುದು ಪ್ರಯೋಗಗಳಿಂದ ಸಿದ್ಧವಾಗಬೇಕು. ಅದಕ್ಕೆ ಅಗತ್ಯವಾದ ಪ್ರಯೋಗಗಳಿಗೆ ಜಾವ್ಡೇಕರ್ ಮತ್ತು ಹರ್ಷವರ್ಧನ ಐದು ಕೋಟಿ ರೂಪಾಯಿಗಳನ್ನು ಕೊಟ್ಟು ಅದನ್ನು ಸಾಬೀತುಪಡಿಸಲು ಅಡ್ಡಿಯಿಲ್ಲ. ಅದನ್ನು ಮಾಡದೆ ನಾಲಿಗೆಗಳನ್ನು ಹರಿಬಿಡುವುದು ವಿಜ್ಞಾನದ ಶಿಸ್ತಿಗೆ ವಿರೋಧವಾದುದು. ತನ್ನ ಮಹಿಮೆಯ ಬಲದಿಂದ ಇಂದ್ರನು ಶಸ್ತ್ರಕ್ರಿಯೆ ನಡೆಸಿ ತುಂಡಾಗಿರುವ ಶರೀರ ಭಾಗಗಳನ್ನು ಸೇರಿಸುತ್ತಾನೆಂದು ಋಗ್ವೇದದಲ್ಲಿದೆ (೮.೧.೧೨). ರಕ್ತದ ತೊಟ್ಟು ಬೀಳುವ ಮೊದಲೇ ಅದನ್ನವನು ಮಾಡಿ ಮುಗಿಸಿಬಿಡುತ್ತಾನೆ. ಇದು ಅವನ ಶ್ಲಾಘನೆಯ ಮಾತೇ ವಿನಾ ಪ್ರಾಯೋಗಿಕ ಜ್ಞಾನವಲ್ಲ. ಅದನ್ನು ನಂಬಿದರೂ ಪ್ರಯೋಜನವಿಲ್ಲ, ಏಕೆಂದರೆ ಇಂದು ವೈದ್ಯಕೀಯ ವಿದ್ಯಾರ್ಥಿಗಳಿಗೆ ಆ ತಂತ್ರಜ್ಞಾನವನ್ನು ಹೇಳಿಕೊಡಲು ನಮಗೆ ಗೊತ್ತಿಲ್ಲ. ಕೇವಲ ಪ್ರಾಚೀನರ ತಥಾಕಥಿತ ಸಾಧನೆಗಳನ್ನು ನಮ್ಮ ಹೆಮ್ಮೆ ಎಂದು ಬೀಗುತ್ತಾ ಮಂಗಳಗ್ರಹಕ್ಕೆ ಹೋಗಲಾಗುವುದಿಲ್ಲ. ವೃಥಾ ಹೆಮ್ಮೆಪಟ್ಟುಕೊಂಡು ಯಾವ ಸಂಶೋಧನೆ ಕೈಗೊಳ್ಳುತ್ತೇವೆ ?

೨೦೦೩ರಲ್ಲಿ ಬ್ರಿಟನ್ ಒಂದು ಅಂತರಿಕ್ಷಯಾನವನ್ನು ಮಂಗಳಗ್ರಹಕ್ಕೆ ರವಾನಿಸಿತ್ತು. ಅದು ಎಲ್ಲಿ ಹೋಯಿತೋ ತಿಳಿದಿರಲಿಲ್ಲ. ಡಾರ್ವಿನ್ನನ ಹಡಗಿನ ಹೆಸರನ್ನು ಅದಕ್ಕಿಡಲಾಗಿತ್ತು. ಆ "ಬೀಗಲ್" ಇತ್ತೀಚೆಗೆ ನಾಸಾದ ಕ್ಯಾಮೆರಾ ಕಣ್ಣಿಗೆ ಬಿದ್ದಿದೆ. ೯೦೦೦ ವರ್ಷಗಳ ಹಿಂದೆ ಭಾರತದ ಮೇಧಾವಿಗಳು ರವಾನಿಸಿದ್ದ ಆಕಾಶಯಾನವು ಮುಂದೆಂದಾದರೂ ಒಂದು ಕ್ಯಾಮೆರಾದ ಕಣ್ಣಿಗೆ ಬೀಳುತ್ತದೇನೋ, ಕಾದು ನೋಡೋಣ. ಆದರೆ ಆ ತಂತ್ರಜ್ಞಾನವು ಗೊತ್ತಿಲ್ಲದಿರುವಾಗ ಇಂದಿನ ಇಸ್ರೋ ವಿಜ್ಞಾನಿಗಳು ಯಾವ ಪಾಠವನ್ನೂ ಹೇಳಿಕೊಡಲಾಗುವುದಿಲ್ಲ. ಲೋಹಸರ್ವಸ್ವ ಎಂಬ ಗ್ರಂಥದಲ್ಲಿ ಸುವರ್ಣವು ಹೇಗೆ ಉತ್ಪತ್ತಿಯಾಯಿತೆಂದು ಹೇಳಲಾಗಿದೆ. ಮಾನ್ಯ ನರೇಂದ್ರ ಮೋದಿಯವರು ಅದನ್ನು ಗಮನಿಸಲು ಅಡ್ಡಿಯಿಲ್ಲ. ಸಪ್ತರ್ಷಿಗಳ ಪತ್ನಿಯರನ್ನು ಕಂಡು ಅಗ್ನಿಯು ಅವರ ಯೌವನಕ್ಕೆ ಮನಸೋತನಂತೆ, ತಕ್ಷಣ ಅವನಿಗೆ ವೀರ್ಯಸ್ಖಲನವಾಯಿತು. ಭೂಮಿಗೆ ಬಿದ್ದ ಆ ರೇತಸ್ಸು ಚಿನ್ನವಾಯಿತು (ಶ್ಲೋಕ ೧೦೩–೪). ಗಣೇಶನ ಆನೆಯ ತಲೆ ಮತ್ತು ಈ ಚಿನ್ನ, ಎರಡೂ ಕಲ್ಪನೆಗಳೇ. ಖನಿಜಗಳು ಹೇಗೆ ಅಸ್ತಿತ್ವಕ್ಕೆ ಬಂದುವೆಂಬ ವಿಸ್ಮಯಕ್ಕೆ ಇದೊಂದು ಭ್ರಾಮಕ ವಿವರಣೆ. ಅದು ಮುಖ್ಯವಲ್ಲ, ಆದರೆ ಪ್ರಾಯೋಗಿಕ ತಂತ್ರಜ್ಞಾನವನ್ನು ದಾಖಲಿಸಿರುವ ಗ್ರಂಥಗಳ ಅಧ್ಯಯನ, ಅಲ್ಲಿಯ ಪ್ರಮೇಯಗಳನ್ನು ಪ್ರಯೋಗಗಳಿಂದ ಗಟ್ಟಿಗೊಳಿಸಿಕೊಳ್ಳುವುದು, ಮುಖ್ಯ. ಬೋಡಸ್ (ಬೋಗಸ್ ?) ಮಹಾಶಯನಿಗೆ ಒಂದು ಕೋಟಿ ರೂಪಾಯಿಯ ಯೋಜನೆ ನೀಡಿ ವಿಮಾನವನ್ನು ೧೦ ಮೀಟರ್ ಎತ್ತರದಲ್ಲಿ ೧೦ ಮೀಟರ್ ಮುಂದಕ್ಕೆ ಹೋಗುವಂತೆ ಮಾಡಲು ಹೇಳಬೇಕು. ಯಶಸ್ವಿಯಾದರೆ ಪ್ರಯೋಗವನ್ನು ಏರೊನಾಟಿಕ್ಸ್ ಪ್ರಯೋಗಾಲಯದಲ್ಲಿ ಉನ್ನತಮಟ್ಟಕ್ಕೆ ಕೊಂಡೊಯ್ಯಬಹುದು. ವಿಜ್ಞಾನದ ಶಿಸ್ತಿನಲ್ಲಿ ಪ್ರಗತಿಯೆಂದರೆ ಹಾಗೆ ಜರುಗುತ್ತದೆ.

*ಗೋಭಿಲ ಗೃಹ್ಯಸೂತ್ರದಲ್ಲಿ* "ಮನೆಯ ಪೂರ್ವಕ್ಕೆ ಅಶ್ವತ್ಥ, ದಕ್ಷಿಣಕ್ಕೆ ಪ್ಲಕ್ಷ, ಪಶ್ಚಿಮಕ್ಕೆ ನ್ಯಗ್ರೋಧ ಮತ್ತು

ಉತ್ತರಕ್ಕೆ ಉದುಂಬರ ಕೂಡದು; ಅಶ್ವತ್ಥದಿಂದ ಬೆಂಕಿ, ಪ್ಲಕ್ಷದಿಂದ ಅಕಾಲ ಮರಣ, ನ್ಯಗ್ರೋಧದಿಂದ ಹಿಂಸೆ, ಉದುಂಬರದಿಂದ ಕಣ್ಣಿನ ರೋಗ ಉಂಟಾಗುತ್ತವೆ" (೪.೭.೨೨–೨೩) ಎಂದು ಹೇಳಿದೆ. ಯಾವುದಾದರೂ ಕೃಷಿ ವಿಶ್ವವಿದ್ಯಾನಿಲಯವು ಇದನ್ನು ಪ್ರಾಯೋಗಿಕವಾಗಿ ಸಿದ್ಧಪಡಿಸಬೇಕು ಇಲ್ಲವೆ ತಳ್ಳಿಹಾಕಬೇಕು. ವೃಕ್ಷಾಯುರ್ವೇದದ 'ಉಪವನ ವಿನೋದ' ಎಂಬ ಅಧ್ಯಾಯದಲ್ಲಿ (ಪದ್ಯ ೮೧–೮೨) "ಸಸಿಗಳಿಗೆ ಹಾನಿಕಾರಕವಾದ ಪ್ರಾಣಿಗಳನ್ನು ನಾಶಮಾಡಲು ಒಂದು ಮಂತ್ರವನ್ನು ತಾಮ್ರ ಪತ್ರದಲ್ಲಿ ಬರೆದು ಭೂಮಿಯಲ್ಲಿ ಹೂತಿಡಬೇಕು" ಎಂದು ಹೇಳಲಾಗಿದೆ. ಈ ಪ್ರಯೋಗ ನಡೆಸಲು ಏನಡ್ಡಿ ಇದೆ ? ಅದನ್ನು ಮಾಡದೆ ಈ ಹೇಳಿಕೆಯನ್ನು ಸ್ವೀಕರಿಸಲಾಗಲಿ ನಿರಾಕರಿಸಲಾಗಲಿ ಆಗುವುದಿಲ್ಲ. ಅಂದರೆ, ವೈಜ್ಞಾನಿಕ ಪ್ರಗತಿಯ ಹಾದಿಯಲ್ಲಿ ಪ್ರಯೋಗಗಳು ಮೂಲಭೂತವಾದವು. ಉದ್ದಾಲಕ ಆರುಣಿ ಅದನ್ನು ಮಾಡಿ ತೋರಿಸಿದ್ದ. ಅದನ್ನು ಮಾಡದೆ ವಿಜ್ಞಾನ ಸಮ್ಮೇಳನದಲ್ಲಿ ತಲೆಗೆ ತೋಚಿದ್ದನ್ನೆಲ್ಲಾ ಕಕ್ಕುವುದು ಅನಾರೋಗ್ಯಕರ. ಅಲ್ಲಿ ಮಂಡಿಸಲಾಗುವ ಪ್ರಬಂಧಗಳನ್ನು ಮೊದಲೇ ನೋಡಿ ಮಾಪನ ಮಾಡಬೇಕಾಗಿತ್ತಲ್ಲವೆ ? ಯಾವ ಪ್ರಭಾವಕ್ಕೆ ಮಣಿದು ಸಮ್ಮೇಳನದ ಸಂಯೋಜಕರು ಈ ಸೂತ್ರವನ್ನು ಬದಿಗೆ ಸರಿಸಿದರು ? ಆ ಬಗ್ಗೆ ತನಿಖೆ ನಡೆಯಬೇಕು. ನಿಷ್ಠಾವಂತ ವಿಜ್ಞಾನಿಗಳು ತಲೆ ತಗ್ಗಿಸುವಂತಹ ಸಂದರ್ಭವನ್ನು ಉಂಟುಮಾಡಿದ ಸಂಯೋಜಕರು ನಿಜಕ್ಕೂ ಶಿಕ್ಷಾರ್ಹರು, ಏಕೆಂದರೆ ಅವರು ವಿಜ್ಞಾನದ ಮೂಲ ಲಕ್ಷಣವನ್ನು ಹಾಳುಮಾಡಿದ್ದಾರೆ ಮತ್ತು ವಿಜ್ಞಾನದ ಪ್ರಗತಿಗೆ ಮಾರಕವಾದ ವಿಧಾನಗಳನ್ನು ಬೆಂಬಲಿಸಿದ್ದಾರೆ.

ಪ್ರಾಚೀನ ಭಾರತದಲ್ಲಿ ವೈಜ್ಞಾನಿಕ ಶಿಸ್ತು ಮತ್ತು ಪ್ರಗತಿ ಹೇಗೆ ಸಾಗಿಬಂದುವೆಂಬುದನ್ನು ಚಾರಿತ್ರಿಕವಾಗಿ ನಿರೂಪಿಸಿರುವ ಗ್ರಂಥಗಳು ಅನೇಕವಿವೆ. ಭಾರತ ವಿಜ್ಞಾನ ಅಕಾಡೆಮಿಯು ಪ್ರಕಟಿಸಿರುವ ಗ್ರಂಥಗಳಲ್ಲದೆ "ಭಾರತೀಯ ವಿಜ್ಞಾನದ ಹಾದಿ"ಯಂತಹ ಹತ್ತಾರು ಗ್ರಂಥಗಳು ಲಭ್ಯವಿವೆ. ಯಾವ ಕ್ಷೇತ್ರಗಳಲ್ಲಿ ಸಾಧನೆಯು ಗಣನೀಯ ಪ್ರಮಾಣದಲ್ಲಿದ್ದಿತ್ತೆಂಬುದನ್ನು ವಸ್ತುನಿಷ್ಠವಾಗಿ ಇಂದಿನ ಪೀಳಿಗೆಯವರಿಗೆ ತಿಳಿಸಿಕೊಟ್ಟು ಅಂತಹ ಸಾಧನೆಯ ಪರಂಪರೆಗೆ ತಮ್ಮ ಕೊಡುಗೆ ನೀಡಲು ಪ್ರೇರಣೆ ನೀಡಿದರೆ ಸಾಕು. "ಹಿಂದೆಲ್ಲಾ ಅದ್ಭುತವಾಗಿತ್ತು" ಎಂದು ಹೇಳುತ್ತಿದ್ದು ಇಂದಿನ ವೈಜ್ಞಾನಿಕ ಅಧ್ಯಯನ ಮತ್ತು ಸಂಶೋಧನೆಗೆ ಕುಮ್ಮಕ್ಕು ಕೊಡದಿದ್ದರೆ ಆ "ಅದ್ಭುತ"ದಿಂದ ಏನು ಪ್ರಯೋಜನವಾಗುತ್ತದೆ ? ಸುಳ್ಳು ಮಾಹಿತಿಯ ಆಧಾರದ ಮೇಲೆ ಕಟ್ಟಲಾಗುವ ಹೆಮ್ಮೆಯು ಕ್ಷಣಾರ್ಧದಲ್ಲಿ ಕರಗಿ ನೀರಾಗಿಹೋಗುತ್ತದೆ. "ಮೇಕ್ ಇನ್ ಇಂಡಿಯ" ಎಂಬ ಘೋಷಣೆ ಕೊಡುವವರಿಗೆ ದೇಶದ ಮತ್ತು ಜನಗಳ ಬಗ್ಗೆ ಯಾವ ಹೆಮ್ಮೆ ಮತ್ತು ಗೌರವಗಳಿರಲು ಸಾಧ್ಯ ? ನಮ್ಮ ದೇಶದಲ್ಲಿ ನಾವು ನಮ್ಮ ಜನರಿಗಾಗಿ ಮಾಡುತ್ತೇವೆಂಬುದು ಸ್ವಾವಲಂಬನೆಯ ಕುರುಹು. ಯಾರೋ ಬಂದು ನಮ್ಮ ಮೂಲದ್ರವ್ಯವನ್ನು ಬಳಸಿಕೊಂಡು ಏನನ್ನೋ ಮಾಡಿ ಎಲ್ಲೋ ಮಾರಿ ಲಾಭ ಪಡೆದುಕೊಂಡರೆ ನಾವು ಹೆಮ್ಮೆಪಡಬಹುದಂಥದೇನಿದೆ ? ಗಣೇಶನ ಶರೀರಕ್ಕೆ ಆನೆಯ ತಲೆಯನ್ನು ಕಸಿಮಾಡುವ ಐತಿಹ್ಯಕ್ಕೂ ಇಂದಿನ ಜನವಿರೋಧಿ ನೀತಿಗೂ ಅಷ್ಟೇನೂ ವ್ಯತ್ಯಾಸವಿಲ್ಲ. ಎರಡೂ ಭ್ರಮಾತ್ಮಕ ಗ್ರಹಿಕೆಗಳೇ.

ವಿಜ್ಞಾನವನ್ನು ಶಿಸ್ತುಬದ್ಧವಾಗಿ ಅಧ್ಯಯನ ಮಾಡಲು ದೊಡ್ಡ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಮುಂದಾಗುತ್ತಿಲ್ಲವೆಂಬುದು ಆನೆಯ ತಲೆ, ೯೦೦೦ ವರ್ಷಗಳ ಹಿಂದಿನ ವಿಮಾನ, ಕರ್ಣನ ಜನನ, ಮುಂತಾದ ಕ್ಷುಲ್ಲಕ ವಿಚಾರಗಳನ್ನು ಪದೇ ಪದೇ ವೈಭವೀಕರಿಸುತ್ತಿರುವ ರಾಜಕೀಯ ನಾಯಕರಿಗೆ ತಿಳಿದಿಲ್ಲವೆ ? ತಿಳಿದಿಲ್ಲದಿದ್ದರೆ ಖ್ಯಾತ ವಿಜ್ಞಾನಿಗಳ ಜೊತೆ ಕುಳಿತು ತಿಳಿದುಕೊಳ್ಳಲು ಇವರಿಗೆಲ್ಲಾ ಏನು ಧಾಡಿ ? ನಿನ್ನೆಯ ವೈಭವದ ಕನಸು ರಮ್ಯವೋ ನಾಳಿನ ವಿಶಾಲ ತಳಹದಿಯ ವೈಜ್ಞಾನಿಕ ಸಾಧನೆಯು ರಮ್ಯವೋ ? ಅಥವಾ ಬೇರೇನಾದರೂ ಹುನ್ನಾರವಿದ್ದು, ಅದನ್ನು ಜನಸಾಮಾನ್ಯರು ಪ್ರಮುಖ ಸಂಗತಿಯಾಗಿ ಚರ್ಚಿಸದಿರಲಿ ಎಂಬ ಕಾರಣಕ್ಕೆ ಈ ಪ್ರಾಚೀನ ವೈಭವದ ಗಾಳಿಪಟ ಬಿಡುತ್ತಿದ್ದಾರೋ ? ಬಹಳ ಹಿಂದೆಯೇ ಆನೆಯ ತಲೆಯನ್ನು ಗಣೇಶನಿಗೆ ಕೊಟ್ಟ ಕೀರ್ತಿ ನಮ್ಮದು ಎಂದು ಜನರು ತಲೆದೂಗುತ್ತಿದ್ದಾಗ ನಮ್ಮ ರೈತರ ಭೂಮಿಯನ್ನು ಆ ಮುಸುಕಿನ ತೆರೆಯಲ್ಲಿ ಕಿತ್ತುಕೊಂಡು ಹೋಗುವ ದೂರದೃಷ್ಟಿಯ ಕುತಂತ್ರವೂ ಇದ್ದಿರಬಹುದೇ ? ಇಲ್ಲದಿದ್ದರೆ ಐತಿಹ್ಯಗಳಿಗೆ ಜೋತುಬಿದ್ದು ವರ್ತಮಾನದ ಶೈಕ್ಷಣಿಕ ಸವಾಲುಗಳನ್ನು ಯಾರಾದರೂ ಚಾಪೆಯ ಕೆಳಗೆ ತೂರಿಸುತ್ತಾರೆಯೆ ? ಮುಂಬೈಯಲ್ಲಿ ಸಮಾವೇಶಗೊಂಡಿದ್ದ ವಿಜ್ಞಾನಿಗಳು ತಮಗೊಂದು ನೇರ ಪ್ರಶ್ನೆಯನ್ನು ಹಾಕಿಕೊಳ್ಳಬಹುದಿತ್ತು : ಅಂತರರಾಷ್ಟ್ರೀಯ ವೈಜ್ಞಾನಿಕ ಸಂಶೋಧನಾ ನಿಯತಕಾಲಿಕೆಗಳಲ್ಲಿ ನೂರಿಪ್ಪತ್ತು ಕೋಟಿ ಜನಸಂಖ್ಯೆಯ ನಮ್ಮ ದೇಶದ ವಿಜ್ಞಾನಿಗಳ ಎಷ್ಟು ಸಂಶೋಧನಾ ಪ್ರಬಂಧಗಳು ಪ್ರಕಟವಾಗುತ್ತಿವೆ ? ನಮ್ಮ ಪದವಿ ತರಗತಿಗಳ ವಿದ್ಯಾರ್ಥಿಗಳ ತಿಳಿವಳಿಕೆ ಮತ್ತು ಪ್ರಯೋಗಶೀಲತೆಯು ಅವರ ವಯಸ್ಸಿನ ಬೇರೆ ದೇಶಗಳ ವಿದ್ಯಾರ್ಥಿಗಳ ಅವೇ ಕೌಶಲ್ಯಗಳಿಗೆ ಸಮನಾಗಿವೆಯೆ ? ಇಲ್ಲದಿದ್ದರೆ ಏಕೆ ಹಾಗಿದೆ ? ಗಣೇಶನ ತಲೆಯ ಮಾತನ್ನು ನಿಲ್ಲಿಸಿ ಈ ವಿಷಯಗಳನ್ನು ನಮ್ಮ ರಾಜಕೀಯ ನಾಯಕರು ಮತ್ತು ವಿಜ್ಞಾನ ಕ್ಷೇತ್ರದ ಸಂಯೋಜಕರು ಹಾಗೂ ಆಡಳಿತಗಾರರು ತಮ್ಮ ತಲೆಗಳಿಗೆ ತುಂಬಿಕೊಳ್ಳಬೇಕು. ಗಣೇಶನ ತಲೆಯನ್ನು ಪೂಜಿಸುವವರು ಅದು ಕಸಿಮಾಡಿರುವ ತಲೆಯೆಂದು



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಪೂಜಿಸುತ್ತಿಲ್ಲ. ಏನೋ ಸಂಪ್ರದಾಯವಿದೆ, ಅದರಂತೆ ನಡೆದುಕೊಳ್ಳುತ್ತಾರೆ. ಅದಕ್ಕೆ ವಿಜ್ಞಾನದ ಮೆರುಗನ್ನು ಮೆತ್ತಬೇಕಾಗಿಲ್ಲ. ಅದು ಮೌಢ್ಯ ಮತ್ತು ಬೇಜವಾಬ್ದಾರಿತನದ ಕೆಲಸವಾಗಿ ಹೋಗುತ್ತದೆ.

ವಿಜ್ಞಾನದ ಬಗ್ಗೆಯೇ ವೈಜ್ಞಾನಿಕವಾಗಿ ಚಿಂತನೆ ನಡೆಸದ ೯೦೦೦ ವರ್ಷಗಳ ಹಿಂದಿನ ಬುದ್ಧಿವಂತಿಕೆಯ ನೇತಾರರು ದೇಶವನ್ನೆತ್ತ ಕೊಂಡೊಯ್ಯಲು ಹಾತೊರೆಯುತ್ತಿದ್ದಾರೆ? ನಿಜವಾದ ವಿಜ್ಞಾನಿಗಳು ತಮ್ಮ ಶಿಸ್ತನ್ನು ಗೌರವದಿಂದ ನಡೆಸಿಕೊಳ್ಳುವ ಜವಾಬ್ದಾರಿಯನ್ನು ಸಹ ವಹಿಸಿಕೊಳ್ಳದಿದ್ದರೆ ಅವರು ವಿಜ್ಞಾನವನ್ನು ನಮ್ಮ ದೇಶದಲ್ಲಿ ವಿಕಸಿಸಲು ಸಹಾಯ ಮಾಡಿಯಾರೆ! ಅವರು ಅದನ್ನು ಚಿಂತಿಸದಿದ್ದರೆ ನಾವು ಜನಸಾಮಾನ್ಯರಾದರೂ ಅದನ್ನು ಗಂಭೀರವಾಗಿ ಚಿಂತಿಸೋಣ.

(ಸಹಿ)

## ಯಾರ ಹಿತಕ್ಕಾಗಿ ಅಧಿಶಾಸನದ ಮಾರ್ಗ ಅನುಸರಣೆ ?

ಬಂಡವಾಳಶಾಹಿ ಸರ್ಕಾರ ಬೃಹತ್ ಉದ್ಯಮಿಗಳು ಮತ್ತು ಕೈಗಾರಿಕೆಗಳ ಕಾರ್ಯನಿರ್ವಾಹಕ ಸಮಿತಿಗಳಾಗಿ ಕೆಲಸ ಮಾಡುತ್ತವೆ ಎಂಬುದಾಗಿ ಕಾರ್ಲ್ ಮಾರ್ಕ್ಸ್ ಹೇಳಿದ್ದಾರೆಂದು ಅಂಬೋಣ. ಅದು ಖಂಡಿತವಾಗಿ ಸತ್ಯವೂ ಹೌದು. ಸ್ವತಂತ್ರ ಭಾರತದಲ್ಲಿನ ವಿದ್ಯಮಾನಗಳನ್ನು ಅವಲೋಕಿಸಿದರೆ ಅದು ಗೋಚರವಾಗುತ್ತದೆ. ಲೋಕಸಭೆಯಲ್ಲಿ ಬಹುಮತ ವಿದ್ದರೂ ಸರಕಾರ ತರಾತುರಿಯಲ್ಲಿ ಅಧಿಶಾಸನದ ಅಂದರೆ, ಸುಗ್ರೀವಾಜ್ಞೆಯ ಮಾರ್ಗ ಅನುಸರಿಸುವುದು ಅದಕ್ಕೆ ಉದಾಹರಣೆ. ಪಾರ್ಲಿಮೆಂಟನ್ನು ರಬ್ಬರ್‌ಸ್ಟಾಂಪ್‌ನಂತೆ ಬಳಸಿಕೊಳ್ಳುವ ಚಾಳಿಯನ್ನು ಆಡಳಿತಾರೂಢ ಪಕ್ಷಗಳು ರೂಢಿಸಿಕೊಂಡಿರುವುದು ಪ್ರಜಾಪ್ರಭುತ್ವ ವ್ಯವಸ್ಥೆಗೆ ಎಸಗುತ್ತಿರುವ ಅಪಚಾರ. ಚರ್ಚೆಗೆ ಅವಕಾಶ ನೀಡದೆ, ಪೇಚಿನಿಂದ ಪಾರಾಗಲು ಅನುಸರಿಸುವ ಮಾರ್ಗವೇ ಅಧಿಶಾಸನಗಳನ್ನು ಹೊರಡಿಸುವ ಕ್ರಮ. ಲೋಕಸಭೆಯಲ್ಲಿ, ರಾಜ್ಯಸಭೆಯಲ್ಲಿ ಬೇಕಾದಷ್ಟು ಬಹುಮತವಿದ್ದ ನೆಹರೂ ಅಧಿಕಾರಾವಧಿಯಲ್ಲಿ ಕೂಡ ಅಧಿಶಾಸನದ ಮಾರ್ಗ ಅನುಸರಿಸಲಾಗಿತ್ತು. ಚರ್ಚೆಗೆ ಅವಕಾಶ ನೀಡದಿರುವ ಉದ್ದೇಶದಿಂದ. ಆಗ ಲೋಕಸಭೆಯ ಮೊದಲ ಸ್ಪೀಕರ್ ಆಗಿದ್ದ ಜಿ. ವಿ. ಮಾವಲಂಕರ್ ತುರ್ತು ಸಂದರ್ಭಗಳಿಗೆ ಮಾತ್ರ ಸೀಮಿತಗೊಳಿಸದೆ ಬೇಕೆನಿಸಿದಾಗ ಅಧಿಶಾಸನ ಹೊರಡಿಸುವ ಪ್ರವೃತ್ತಿ ಅಪಾಯಕಾರಿ ಎಂದು ಸ್ವತಃ ಪ್ರಧಾನಿ ನೆಹರೂರವರನ್ನು ಎಚ್ಚರಿಸಿದ್ದರು. ಆಗಲೇ, ಅಂದರೆ ನೆಹರೂ ಅಧಿಕಾರಾವಧಿಯಲ್ಲೇ ಐವತ್ತಕ್ಕೂ ಹೆಚ್ಚು ಅಧಿಶಾಸನಗಳನ್ನು ಹೊರಡಿಸಲಾಗಿತ್ತು. ಹಾಗೆ ಹೊರಡಿಸಿರುವ ಬಹುತೇಕ ಅಧಿಶಾಸನಗಳು ಜನಪರವೇನಲ್ಲ; ಅಧಿಕವಾಗಿ ಬಂಡವಾಳಗಾರರಿಗೆ, ಜಮೀನುದಾರರಿಗೆ, ಶ್ರೀಮಂತವರ್ಗಗಳಿಗೆ ಅನುಕೂಲ ಮಾಡಿಕೊಡುವುದಕ್ಕಾಗಿಯೆ ಬಂದಂಥವು ಅವು. ಈ ಪ್ರವೃತ್ತಿ ಹಾಗೇ ಮುಂದುವರಿದರೆ ಸರ್ವಾಧಿಕಾರಕ್ಕೆಡೆ ಕೊಡುತ್ತದೆ.

ಅಧಿಕಾರ ವಹಿಸಿಕೊಂಡ ಕೇವಲ ಎಂಟು ತಿಂಗಳ ಅವಧಿಯಲ್ಲಿ ಭಾಜಪ ನೇತೃತ್ವದ ಮೋದಿ ಸರಕಾರ ಹತ್ತಾರು ಅಧಿಶಾಸನಗಳನ್ನು ಹೊರಡಿಸಿದೆ. ಮುಖ್ಯವಾಗಿ ರಾಜ್ಯಸಭೆಯಲ್ಲಿ ಬಹುಮತ ಇಲ್ಲದೆ ಆಡಳಿತ ಪಕ್ಷ ತಿಣಕಾಡುತ್ತಿದೆ. ಜಂಟಿ ಅಧಿವೇಶನ ಕರೆದು, ಚರ್ಚೆಗೆ ಅವಕಾಶ ನೀಡಿ, ಮಸೂದೆಯ ಜರೂರು ಅಗತ್ಯವನ್ನು ಸಾಬೀತುಮಾಡಿ ಅಂಗೀಕಾರ ಪಡೆಯುವುದು ಪ್ರಜಾಪ್ರಭುತ್ವ ಮಾರ್ಗ. ಅದನ್ನು ಬದಿಗೊತ್ತಿ ಅನ್ಯಮಾರ್ಗ ಅರಸುವುದು ಸಲ್ಲ. ಭಾಜಪ ಸರಕಾರ ಚಳಿಗಾಲದ ಅಧಿವೇಶನ ಮುಗಿಯುತ್ತಿದ್ದ ಹಾಗೆಯೇ ಇನ್ಶೂರೆನ್ಸ್, ಭೂಸ್ವಾಧೀನ ಮತ್ತು ಕಲ್ಲಿದ್ದಲ ಗಣಿಗಾರಿಕೆ ಹರಾಜು ಕುರಿತು ಅಧಿಶಾಸನ ಗಳನ್ನು ಹೊರಡಿಸಿದೆ ಇತರವುಗಳ ಬಗೆಗೆ, ಚಳಿಗಾಲದ ಅಧಿವೇಶನದಲ್ಲಿ ಕಲಾಪಗಳು ನಡೆಯದೇ ಏನಿರಲಿಲ್ಲ. ಸುಮಾರು ೧೨ ಮಸೂದೆಗಳು ಉಭಯಸದನಗಳಲ್ಲೂ ಅನುಮೋದನೆಯಾಗಿದ್ದುವು. ಈಗ ಸುಗ್ರೀವಾಜ್ಞೆಯ ಮುಖಾಂತರ ಜಾರಿಗೆಬಂದಿರುವ ಮಸೂದೆಗಳ ಪೈಕಿ ಮೂರು ಮಸೂದೆಗಳು ಬಹುಮುಖ್ಯವಾದವು. ಸರಕಾರ ಸುಗ್ರೀವಾಜ್ಞೆ ಮಾರ್ಗ ಅನುಸರಿಸುವ ಬದಲು ಜಂಟಿ ಅಧಿವೇಶನವನ್ನು ಕರೆಯಬಹುದಾಗಿತ್ತು, ಅತ್ಯಂತ ಜರೂರಾಗಿದ್ದಲ್ಲಿ. ಈ ಮೂರೂ ಮಸೂದೆಗಳು ಕೂಡ ಕಾರ್ಪೊರೇಟ್ ವಲಯಕ್ಕೆ ಅನುಕೂಲವಾಗುವಂಥವೆ. ಪ್ರಾಯಶಃ ಮೋದಿ ಸರಕಾರಕ್ಕೆ ಚರ್ಚೆ ಅನಗತ್ಯ ಎನಿಸಿರಬೇಕು, ಅದಕ್ಕೇ ಬೇರೆ ಮಾರ್ಗ ಅನುಸರಿಸಿದೆ. ಕಾರ್ಪೊರೇಟ್ ವಲಯದ ಪೂರ್ಣ ಬೆಂಬಲದಿಂದ ಅಧಿಕಾರಕ್ಕೆ ಬಂದಿರುವ ಭಾಜಪ ಸರಕಾರ ಕೃತಜ್ಞತಾಪೂರ್ವಕವಾಗಿ ಅದಕ್ಕೆ ನೀಡಿರುವ ಕಾಣಿಕೆಯೇ ಈ ಮೂರು ಅಧಿಶಾಸನಗಳು ಎಂದರೆ ಸರಿಯಾಗುತ್ತದೆ.

ಇನ್ಶೂರೆನ್ಸ್ ತಿದ್ದುಪಡಿ ಕಾಯಿದೆಯಲ್ಲಿ ವಿದೇಶಿ ಬಂಡವಾಳದ ಪರಿಮಿತಿಯನ್ನು ಶೇ. ೨೬ರಿಂದ ೪೯ಕ್ಕೇರಿಸುವುದಕ್ಕೆ ಅವಕಾಶ ಮಾಡಲಾಗಿದೆ. ಇದು ಇನ್ಶೂರೆನ್ಸ್ ವಲಯವನ್ನು ಸಂಪೂರ್ಣವಾಗಿ ಖಾಸಗೀಕರಣ ಮಾಡುವುದಕ್ಕೆ ಪೂರ್ವಸಿದ್ಧತೆ. ಇದು ಬಹುಚರ್ಚಿತವಾಗಿರುವ, ಯುಪಿಎ ಸರಕಾರಾವಧಿಯಲ್ಲೇ ತರಲಾಗಿದ್ದ ತಿದ್ದುಪಡಿ. ಮನಮೋಹನ ಸಿಂಗ್ ಸರಕಾರ ಮಾಡಿದ್ದನ್ನೇ ಮೋದಿ ಸರಕಾರ ಮುಂದುವರಿಸುತ್ತಿದೆ. ವಿವಾದಾತ್ಮಕವಾದ ಈ ಮಸೂದೆಯನ್ನು ಅಧಿಶಾಸನದ ಮೂಲಕ ಕಾಯಿದೆಯಾಗಿಸುವ ಆತುರ ಏಕೆ ಬೇಕಿತ್ತು, ಇದೀಗ ಪ್ರಶ್ನೆ. ಹಾಗೆಯೇ ಕಲ್ಲಿದ್ದಲ ಗಣಿಗಾರಿಕೆಯ ಹರಾಜಿಗೆ ಸಂಬಂಧಿಸಿದ ಅಧಿಶಾಸನ ಕೂಡ ಖಾಸಗೀವಲಯಕ್ಕೆ ಅನುಕೂಲ ಮಾಡಿ ಕೊಡುವುದಕ್ಕಾಗಿಯೆ. ಕಳೆದ ನಾಲ್ಕು ದಶಕಗಳಿಂದ ಕಲ್ಲಿದ್ದಲ ಗಣಿಗಾರಿಕೆ ಸರಕಾರಿ ವಲಯದಲ್ಲೇ ಇತ್ತು. ಈ ಗಣಿಗಾರಿಕೆ, ದೇಶದ ಇತರ ಎಲ್ಲ ಗಣಿಗಾರಿಕೆಯಂತೆಯೇ ಸಾಕಷ್ಟು ಅವ್ಯವಹಾರಗಳು, ಅಕ್ರಮಗಳು, ಭ್ರಷ್ಟಾಚಾರ ಗಳಿಗೆ ಈಡಾಗಿತ್ತು. ಸರ್ವೋಚ್ಚ ನ್ಯಾಯಾಲಯ ಸರಕಾರದ ಅಸಮರ್ಪಕ ಧೋರಣೆ ಕುರಿತು ಚಾಟಿ ಬೀಸಿತ್ತು. ದೇಶದ ಸಂಪತ್ತಾದ ಕಲ್ಲಿದ್ದಲು ಕೆಲವು ಖಾಸಗಿಯವರ ಆಸ್ತಿ ಹೇಗಾಗುತ್ತದೆ? ಇನ್ನು ಭೂಸ್ವಾಧೀನ ಕುರಿತ ಕಾನೂನಿನ ತಿದ್ದುಪಡಿ ಅಧಿಶಾಸನ. ಇದು ಅತ್ಯಂತ ವಿವಾದಾತ್ಮಕವಾದ್ದು ಮತ್ತು ರಾಜ್ಯ ಸರಕಾರಗಳ ಅನುಮೋದನೆಯೂ ಇಲ್ಲದೆ ಕೈಗೊಂಡಿರುವ ಕ್ರಮ. ಉದ್ದೇಶ ಸ್ಪಷ್ಟ. ಇನ್ನು ಮುಂದೆ ಈ ಕಾಯಿದೆಯ ಪ್ರಕಾರ ಯಾವ ಜಾಗವನ್ನಾದರೂ ಸರಕಾರ ವಶಪಡಿಸಿಕೊಂಡು, ರೈತರಿಗೆ ನಿಗದಿಪಡಿಸಿದ ಪರಿಹಾರ ನೀಡಿ, ಉದ್ಯಮಿಗಳಿಗೆ ಕೊಡಬಹುದು. ಮನಮೋಹನ ಸಿಂಗ್ ಸರಕಾರದ ವಿಶೇಷ ಆರ್ಥಿಕ ವಲಯ ಸ್ಥಾಪನೆಯ ನೀತಿಯನ್ನು ಹಿಂಬಾಗಿಲಿನಿಂದ ಮೋದಿ ಸರಕಾರ ತರುತ್ತಿದೆ ಎನ್ನಬಹುದು. ಇದರಿಂದ ಆರ್ಥಿಕವಾಗಿ ತೊಂದರೆ ಗೀಡಾಗುವವರು ಗಿರಿಜನರು ಮತ್ತು ಬುಡಕಟ್ಟು ಜನಾಂಗದವರು ಹಾಗೂ ಬಡರೈತರು. ಉದ್ಯಮಗಳು ಅಸ್ತಿತ್ವಕ್ಕೆ ಬರುವುದು ಅಷ್ಟರಲ್ಲೇ ಇದೆ!

ಸುಗ್ರೀವಾಜ್ಞೆ ಅಧಿಕಾರ ಚಲಾಯಿಸುವ ಪರಂಪರೆ ಬ್ರಿಟಿಷ್ ವಸಾಹತುಶಾಹಿ ಆಳ್ವಿಕೆಯ ಕಾಲದಿಂದ ಬಂದದ್ದು. ವಸಾಹತುಶಾಹಿಗಳ ದರ್ಬಾರಿನಲ್ಲಿ ಬೇಕಾಬಿಟ್ಟಿಯಾಗಿ ಕಾನೂನುಗಳನ್ನು ಮಾಡಲಾಗುತ್ತಿತ್ತು. ಅಗತ್ಯವೆನಿಸಿದಾಗಲೆಲ್ಲ ಅಧಿಶಾಸನ ಹೊರಡಿಸಲಾಗುತ್ತಿತ್ತು. ಸ್ವತಂತ್ರ ಭಾರತದಲ್ಲಿ ಈ ಮಾರ್ಗದ ಅನುಸರಣೆ ಖಂಡಿತ ಕೂಡದು. ಅದು ಪ್ರಜಾಪ್ರಭುತ್ವಕ್ಕೆ ಎಸಗುವ ಅಪಚಾರ. ೧೯೮೭ರಲ್ಲೇ ಸುಪ್ರೀಮ್ ಕೋರ್ಟ್ ಅಧಿಶಾಸನ ಹೊರಡಿಸುವ ಕ್ರಮವನ್ನು ತರಾಟೆಗೆ ತೆಗೆದುಕೊಂಡು ಕಟುವಾಗಿ ಟೀಕಿಸಿದೆ. ಅಕ್ರಮ ರಾಜಕೀಯ ಉದ್ದೇಶಕ್ಕಾಗಿ ಈ ಮಾರ್ಗದ ಅನುಸರಣೆಯನ್ನು ಅದು ಆಕ್ಷೇಪಿಸಿದೆ. ಅತ್ಯಂತ ಜರೂರು ಸಂದರ್ಭಗಳಲ್ಲಿ ಮಾತ್ರ ಈ ಮಾರ್ಗ ಸಮರ್ಥನೀಯ ಎಂದು ಹೇಳಿದೆ. ಆದರೆ ಮೋದಿ ಸರಕಾರ ಇದಾವುದನ್ನೂ ಲೆಕ್ಕಿಸದೆ ಸರ್ವಾಧಿಕಾರಿ ಧೋರಣೆ ಅನುಸರಿಸತೊಡಗಿದೆ. ರಾಷ್ಟ್ರಪತಿ ಪ್ರಣಾಬ್ ಮುಖರ್ಜಿಯವರೂ ಅಧಿಶಾಸನ ಹೊರಡಿಸುವ ಸರಕಾರದ ನೀತಿಗೆ ಆಕ್ಷೇಪ ವ್ಯಕ್ತಪಡಿಸಿದ್ದಾರೆ. ಸರಕಾರದ ಈ ಕ್ರಮಕ್ಕೆ ದೇಶದಲ್ಲಿ ವಿವಿಧ ವಲಯ ಗಳಿಂದ ಪ್ರತಿಭಟನೆಯೂ ವ್ಯಕ್ತವಾಗುತ್ತಿದೆ.

(ಸಹಿ)

*(ಈ ತಿಂಗಳು : ೩ನೇ ಪುಟದಿಂದ)*

ಭಾರತ ಹಿಂದಿನಿಂದಲೂ ಬಹುಧರ್ಮೀಯ, ಬಹುಮುಖೀ ಸಂಸ್ಕೃತಿಯ ನಾಡು. ಅನಾದಿ ಕಾಲದಿಂದ ಇಲ್ಲಿ ಹತ್ತು ಹಲವು ದರ್ಶನಗಳು, ಬೌದ್ಧ, ಜೈನ, ಕ್ರೈಸ್ತ, ಇಸ್ಲಾಮ್ ಹಾಗೂ ಇತರ ಧರ್ಮೀಯರು ಸಹಬಾಳ್ವೆ ನಡೆಸುತ್ತ ಬಂದಿದ್ದಾರೆ. ಅಂತೆಯೇ ಸ್ವತಂತ್ರ ಭಾರತ ಅಂಗೀಕರಿಸಿರುವ ಸಂವಿಧಾನವು ಧಾರ್ಮಿಕ ಸ್ವಾತಂತ್ರ್ಯವನ್ನು ಖಾತರಿಗೊಳಿಸಿದೆ. ಸರ್ವಧರ್ಮ ಸಮನ್ವಯತೆಯೇ ಭಾರತದ ಹೆಗ್ಗಳಿಕೆ. ಜಾತ್ಯತೀತತೆ ನಮ್ಮ ದೇಶ ಅಂಗೀಕರಿಸಿರುವ ಜೀವನವಿಧಾನ. ಹಾಗಿರುವಾಗ ಮತಾಂತರ, ಮರುಮತಾಂತರ ಇವೆಲ್ಲ ಅರ್ಥ ಇಲ್ಲದ್ದು, ಜನಸಮುದಾಯದಲ್ಲಿ ಒಡಕು ಉಂಟು ಮಾಡುವಂಥದ್ದು. ಎಲ್ಲ ವಿಚಾರಶೀಲರೂ ಅಂಥ ಪ್ರಯತ್ನಗಳನ್ನು ಖಂಡಿಸಿ, ವಿರೋಧಿಸುವುದು ಅಗತ್ಯ. ಹಿಂದೂಧರ್ಮದಲ್ಲಿ ಮರುಮತಾಂತರಕ್ಕೆ ಅವಕಾಶವಿದೆಯೇ ಎಂಬ ವಿಚಾರವೂ ಕೂಡ ವಿವಾದಾಸ್ಪದ. ಇದು ಅಲ್ಪಸಂಖ್ಯಾತರನ್ನು ದಮನಗೊಳಿಸುವ ಹುನ್ನಾರ. ಬಹುಸಂಖ್ಯಾತ ಹಿಂದುಗಳ ಅಹಮಿಕೆಯ ಸಂಕೇತ ಎಂದರೆ ತಪ್ಪಾಗದು.

✳ ✳ ✳

ಆಡಳಿತ ವಹಿಸಿಕೊಂಡು ಇನ್ನೂ ಇನ್ನೂರು ದಿನಗಳಾಗಿಲ್ಲ, ಆಗಲೇ ಭಾಜಪ ಮತ್ತು ಅದರ ಬೆಂಬಲಿಗ ಹಿಂದುತ್ವವಾದಿ ಸಂಘಟನೆಗಳು ತಮ್ಮ ನಿಜರೂಪವನ್ನು ತೋರತೊಡಗಿವೆ. ಭಾಜಪದ ಕೆಲವು ಪಾರ್ಲಿಮೆಂಟ್ ಸದಸ್ಯರುಗಳು, ಸಚಿವರುಗಳು, ಹಿಂದುತ್ವಪರ ಸಂಘಟನೆಗಳ ನಾಯಕರುಗಳು ಅನ್ಯಧರ್ಮೀಯರನ್ನು ಬೆದರಿಸುವ ಧಾಟಿಯಲ್ಲಿ ಮಾತನಾಡುತ್ತಿದ್ದಾರೆ. ಇದುವರೆಗೆ ತೆರೆಮರೆಯಲ್ಲಿದ್ದ ಹಿಂದೂ ಮಹಾಸಭಾ ಈಗ ಮರುಜೀವ ಪಡೆದಿದೆ. ಗಾಂಧಿಯನ್ನು ಕೊಲೆ ಮಾಡಿದ ನಾಥುರಾಮ್ ಗೋಡ್ಸೆಯ ಪ್ರತಿಮೆಗಳನ್ನು ಸ್ಥಾಪಿಸಲು, ದೇವಾಲಯ ನಿರ್ಮಿಸಲು ಹೊರಟಿವೆ. ಕ್ರಿಶ್ಚಿಯನ್ನರು ಮತ್ತು ಮುಸಲ್ಮಾನರನ್ನು ಮುಖ್ಯ ಗುರಿಯಾಗಿರಿಸಿಕೊಂಡು ಪ್ರಾರಂಭಿಸಿರುವ ಮರು ಮತಾಂತರದ ಕಾರ್ಯಕ್ರಮ ಈ ದೇಶವನ್ನು ಹಿಂದೂ ರಾಷ್ಟ್ರವನ್ನಾಗಿಸುವ ಕಾರ್ಯತಂತ್ರದ ಒಂದು ಭಾಗ. ಇಷ್ಟೆಲ್ಲ ಅವಾಂತರಗಳು ನಡೆಯುತ್ತಿದ್ದಾಗ್ಯೂ ಪ್ರಧಾನಿ ನರೇಂದ್ರ ಮೋದಿ ಮಾತ್ರ ಈ ವಿಷಯದಲ್ಲಿ ಮೌನ ತಾಳಿದ್ದಾರೆ. ಪ್ರಾಯಶಃ ದೇಶವನ್ನು ಬದಲಿಸಲು ಹೊರಟಿರುವ ಅಜೆಂಡಾದಲ್ಲಿ ಇದು ಸೇರಿದೆಯೆಂದು ಕಾಣುತ್ತದೆ. ಹಿಂದುತ್ವವಾದಿ ಸಂಘಟನೆಗಳ ಅಕ್ರಮ ಚರ್ಯೆಗಳನ್ನು ಖಂಡಿಸಿ, ಸೂಕ್ತ ಕ್ರಮ ಕೈಗೊಳ್ಳುವುದಕ್ಕೆ ಪ್ರತಿಯಾಗಿ ಮೋದಿ ಸರಕಾರ ಅದಕ್ಕೆ ಕುಮ್ಮಕ್ಕು ನೀಡುವಂತೆ ಮತಾಂತರ ನಿಷೇಧ ಕಾಯಿದೆ ತರುವ ಪ್ರಸ್ತಾಪ ಮಂಡಿಸಿದೆ. ಅಂಥ ಕಾಯಿದೆ ತರಲು ಸಿದ್ಧತೆಯನ್ನು ನಡೆಸಿದೆ. ಭಾಜಪ ಆಡಳಿತ ನಡೆಸುತ್ತಿರುವ ಕೆಲವು ರಾಜ್ಯಗಳಲ್ಲಿ ಈಗಾಗಲೇ ಇಂಥ ಕಾಯಿದೆ ಜಾರಿಯಲ್ಲಿದೆ. ಇದು ಅಲ್ಪಸಂಖ್ಯಾತ ಧರ್ಮೀಯರನ್ನು ಬೆದರಿಸಲು ತಯಾರಿಸಿರುವ ಯೋಜನೆ. ಸಂವಿಧಾನದತ್ತವಾದ ಆಯ್ಕೆ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಪ್ರಯತ್ನ. ಹಾಗಾಗಿ ಅಂಥ ಕಾನೂನನ್ನು ವಿರೋಧಿಸುವುದು ಅಗತ್ಯ. ಹಿಂದುತ್ವವಾದಿ ಸಂಘಟನೆಗಳು ಬಲವರ್ಧನೆಗೊಂಡು, ಕಾನೂನನ್ನು ಉಲ್ಲಂಘಿಸಿ, ನೈತಿಕ ಪೊಲೀಸರಂತೆ ವರ್ತಿಸುತ್ತಿರುವುದು ವಿಪರೀತವಾಗಿ ಹೆಚ್ಚುತ್ತಿದೆ. ಇತ್ತೀಚೆಗೆ ಹಿಂದಿ ನಟ ಅಮೀರ್ ಖಾನ್ ಅಭಿನಯಿಸಿರುವ 'ಪಿಕೆ' ಚಿತ್ರದ ವಿರುದ್ಧ ಪ್ರತಿಭಟನೆಯ ದಾಂಧಲೆ ನಡೆಸಿರುವ ಹಿಂದೂಪರ ಸಂಘಟನೆಗಳ ಚರ್ಯೆ ಅಂಥವುಗಳಲ್ಲಿ ಒಂದು.

ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎಳ್ಳಷ್ಟೂ ಗೌರವಿಸದ ಈ ಬಗೆಯ ಗೂಂಡಾಗಿರಿಯನ್ನು ಹೀಗೇ ಬೆಳೆಯಗೊಟ್ಟರೆ ಅನಾಹುತ ಖಂಡಿತ. ಹಾಗಾಗಿ ಈ ದೇಶದ ಐಕ್ಯತೆಯನ್ನು, ಜಾತ್ಯತೀತತೆಯನ್ನು, ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಎತ್ತಿಹಿಡಿಯಲು, ಹಿಂದುತ್ವವಾದಿ ಸಂಘಟನೆಗಳ ಪುಂಡಾಟಿಕೆಯನ್ನು ತಡೆಯಲು ಎಲ್ಲ ವಿಚಾರವಂತರೂ ಒಂದುಗೂಡುವುದು ಇಂದು ಜರೂರಾಗಿ ಆಗಬೇಕಾಗಿರುವ ಕಾರ್ಯ.

✳ ✳ ✳

ಕಾಶ್ಮೀರದಲ್ಲಿ ಚುನಾವಣೆಗಳು ಮುಗಿದು ವಾರಗಳೇ ಕಳೆದುಹೋದರೂ ಇನ್ನೂ ಸರಕಾರ ರಚನೆ ಕಗ್ಗಂಟಾಗಿಯೇ ಇದೆ. ಬಹುಮತ ಪಡೆಯಲು ನರೇಂದ್ರ ಮೋದಿ – ಅಮಿತ್ ಷಾ ಜೋಡಿ ನಡೆಸಿದ ಪ್ರಯತ್ನ ಫಲಿಸಲಿಲ್ಲ. ಯಾವ ಒಂದು ಪಕ್ಷಕ್ಕೂ ಬಹುಮತ ಬರಲಿಲ್ಲ. ಮುಖ್ಯಮಂತ್ರಿ ಪಟ್ಟಕ್ಕೆ ಪಟ್ಟು ಹಿಡಿದಿರುವುದರಿಂದ ಭಾಜಪ–ಪಿಡಿಪಿ ಹೊಂದಾಣಿಕೆ ಫಲಿಸದೇ ಹೋಗಿದೆ. ಕಾಂಗ್ರೆಸ್ಸಿನ ಸ್ಥಿತಿ ಚುನಾವಣಾ ರಾಜಕೀಯದಲ್ಲಿ ಆಟಕ್ಕುಂಟು ಲೆಕ್ಕಕ್ಕಿಲ್ಲ ಎನ್ನುವ ಹಾಗಾಗಿದೆ. ಇನ್ನು ದೆಹಲಿ ಶಾಸನ ಸಭಾ ಚುನಾವಣೆಗಳಲ್ಲಿ ಏನಾಗುವುದೋ ನೋಡಬೇಕು. ಭಾಜಪ ಭರ್ಜರಿ ಪ್ರಚಾರ ಪ್ರಾರಂಭಿಸಿದೆ. ಗೆಲುವಿನ ರೂವಾರಿ ಪಟ್ಟ ಪಡೆದಿರುವ ಅಮಿತ್ ಷಾ ಬೀಸಿದ ಬಲೆಗೆ ಮಾಜಿ ಪೊಲೀಸ್ ಅಧಿಕಾರಿ ಕಿರಣ್ ಬೇಡಿ ಬಿದ್ದಿದ್ದಾರೆ. ಈಕೆ ಭಾಜಪದ ಮುಖ್ಯಮಂತ್ರಿ ಅಭ್ಯರ್ಥಿ ಎನ್ನುವುದು ಖಚಿತವಾಗಿದೆ. ಭಾಜಪದಲ್ಲಿ ಉಲ್ಕೆಯಂತೆ ಮೇಲೇರಿರುವ ಅಮಿತ್ ಷಾ ಉತ್ತರಪ್ರದೇಶದಲ್ಲಿ ಸ್ಪರ್ಧಿಸಿದ್ದ ೮೦ ಸ್ಥಾನಗಳಲ್ಲಿ ೭೧ರಲ್ಲಿ ಜಯಗಳಿಸಿ ಭಾಜಪವನ್ನು ಕೇಂದ್ರದಲ್ಲಿ ಅಧಿಕಾರಕ್ಕೇರಿಸಿದ ರೂವಾರಿ. ಈಗ ಪಕ್ಷ ಹಾಗೂ ಸರಕಾರ ಎರಡೂ ಅಮಿತ್ ಷಾ – ನಮೋ ಜೋಡಿ ಕೈಯಲ್ಲಿ. ಇಬ್ಬರೂ ಪಕ್ಷದಲ್ಲಿ, ಸರಕಾರದಲ್ಲಿ ಯಾರೂ ಯಾವ ವಿಷಯದಲ್ಲೂ ಸೊಲ್ಲೆತ್ತದಂತೆ ಚಾಟಿ ಬೀಸಿದ್ದಾರೆ. ಹಿಂದುತ್ವವಾದಿ ಉಗ್ರರು ಏನೇ ಮಾತನಾಡಿದರೂ ಮಾಫಿ. ಇದು ನಿಜವಾಗಿಯೂ ಕಳವಳಕಾರಿ ಬೆಳವಣಿಗೆ, ಫಾಸಿಸ್ಟ್ ಪ್ರವೃತ್ತಿ.

ಅಮಿತ್ ಷಾ ಸಾಮಾನ್ಯ ವ್ಯಕ್ತಿಯೇನಲ್ಲ. ಈತ ಗುಜರಾತ್‌ನಲ್ಲಿ ಮೋದಿ ಸರಕಾರದಲ್ಲಿ ಗೃಹಸಚಿವನಾಗಿದ್ದ ವ್ಯಕ್ತಿ. ರಾಜ್ಯವೊಂದರ ಗೃಹ ಸಚಿವನಾಗಿ ಬಂಧನಕ್ಕೊಳಗಾದ ಮೊದಲ ಮಹಾಪುರುಷ. ಮತ್ತೆ ಕ್ರಿಮಿನಲ್ ಮೊಕದ್ದಮೆ ಎದುರಿಸಿ ಈಚೆಗೆ ಖುಲಾಸೆ ಆದವ. ಸಾಕ್ಷಿಗಳ ಮೇಲೆ ಪ್ರಭಾವಬೀರಿಯಾನೆಂಬ ಗುಮಾನಿಯ ಮೇಲೆ ಸುಪ್ರೀಂ ಕೋರ್ಟಿನ ಆದೇಶದ ಮೇರೆಗೆ ಎರಡು ವರ್ಷ ಗುಜರಾತ್ ರಾಜ್ಯದ ಗಡಿಯೊಳಗೆ ಪ್ರವೇಶಿಸದಂತೆ ಗಡೀಪಾರಾಗಿದ್ದ ಆಸಾಮಿ. ಗುಜರಾತ್ ರಾಜ್ಯದ ಪೊಲೀಸು ಪಡೆಯನ್ನು ಸಂಪೂರ್ಣವಾಗಿ ರಾಜಕೀಯಕರಣಗೊಳಿಸಿದ ಕೀರ್ತಿ ಈತನದು. ತನ್ನ ದಾರಿಗೆ ಅಡ್ಡ ಬರುವವರನ್ನು ತಲೆ ಎತ್ತದಂತೆ ಮುಗಿಸಿಬಿಡುವ ವ್ಯಕ್ತಿ ಅಮಿತ್ ಷಾ. ಈಗ ಭಾಜಪದ ರಾಷ್ಟ್ರೀಯ ಅಧ್ಯಕ್ಷ. ಕಟ್ಟಾ ಆರೆಸ್ಸೆಸ್ ಮೂಲದ ಈತ ಮಾತೃಸಂಸ್ಥೆಯ ಪರಿಣತರನ್ನೇ ಪಕ್ಷದ ಆಯಕಟ್ಟಿನ ಸ್ಥಾನಕ್ಕೆ ತಂದಿದ್ದಾನೆ. ಹಾಗಾಗಿ ಭಾಜಪದಲ್ಲಿರುವ ತೀವ್ರವಾದಿಗಳು ಹಾಗೂ ಸಂಘಪರಿವಾರದ ಅಂಗ ಸಂಸ್ಥೆಗಳಾದ ವಿಶ್ವ ಹಿಂದೂ ಪರಿಷತ್ ಮತ್ತು ಬಜರಂಗದಳದಂಥವು ಗರಿಗೆದರಿ ಪ್ರಚೋದನಕಾರಿ ಕೃತ್ಯಗಳಲ್ಲಿ ತೊಡಗುತ್ತಿದ್ದಾರೆ. ಬಾಯಿಗೆ ಬಂದಹಾಗೆ ಬೇಜವಾಬ್ದಾರಿ ಮಾತುಗಳನ್ನಾಡುತ್ತಿದ್ದಾರೆ. ಇವನ್ನೆಲ್ಲ ನೋಡಿಕೊಂಡು ನಮೋ–ಷಾ ಜೋಡಿ ಮೌನವಾಗಿ ಆನಂದಿಸುತ್ತಿದ್ದಾರೆ.

✳ ✳ ✳

ಪ್ರಪಂಚಕ್ಕೆ ಯೋಗದರ್ಶನ ಮಾಡಿಸಿ, ಪ್ರಾಣಾಯಾಮ ಬೋಧಿಸಿರುವ ಭಾರತವು ಜಗದ್ಗುರುವಿನ ಸ್ಥಾನ ಅಲಂಕರಿಸುವ ಕಾಲ ದೂರ ಇಲ್ಲ. ಅಸಾಧಾರಣವಾದ, ಭವ್ಯವಾದ ಸಹಸ್ರಾರು ವರ್ಷಗಳ ಸಾಧನೆಯ ಹಿನ್ನೆಲೆಯನ್ನು ಹೊಂದಿರುವ, ಪುರಾತನ ಸಂಸ್ಕೃತಿಯ ಈ ದೇಶ ಅಗ್ರಸ್ಥಾನಕ್ಕೆ ಬರುವುದರಲ್ಲಿ ಸಂಶಯವಿಲ್ಲ. ಒಂಭತ್ತು ಸಾವಿರ ವರ್ಷಗಳ ಹಿಂದೆಯೇ, ವೇದಗಳ ಕಾಲದಲ್ಲಿ ಭಾರತವು ವಿಮಾನಗಳ ಹಾರಾಟ ನಡೆಸುತ್ತಿತ್ತು, ಅನ್ಯಗ್ರಹಗಳ ಪರ್ಯಟನೆಯಲ್ಲಿ ತೊಡಗಿತ್ತು. ಪ್ರಪಂಚದ ಎಲ್ಲ ವೈಜ್ಞಾನಿಕ ಸಾಧನೆಗಳಿಗೂ ಭಾರತವೇ ಮೂಲ. ಒಂದೇ ಎರಡೇ, ಸಾಧನೆಗಳು ಕೊಚ್ಚಿಕೊಳ್ಳಲು. ಭಾರತದ ಇತಿಹಾಸವನ್ನು ವೈಭವೀಕರಿಸಿ, ಇಲ್ಲದ ಸಾಧನೆಗಳನ್ನು ಆರೋಪಿಸುವುದು ಸಂಘಪರಿವಾರದ ಚಾಳಿ. ಯಾವುದಕ್ಕೂ ಒಂದು ಮಿತಿ ಇರಬೇಕು. ಗಣೇಶ, ಕುಂತಿ ವಿಚಾರ ಎತ್ತಿಕೊಂಡು ಭಾರತದ ಪ್ರಧಾನಿ ನರೇಂದ್ರ ಮೋದಿ ಭಾರತೀಯ ವಿಜ್ಞಾನಿಗಳಿಗೆ ಆ ಕಾಲದಲ್ಲೇ ಪ್ಲಾಸ್ಟಿಕ್ ಸರ್ಜರಿ, ಇನ್ವಿಟ್ರೋ ಫರ್ಟಿಲೈಸೇಷನ್ ತಂತ್ರಜ್ಞಾನ ಗೊತ್ತಿತ್ತು ಎಂದು ವಾಗ್ಝರಿ ಹರಿಸಿದ ಮೇಲೆ ಅದಕ್ಕೆ ಅಧಿಕೃತ ಮುದ್ರೆ ಬಿದ್ದ ಹಾಗೆಯೇ.

ಇತಿಹಾಸವನ್ನು ತಿರುಚುವುದರಲ್ಲಿ, ಹಳೆಯದನ್ನು ವೈಭವೀಕರಿಸುವುದರಲ್ಲಿ ಸಂಘ ಪರಿವಾರದವರು ನಿಸ್ಸೀಮರು. ಫ್ಯಾಸಿಸ್ಟರು ಜರ್ಮನಿಯಲ್ಲಿ ಮಾಡಿದ್ದು ಕೂಡ ಇದನ್ನೇ. ಅಧಿಕಾರದಲ್ಲಿರುವವರೇ ಆಧಾರ ಸಾಕ್ಷ್ಯವಿಲ್ಲದ ಮಿಥಕಗಳನ್ನು ಪ್ರಕಟಿಸುವಾಗ, ಅವರನ್ನು ಆರಾಧಿಸುವ, ಯಾವಾಗಲೂ ಅಧಿಕಾರಿಗಳ ಮರ್ಜಿ ಅನುಸರಿಸಿ ತಮ್ಮ ಹಿತ ಕಾಪಾಡಿಕೊಳ್ಳುವ ವಿಜ್ಞಾನಿಗಳು ಏನು ಮಾಡಬೇಕು ? ಈಗ ಅಂಥ ವಿಜ್ಞಾನಿಗಳಿಗೆ, ಅಲ್ಲ ಅಜ್ಞಾನಿಗಳಿಗೇ ಕಾಲ. ಇತ್ತೀಚೆಗೆ ಜರುಗಿದ ೧೦೨ನೇ ಇಂಡಿಯನ್ ಸೈನ್ಸ್ ಕಾಂಗ್ರೆಸ್ಸಿನ ಸಮಾವೇಶ ಅದಕ್ಕೆ ಸಾಕ್ಷಿ. ಈ ಸಮಾವೇಶದಲ್ಲಿ ಮೊದಲ ಬಾರಿಗೆ

ಉಡಾಫೆಗೆ ಅವಕಾಶವಾದ್ದು ತಲೆತಗ್ಗಿಸುವಂಥ ಬೆಳವಣಿಗೆ. ಎಲ್ಲ ದೇಶಗಳಲ್ಲೂ ವಿಜ್ಞಾನಿಗಳ ಸಮಾವೇಶ ಶುದ್ಧವಾಗಿ ವಿಜ್ಞಾನಿಗಳಿಗೆ ಅವರ ಸಂಶೋಧನಾ ಪ್ರಬಂಧಗಳಿಗೆ ಮೀಸಲು. ಎಲ್ಲೂ ರಾಜಕಾರಣಿಗಳು, ಸಚಿವರುಗಳು ಬರುವುದಿಲ್ಲ. ವಿಜ್ಞಾನಿಗಳ ಸಮ್ಮೇಳನವನ್ನು ಪ್ರಧಾನಿ ಉದ್ಘಾಟನೆ ಮಾಡುವುದೂ ಇಲ್ಲ. ಈ ಬಗೆಯ ಪರಿಪಾಠ ಇರುವುದು ಭಾರತದಲ್ಲಿ ಮಾತ್ರ. ಮಂಗಳಗ್ರಹಯಾನ ಕೈಗೊಂಡಿದ್ದರೂ ಗ್ರಹಣ ಸಂಭವಿಸುವುದು ರಾಹು–ಕೇತು ಗಳೆಂಬ ಕೆಟ್ಟ ಗ್ರಹಗಳಿಂದ ಎಂದು ನಂಬಿಕೊಂಡು, ಪಿತೃಗಳಿಗೆ ತರ್ಪಣ ನೀಡಿ, ಗ್ರಹಣ ಮುಕ್ತವಾದ ಮೇಲೆ ಸ್ನಾನ ಮಾಡಿ ದೇವರಿಗೆ ಕೈ ಮುಗಿಯುವ ಪ್ರವೃತ್ತಿ ಹೊಂದಿರುವ ವಿಜ್ಞಾನಿಗಳೂ ಇರುವ ದೇಶ ಇದು. ಪ್ರತಿನಿತ್ಯ ಜ್ಯೋತಿಶ್ಶಾಸ್ತ್ರ ಪ್ರವೀಣರಿಗೆ ತಲೆಬಾಗುವವರೂ ಇದ್ದಾರೆ. ಮೂಢನಂಬಿಕೆ ಹೆಚ್ಚಿದಷ್ಟೂ ಸುಗ್ಗಿ, ವ್ಯವಸ್ಥೆಗೆ. ಹಾಗಿರುವಾಗ ವೈಜ್ಞಾನಿಕ ಮನೋಭಾವ ಹೊಂದಿರು ವವರು ವಿರಳವಾಗುತ್ತಿದ್ದಂತೆ ಇಂಥ ಬೆಳವಣಿಗೆಗಳು ಹೆಚ್ಚುತ್ತಿರುವುದರಲ್ಲಿ ಅಚ್ಚರಿ ಏನಿಲ್ಲ.

* * *

ತಮಿಳುನಾಡಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಬಲಿ. ಹಿಂದೂ ಪರ ಸಂಘಟನೆಗಳ, ಸಂಘಪರಿವಾರದ, ಸರಕಾರದ ಕಿರುಕುಳ ತಾಳಲಾಗದೆ ಲೇಖಕನೊಬ್ಬ ಮುಂದೆ ಬರೆಯುವುದನ್ನೇ ನಿಲ್ಲಿಸುವುದಾಗಿ, ತನ್ನೆಲ್ಲ ಪ್ರಕಟಿತ ಪುಸ್ತಕಗಳನ್ನು ಹಿಂತೆಗೆದುಕೊಳ್ಳುವುದಾಗಿ ಪ್ರಕಟಿಸಿದ್ದಾರೆ. ಆತ ತಮಿಳು ಲೇಖಕ, ಅಧ್ಯಾಪಕ ಪೆರುಮಾಳ್ ಮುರುಗನ್. ೨೦೧೦ರಲ್ಲಿ ತಮಿಳಿನಲ್ಲಿ ಪ್ರಕಟಗೊಂಡ 'ಮಧೇರುಭಗನ್' ದಿಢೀರೆಂದು ಹಿಂದೂಪರ ಸಂಘಟನೆಗಳ ಗಮನ ಸೆಳೆದದ್ದು ೨೦೧೩ರಲ್ಲಿ 'ಒನ್ ಪಾರ್ಟ್ ವುಮನ್' ಎಂಬ ಶೀರ್ಷಿಕೆಯ ಇಂಗ್ಲಿಷ್ ಅನುವಾದ ಪ್ರಕಟವಾದ ಮೇಲೆ. ಪುಸ್ತಕ ಪ್ರಕಟಗೊಂಡು ನಾಲ್ಕು ವರ್ಷಗಳಾದ ಮೇಲೆ ತಿರುಚೆಂಗೋಡ್‌ನ ಕೆಲ ಪಂಗಡದವರು ಸಂಘಪರಿವಾರದ ಕುಮ್ಮಕ್ಕಿನಿಂದ ಮಹಿಳೆಯರು ಆಚರಿಸುತ್ತಿದ್ದ ಕೆಲವು ಸಂಪ್ರದಾಯಗಳನ್ನು ಕುರಿತು ಕಾದಂಬರಿಯಲ್ಲಿ ವಿವರಿಸಿರುವುದನ್ನು ಆಕ್ಷೇಪಿಸಿ ನಡೆಸಿದ ಪ್ರತಿಭಟನೆಗಳಿಂದ, ಜಿಲ್ಲಾಧಿಕಾರಿಗಳು ತೋರಿದ ದರ್ಪದಿಂದ ಬೇಸತ್ತು ಲೇಖಕ ಮುರುಗನ್ ನೀಡಿರುವ ಹೇಳಿಕೆ ಗಮನಿಸಿದರೆ ಆತ ಎಷ್ಟು ಸಂಕಟ ಅನುಭವಿಸಿದ್ದಾರೆ ವಿದ್ಯಮಾನ ಗಳಿಂದ ಎನ್ನುವುದು ಗೊತ್ತಾಗುತ್ತದೆ. 'ಲೇಖಕ ಪೆರುಮಾಳ್ ಮುರುಗನ್‌ನು ಸತ್ತಿದ್ದಾನೆ. ಅವನು ದೇವರಲ್ಲ, ಹಾಗಾಗಿ ಅವನು ಮತ್ತೆ ಅವತಾರ ಎತ್ತುವುದಿಲ್ಲ. ಅವನಿಗೆ ಪುನರ್ಜನ್ಮದಲ್ಲಿ ನಂಬಿಕೆಯೂ ಇಲ್ಲ. ಇನ್ನು ಮುಂದೆ ಪೆರುಮಾಳ್ ಮುರುಗನ್ ಅಧ್ಯಾಪಕನಾಗಿ ಮಾತ್ರ ಉಳಿದಿರುತ್ತಾನೆ.'

ತಮಿಳುನಾಡಿನ ರಾಜಕೀಯದಲ್ಲಿ, ಪ್ರಮುಖವಾಗಿ ದ್ರಾವಿಡ ಪಕ್ಷಗಳ ಮಧ್ಯೆ ಏರ್ಪಟ್ಟಿರುವ ಗೊಂದಲ ಗಳಿಂದಾಗಿ, ಕರುಣಾನಿಧಿ ಹಾಗೂ ಜಯಲಲಿತ ಇಬ್ಬರು ನಾಯಕರುಗಳು ತೀವ್ರವಾಗಿ ತಮ್ಮ ಜನಪ್ರಿಯತೆ ಕಳೆದು ಕೊಂಡಿರುವುದರಿಂದ, ಅವರ ವರ್ಚಸ್ಸು ಕುಗ್ಗಿರುವಾಗ ಸಂಘಪರಿವಾರ ಗರಿಗೆದರಲು ನೋಡುತ್ತಿದೆ, ತಮಿಳುನಾಡಿನಲ್ಲಿ ತನ್ನ ಪ್ರಾಬಲ್ಯ ಬೆಳೆಸಿಕೊಳ್ಳಲು ಹವಣಿಸುತ್ತಿದೆ. ಈ ಸಂಘಟನೆಗಳು ಈಗ ನೈತಿಕ ಪೊಲೀಸುಗಿರಿ ನಡೆಸಲು ಹೊರಟಿವೆ. ಇದುವರೆಗೆ ಇಲ್ಲದ ಕಿತಾಪತಿ ನಡೆಸಲು ಮುಂದಾಗಿವೆ. ಅದಕ್ಕೆ ಮೊದಲ ಆಹುತಿಯೇ ಲೇಖಕ ಪೆರುಮಾಳ್ ಮುರುಗನ್. ಆಡಳಿತ ನಡೆಸುತ್ತಿರುವ ಅಣ್ಣಾ ದ್ರಾವಿಡ ಮುನ್ನೇತ್ರ ಕಳಗಂ ಇಂಥ ಧೂರ್ತರ ಮೇಲೆ ಕ್ರಮ ಕೈಗೊಂಡು, ಮೊಳಕೆಯಲ್ಲಿ ಅವರ ವಿಧ್ವಂಸಕ ಚರ್ಯೆಯನ್ನು ಚಿವುಟಿ ಹಾಕುವ ಬದಲು ಅವರ ಪರವಾಗಿಯೇ ವರ್ತಿಸಿದ್ದು ಖಂಡನೀಯ. ತಿರುಚೆನ್‌ಗೋಡಿನಲ್ಲಿ ದಾಂಧಲೆ ನಡೆಸಿ ಕಾದಂಬರಿ ಪ್ರತಿಗಳನ್ನು ಸುಟ್ಟು ಭಸ್ಮ ಮಾಡಿದವರ ಪರ ಕ್ರಮ ಕೈಗೊಳ್ಳುವುದನ್ನು ಬಿಟ್ಟು ಜಿಲ್ಲಾಡಳಿತ ಶಾಂತಿಸಭೆ ಕರೆದದ್ದು ಮಹಾಪರಾಧ. ಈ ಶಾಂತಿಸಭೆಯಲ್ಲಿ ಲೇಖಕನ ಮೇಲೆ ಒತ್ತಡ ಹೇರಿ ಆತನಿಂದ ಲಿಖಿತ ಕ್ಷಮಾಪಣೆ ಪಡೆದುಕೊಂಡದ್ದು ಖಂಡನೀಯ. ಚೆನ್ನೈನಲ್ಲಿ ನಡೆಯುತ್ತಿರುವ 'ದಿ ಹಿಂದು' ಪತ್ರಿಕೆಯ ಸಾಹಿತ್ಯಕೂಟದಲ್ಲಿ ಈ ಘಟನೆಯನ್ನು ಖಂಡಿಸಿ, ಲೇಖಕ ಪೆರುಮಾಳ್ ಮುರುಗನ್‌ಗೆ ಬೆಂಬಲ ಸೂಚಿಸಿದೆ. ಹಾಗೆಯೇ ದೇಶದ ಹಲವು ಲೇಖಕರು ತಮ್ಮ ಸೌಹಾರ್ದತೆಯನ್ನು ವ್ಯಕ್ತಗೊಳಿಸಿದ್ದಾರೆ. ದೇಶದಲ್ಲಿ ಭಾಜಪ ಪ್ರಾಬಲ್ಯ ಹೆಚ್ಚುತ್ತಿದ್ದ ಹಾಗೇ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ದಬ್ಬಾಳಿಕೆ ಹೆಚ್ಚಾಗುವ ಸೂಚನೆ ಗಳಿಗೆ ತಮಿಳುನಾಡಿನ ಪ್ರಕರಣ ಸಾಕ್ಷಿಯಾಗಿದೆ. ಮೋದಿ ಸರಕಾರ ಬಂದ ಮೇಲೆ ಗರಿಗೆದರಿಕೊಂಡಿರುವ ಹಿಂದೂಪರ ಸಂಘಟನೆಗಳು ನಾಥೂರಾಮ್ ಗೋಡ್ಸೆ ಯನ್ನು ವಿಜೃಂಭಿಸಲು ಹವಣಿಸುತ್ತಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾಗೂ ಕರ್ನಾಟಕದ ಇತರ ಕಡೆಗಳಲ್ಲಿ ಪುಂಡಾಟಿಕೆಯಲ್ಲಿ ತೊಡಗಿರುವ ಶ್ರೀರಾಮ ಸೇನೆಯ ನಾಯಕ ಪ್ರಮೋದ್ ಮುತಾಲಿಕ್‌ಗೆ ಈಗ ನಾಥೂರಾಮ್ ಗೋಡ್ಸೆ ಪುರಸ್ಕಾರ ನೀಡಲಾಗಿದೆ ಎಂದು ಸುದ್ದಿ. ಇನ್ನು ಮುಂದೆ ಇನ್ನೇನೇನು ಕಾಣಬೇಕೊ.

* * *

ರಾಜಕೀಯರಂಗದಲ್ಲಿ ಏನು ಬೇಕಾದರೂ ಆಗ ಬಹುದು. ಲೋಕಸಭೆಯಲ್ಲಿ ಬಹುಮತ ಹೊಂದಿದ್ದರೂ ಭಾಜಪ ತನ್ನ ಮಿತ್ರಪಕ್ಷಗಳನ್ನು ಸಂಪುಟದಲ್ಲಿ ಸೇರಿಸಿ ಕೊಂಡಿದೆ. ಇನ್ನೂ ಎಂಟು ತಿಂಗಳು ಕಳೆದಿಲ್ಲ ಆಗಲೇ ಭಾಜಪ ಮತ್ತು ಅಕಾಲಿದಳಗಳ ಮಧ್ಯೆ ಭಿನ್ನಾಭಿಪ್ರಾಯದ ಹೊಗೆಯಾಡುತ್ತಿದೆ. ಅಮಿತ್ ಷಾ ಮತ್ತು ಮೋದಿ ಜೋಡಿ ಎಲ್ಲ ಸಂದರ್ಭಗಳನ್ನು ತಮ್ಮ ಬೇಳೆ ಬೇಯಿಸಿ ಕೊಳ್ಳುವುದಕ್ಕಾಗಿ ಬಳಸಿಕೊಳ್ಳುವುದರಲ್ಲಿ ಚಾಣಾಕ್ಷರು. ಅಕಾಲಿದಳ ನೇತೃತ್ವ ಗುರುದ್ವಾರ ಸಮಿತಿ ಮತ್ತು ಡೇರಾ ಸಚ್ಚಾ ಸೌದಾ ಪಂಗಡಗಳ ಮಧ್ಯೆ ದ್ವೇಷ ಇರುವುದು ತಿಳಿದಿರುವ ವಿಚಾರ ಎಲ್ಲರಿಗೂ. ಡೇರಾ ಪಂಗಡದ ನಾಯಕ ರಾಮ್ ರಹೀಮ್ ಸಿಂಗ್ ಇನ್ಸಾನ್ ಕುರಿತ ಚಲನಚಿತ್ರವೊಂದನ್ನು ಈಗ ಭಾಜಪ ಅಕಾಲಿಗಳನ್ನು ಹದ್ದುಬಸ್ತಿನಲ್ಲಿರಿಸಲು ಬಳಸಿಕೊಳ್ಳುತ್ತಿದೆ. ಈ ಬಾಬಾ ನಟಿಸಿರುವ ಚಿತ್ರ 'ಮೆಸೇಂಜರ್ ಆಫ್ ಗಾಡ್' ಈಗ ವಿವಾದದ ಸುಳಿಯಲ್ಲಿದೆ. ಕೇಂದ್ರ ಸರಕಾರದ ವಾರ್ತಾ ಇಲಾಖೆ ಈ ಚಿತ್ರಕ್ಕೆ ಸೆನ್ಸಾರ್ ಸರ್ಟಿಫಿಕೇಟ್ ನೀಡುವ ವಿವಾದದಲ್ಲಿ ನಡೆದು ಕೊಂಡಿರುವ ರೀತಿಯನ್ನು ಪ್ರತಿಭಟಿಸಿ ಕೇಂದ್ರ ಸೆನ್ಸಾರ್ ಬೋರ್ಡಿನ ಮುಖ್ಯಸ್ಥೆ ಲೀಲಾ ಸ್ಯಾಮ್ಸನ್ ಮತ್ತು ಹನ್ನೆರಡು ಮಂದಿ ಬೋರ್ಡಿನ ಸದಸ್ಯರು ರಾಜೀನಾಮೆ ನೀಡಿದ್ದಾರೆ. ಕೇಂದ್ರ ಸೆನ್ಸಾರ್ ಬೋರ್ಡ್ ಎಲ್ಲ ಆಯಾಮಗಳನ್ನೂ ಪರಿಶೀಲಿಸಿ 'ದಿ ಮೆಸೇಂಜರ್ ಆಫ್ ಗಾಡ್' ಚಿತ್ರಕ್ಕೆ ಸರ್ಟಿಫಿಕೇಟ್ ನೀಡದಿರಲು ನಿರ್ಧರಿಸಿತು. ಮರುದಿನವೇ ಫಿಲಂ ಸರ್ಟಿಫಿಕೇಶನ್ ಅಪಲೇಟ್ ಟ್ರಿಬ್ಯೂನಲ್ ತರಾತುರಿಯಲ್ಲಿ ಚಿತ್ರಕ್ಕೆ ಸರ್ಟಿಫಿಕೇಟ್ ನೀಡಲು ಅನುಮತಿ ನೀಡಿದ್ದೇ ವಿವಾದಕ್ಕೆ ಕಾರಣ. ಇಷ್ಟು ಅವಸರದಲ್ಲಿ ಚಿತ್ರದ ಬಿಡುಗಡೆಗೆ ಅನುಮತಿ ನೀಡಿದ ರಾಜಕೀಯ ಹುನ್ನಾರದಿಂದ ಬೇಸತ್ತ ಸೆನ್ಸಾರ್ ಮಂಡಳಿ ಮುಖ್ಯಸ್ಥರು, ಸದಸ್ಯರು ರಾಜೀನಾಮೆ ನೀಡಿ ಪ್ರತಿಭಟಿಸಿರುವುದು ನ್ಯಾಯೋಚಿತ ವಾಗಿದೆ. ಸೆನ್ಸಾರ್ ಬೋರ್ಡ್‌ನಂಥ ಸ್ವತಂತ್ರ ಸ್ವಾಯತ್ತ ಸಂಸ್ಥೆಗಳ ವ್ಯವಹಾರದಲ್ಲಿ ಸರಕಾರ ತಲೆಹಾಕುವುದು ಇದೇ ಮೊದಲ ಸಲವೇನಲ್ಲ. ಆದರೆ ಸಾಮೂಹಿಕ ರಾಜೀನಾಮೆಯಾಗಿರುವುದು ಇದೇ ಮೊದಲ ಸಲ.

ಮೋದಿ ಸರಕಾರ ಈಗ ಭಾಜಪ ಸದಸ್ಯರು ಆರೆಸ್ಸೆಸ್‌ನವರು ಮತ್ತು ಅವರ ಹಿತೈಷಿಗಳಿಂದ ತುಂಬಿರುವ ಹೊಸ ಬೋರ್ಡ್ ಸ್ಥಾಪಿಸಿದೆ. ●

## ಅಭಿನಂದನೆಗಳು



ಕನ್ನಡ ದಲಿತ, ಬಂಡಾಯ ಸಾಹಿತ್ಯ ಚಳುವಳಿಗಳಿಗೆ ಅಡಿಪಾಯ ಹಾಕಿದ ಕೆಲವೇ ಜನರಲ್ಲಿ ಸಿದ್ಧಲಿಂಗಯ್ಯ ನವರು ಕೂಡ ಒಬ್ಬರು. ಕನ್ನಡ ಕಾವ್ಯಕ್ಕೆ ವಿಭಿನ್ನ, ಪ್ರತಿಭಟನೆಯ ಸಂವೇದನೆಯನ್ನು ಸೇರಿಸಿದ ಕವಿ ಇವರು. ಇವರ ಹೋರಾಟದ ಹಾಡುಗಳು ಇಂದಿಗೂ ಜನಮಾನಸದಲ್ಲಿ ಚಳುವಳಿ ಗೀತೆಗಳಾಗಿ ಚಲಾವಣೆಯಲ್ಲಿ ಇವೆ. ಕನ್ನಡ ಸಮಾಜವು ಇಂದಿಗೂ ಎದುರಿಸುತ್ತಿರುವ ಹಲವು ಬಿಕ್ಕಟ್ಟುಗಳಿಗೆ ಕೈಮಾರ್ಗ ಆಗುವ ಸಾಮರ್ಥ್ಯ ಇವರಿಗಿದೆ. ಇಂತಹ ಡಾ॥ ಸಿದ್ಧಲಿಂಗಯ್ಯನವರು ೮೧ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ ಆಗಿರುತ್ತಾರೆ. ಇವರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಪರವಾಗಿ ಅಭಿನಂದನೆಗಳು.




**ಹೊಸತಾಗಲಿ ಕನ್ನಡದ ನುಡಿ ಹಬ್ಬ !**

ಕನ್ನಡದ ೮೧ನೇ ನುಡಿಹಬ್ಬಕ್ಕೆ ಶ್ರವಣಬೆಳಗೊಳ ಸಜ್ಜಾಗುತ್ತಿದೆ. ಒಂದರ್ಥದಲ್ಲಿ ಕನ್ನಡಿಗರು ಅಲ್ಪಸಂಖ್ಯಾತರಾಗುತ್ತಿರುವ ಇಂದಿನ ಸಂದರ್ಭದಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಮಾತ್ರ ಕನ್ನಡಿಗರು ಕನ್ನಡ ಡಿಂಡಿಮ ಬಾರಿಸಬೇಕಾದಂತಹ ಪರಿಸ್ಥಿತಿ ಉಂಟಾಗಿದೆ. ಕನ್ನಡದ ಬಗ್ಗೆ ಗೌರವ, ಅಭಿಮಾನಗಳು ಕೇವಲ ವರ್ಷಕ್ಕೊಮ್ಮೆ ನಡೆಯುವ ಜಾತ್ರೆ, ಉತ್ಸವಗಳಿಗೆ ಮಾತ್ರ ಸೀಮಿತವಾಗಬಾರದು. ಅದು ಪ್ರತಿನಿತ್ಯದ ಆಚರಣೆಯಾಗಬೇಕು. ಸಮ್ಮೇಳನ ಹಾಗೂ ಜಾನಪದ, ಜಾತ್ರೆಗಳನ್ನು ನಡೆಸುವ ಮೂಲಕ ಕನ್ನಡದ ಸಂಸ್ಕೃತಿಯನ್ನು ಉಳಿಸಲು ನಾವು ಹೆಣಗುವಂತಹ ಪರಿಸ್ಥಿತಿ ನಿರ್ಮಾಣವಾಗಬಾರದು. ಅದು ನಮ್ಮ ಬುದ್ಧಿ, ಭಾವ ಮತ್ತು ಬದುಕಿನಲ್ಲಿ ಬೆರೆತಾಗ ಮಾತ್ರ ನಾವು ಆ ಭಾಷೆಯನ್ನು ಉಳಿಸಲು ಸಾಧ್ಯ. ಕನ್ನಡ ಕೇವಲ ಭಾಷೆಯಲ್ಲ. ಅದು ಕನ್ನಡಿಗರ ಬದುಕು, ಸಂಸ್ಕೃತಿ ಮತ್ತು ಪರಂಪರೆ ಎಂಬ ಅರಿವನ್ನು ಮೂಡಿಸಬೇಕು. ಕನ್ನಡ ಇಲ್ಲದ ಬಾಳುವೆ ನಮ್ಮ ಬದುಕನ್ನು ಬೆಳಗಿಸಲಾರದು.

ಭಾಷೆಗಿಂತ ಬದುಕು ಮುಖ್ಯ ಎಂದು ಎಲ್ಲರೂ ತಮ್ಮ ಮಕ್ಕಳನ್ನು ಆಂಗ್ಲಮಾಧ್ಯಮ ಶಾಲೆಗಳಿಗೆ ಸೇರಿಸುತ್ತಿದ್ದಾರೆ; ಹಳ್ಳಿಯ ರೈತ, ಕೂಲಿಕಾರನ ಮಕ್ಕಳು, ಶಹರದ ಕೊಳೆಗೇರಿಗಳಲ್ಲಿ ವಾಸಿಸುವ ದುರ್ಬಲ ವರ್ಗದ ಜನರ ಮಕ್ಕಳು ಮಾತ್ರ ಸರ್ಕಾರಿ ಕನ್ನಡ ಶಾಲೆಗೆ ಹೋಗುತ್ತಿದ್ದಾರೆ. ರಾಜಕಾರಣಿಗಳ, ಅಧಿಕಾರಿಗಳ ಹಾಗೂ ಉದ್ಯಮಿಗಳ ಮಕ್ಕಳು ಖಾಸಗಿ ಆಂಗ್ಲಶಾಲೆಗಳಿಗೆ ಹೋಗುತ್ತಿದ್ದಾರೆ. ವೃತ್ತಿಯನ್ನು ಹಿಡಿಯುವುದಕ್ಕಾಗಿ ಭಾಷೆಯನ್ನು ಬಲಿಕೊಡುತ್ತಿದ್ದೇವೆ. ಇದೇ ವಾತಾವರಣ ಮುಂದುವರಿದರೆ ಮುಂದೆ ಕನ್ನಡ ಕೇವಲ ಮೌಖಿಕ ಭಾಷೆಯಾಗಿ ಉಳಿದರೆ ಅಚ್ಚರಿಪಡಬೇಕಾಗಿಲ್ಲ. ಪ್ರಾಥಮಿಕ ಶಿಕ್ಷಣವನ್ನು ಸಬಲಗೊಳಿಸದೆ ವಿಶ್ವವಿದ್ಯಾಲಯಗಳನ್ನು ಸರ್ಕಾರ ಸ್ಥಾಪಿಸುತ್ತಿದೆ. ವಿದೇಶಿ ವಿಶ್ವವಿದ್ಯಾಲಯಗಳಿಗೆ ರತ್ನಗಂಬಳಿ ಹಾಸಿ ಸ್ವಾಗತಿಸಲಾಗುತ್ತಿದೆ. ಇಂತಹ ವಿಶ್ವವಿದ್ಯಾಲಯಗಳಿಂದ ಕನ್ನಡ ಅಸ್ತಿತ್ವಕ್ಕೆ ಎಂತಹ ಕಂಟಕ ಬರಬಹುದು ಎಂಬುದರ ಬಗ್ಗೆ ಯಾರೂ ಯೋಚನೆ ಮಾಡುತ್ತಿಲ್ಲ.

ಗಡಿಭಾಗದ ಕನ್ನಡದ ಸ್ಥಿತಿ ನೆನೆಸಿಕೊಂಡರೆ ಸಂಕಟವಾಗುತ್ತದೆ. ಇತ್ತೀಚೆಗೆ ನಾನು ಬೆಳಗಾವಿ ಜಿಲ್ಲೆಯ ಗಡಿಭಾಗದ ಖಾನಾಪುರ ತಾಲೂಕಿನ ಕುಂಬಾರ್ಡಾ ಎಂಬ ಊರಿಗೆ ಹೋಗಿದ್ದೆ. ಅಲ್ಲಿ ನಮ್ಮ ಕರ್ನಾಟಕ ಸರ್ಕಾರ ಸ್ಥಾಪಿಸಿದ ಮರಾಠಿ ಶಾಲೆಯನ್ನು ನೋಡಿದೆ, ಅದರೊಟ್ಟಿಗೆ ಕನ್ನಡ ಶಾಲೆಯೂ ಅಲ್ಲಿ ಇರಬಹುದೆಂದು ಊರಲ್ಲೆಲ್ಲ ಹುಡುಕಿದೆ. ಎಲ್ಲೂ ಕಾಣಲಿಲ್ಲ ! ಸರ್ಕಾರವೇ ಕನ್ನಡವನ್ನು ಕೊಲ್ಲುತ್ತಿರುವಾಗ ಅದು ಉಳಿಯುವದಾದರೂ ಎಲ್ಲಿ ? ಮಹಾರಾಷ್ಟ್ರ, ಆಂಧ್ರಪ್ರದೇಶ, ತಮಿಳುನಾಡು ಹಾಗೂ ಕೇರಳ ರಾಜ್ಯಗಳ ಗಡಿಗೆ ಹೊಂದಿಕೊಂಡ ಊರುಗಳಿಗೆ ಹೋದರೆ ಅಲ್ಲಿ ಕನ್ನಡಿಗರೇ ಪರಕೀಯರಾಗಿದ್ದಾರೆ.

ಕನ್ನಡ ಉಳಿಯಬೇಕಾದರೆ ಕೇವಲ ಶಿಕ್ಷಣ ಮಾಧ್ಯಮ ಕನ್ನಡವಾದರೆ ಸಾಲದು, ಎಲ್ಲಾ ಪಠ್ಯಪುಸ್ತಕಗಳು ಕನ್ನಡದಲ್ಲಿ ಲಭ್ಯವಾಗಬೇಕು. ಕನ್ನಡಿಗರಿಗೆ ಎಲ್ಲ ಕ್ಷೇತ್ರಗಳಲ್ಲೂ ಉದ್ಯೋಗ ಲಭಿಸುವಂತಾಗಬೇಕು. ಸಾರ್ವಜನಿಕ ಸೇವೆಯಲ್ಲಿರುವವರು ಕಡ್ಡಾಯವಾಗಿ ತಮ್ಮ ಮಕ್ಕಳನ್ನು ಸರ್ಕಾರಿ ಶಾಲೆಗಳಿಗೆ ಸೇರಿಸಬೇಕು. ಸರ್ಕಾರಿ ಮತ್ತು ಖಾಸಗಿ ಕಚೇರಿಗಳಲ್ಲಿ ಹಾಗೂ ಸಾರ್ವಜನಿಕ ವಲಯದಲ್ಲಿ ಕನ್ನಡದ ಬಳಕೆಯನ್ನು ಕಡ್ಡಾಯಗೊಳಿಸಬೇಕು.




ಕನ್ನಡವನ್ನು ಮಾತನಾಡಲು ಹಿಂಜರಿಯುವ ಜನರ ಊರಿನಲ್ಲಿ, ಅಸಹ್ಯವಾಗಿ ಕನ್ನಡವನ್ನು ಮಾತನಾಡುವ ಟಿ.ವಿ. ಚಾನಲ್‌ಗಳು ಇರುವ ಬೆಂಗಳೂರಿನಲ್ಲಿ, ಸಾಹಿತ್ಯ ಸಮ್ಮೇಳನಗಳು ನಿಜವಾದ ಸಾಹಿತಿಗಳಿಗೆ ವೇದಿಕೆಯಾಗಲಿ. ಮರಾಠಿ ಸಾಹಿತ್ಯ ಸಮ್ಮೇಳನಗಳಲ್ಲಿ ರಾಜಕಾರಣಿಗಳು ಕೇವಲ ಪ್ರೇಕ್ಷಕರಾಗಿ ಭಾಗವಹಿಸುತ್ತಾರೆ. ನಮ್ಮಲ್ಲಿಯೂ ಸಹ ಅಲ್ಲಿಯ ಹಾಗೆ ಸಾಹಿತ್ಯದ ಅರ್ಥಪೂರ್ಣ ಚರ್ಚೆಯಾಗಲಿ. ಕತೆ, ಕವನ, ಕಾದಂಬರಿ, ನಾಟಕ ಹಾಗೂ ಇತರ ಪ್ರಕಾರಗಳ ಕುರಿತು ಕಾರ್ಯಾಗಾರ, ತರಬೇತಿ ಹಾಗೂ ಸ್ಪರ್ಧೆಗಳನ್ನು ಏರ್ಪಡಿಸಬೇಕು. ಆಯಾ ವಿಭಾಗಗಳಲ್ಲಿ ಅತ್ಯುತ್ತಮವಾದ ಸಾಹಿತ್ಯ ಪ್ರಕಾರಗಳಿಗೆ ಪ್ರಶಸ್ತಿಯನ್ನು ಕೊಡುವ ಕೆಲಸವಾಗಬೇಕು, ಹಾಗಾದಾಗ ಮಾತ್ರ ಸಮ್ಮೇಳನದ ಉದ್ದೇಶ ಸಫಲವಾಗುತ್ತದೆ ಮತ್ತು ಕನ್ನಡ ತಲೆ ಎತ್ತಲು ಸಾಧ್ಯ.

*ಶಂಕರಹಟ್ಟ* **ಮಹಾಂತೇಶದುರ್ಗ ಎಚ್. ಇ.**

**ವೇಶ್ಯಾವಾಟಿಕೆ**

ವೇಶ್ಯಾವೃತ್ತಿಯನ್ನು ಕಾನೂನುಬದ್ಧವಾಗಿಸಬೇಕೆಂಬ ಬೇಡಿಕೆ ಇದೆ. ಈ ದಂಧೆಯಲ್ಲಿ ತೊಡಗಿಕೊಂಡಿರುವ ಅನೇಕ ಸೋದರಿಯರ ಜೀವನ ಕಥೆಗಳನ್ನು ಕೇಳಿ ಮಮ್ಮಲ ಮರುಗಿ ಅವರ ಒಳಧ್ವನಿಯಾಗಿ ನಾನು ಬರೆಯುತ್ತಿದ್ದೇನೆ. ಈ ಕೊಳಕು ದಂಧೆಯಲ್ಲಿ ತೊಡಗಿಕೊಂಡವರು ಮುಖ್ಯವಾಗಿ ಕಿತ್ತು ತಿನ್ನುವ ಬಡತನದಿಂದ, ವಿಲಾಸಿ ಜೀವನದ ವ್ಯಾಮೋಹದಿಂದ, ಕೆಲವುಸಲ ತಿಳಿದೋ ತಿಳಿಯದೆಯೋ ಯೌವ್ವನದ ಉನ್ಮಾದದಲ್ಲಿ ಪ್ರೇಮಪಾಶಕ್ಕೆ ಸಿಲುಕಿ ವಂಚನೆಗೆ ಈಡಾದಾಗ, ರಸ್ತೆಗೆ ಬಿದ್ದಾಗ, ತನ್ನವರಾರೂ ಇಲ್ಲದಾಗ, ವೇಶ್ಯಾವೃತ್ತಿಗೆ ತಳ್ಳಲ್ಪಡುವರು. ಇಂಥ ಹೇಯವೃತ್ತಿಯನ್ನು ಕಾನೂನುಬದ್ಧವಾಗಿಸಬೇಕೆ ?

ಕಳೆದೆರಡು ದಶಕಗಳಿಂದ ವೇಶ್ಯಾವಾಟಿಕೆಯು ಊರುಗಳಲ್ಲಿ, ಓಣಿಗಳಲ್ಲಿ, ಮಸಾಜ್ ಪಾರ್ಲರ್‌ಗಳಲ್ಲಿ, ಟೂರಿಸ್ಟ್ ಹೊಟೇಲ್‌ಗಳಲ್ಲಿ, ಸಮುದ್ರಯಾನ ಹಡಗುಗಳಲ್ಲಿ, ಐಶಾರಾಮಿ ಹೊಟೇಲ್‌ಗಳಲ್ಲಿ ಎಗ್ಗಿಲ್ಲದೆ ಪೊಲೀಸರ ಭಯವಿಲ್ಲದೆ ರಾಜಾರೋಷವಾಗಿ ಚಾಲ್ತಿಯಲ್ಲಿದೆ. ಈ ಪ್ರಕಾರದ ಐಷಾರಾಮ ತಾಣಗಳಿಗೆ ಹೋಗುವಂಥವರು ವಿಕೃತಿಯ ಮನಸ್ಸುಳ್ಳವರು.

ವೇಶ್ಯಾವಾಟಿಕೆಯನ್ನು ತಮ್ಮ ವೃತ್ತಿಯನ್ನಾಗಿಸಿಕೊಂಡ ಮಹಿಳೆಯರಿಗೆ ಕಾನೂನಿನ ರಕ್ಷಣೆ, ಆರೋಗ್ಯ, ಉದ್ಯೋಗ/ಹಣ ಸಿಗುವದೆಂದು ಹೇಳುತ್ತಾರೆ. ಆದರೆ ಅವಳೊಬ್ಬ ಕಾಮುಕನ ತೃಷೆಯ ವಸ್ತುವಾಗುವಳೇ ವಿನಾ ಮೌಲ್ಯವುಳ್ಳ ಮಹಿಳೆಯಾಗಿ ಸಮಾಜದಲ್ಲಿ ಗೌರವಕ್ಕೆ ಪಾತ್ರಳಾಗಲಾರಳು. ಮುಂದಿನ ದಿನಗಳಲ್ಲಿ ಅವಳೇ ಒಂದು ಕೊಳಕು ಸಮಾಜದ ಸೃಷ್ಟಿಗೆ ಭೀಕರ ಕರ್ತೃ ಆಗುವಳು. ಇದನ್ನು ಅರಿತು ಸಮಾಜದಲ್ಲಿ ಲೈಂಗಿಕ ಕಾರ್ಯಕರ್ತೆಯರ ಬಗ್ಗೆ ಸರ್ಕಾರ ಗಂಭೀರವಾಗಿ ಪರಿಗಣಿಸಬೇಕಾಗಿದೆ. ಈ ಅನಿಷ್ಟ ಪದ್ಧತಿಯನ್ನು ತೊಲಗಿಸಲು ಜವಾಬ್ದಾರಿಯುತ ಸರ್ಕಾರ, ಸಂಘ/ಸಂಸ್ಥೆಗಳು ಇಂದು ತುರ್ತಾಗಿ ವಿಚಾರಮಾಡಬೇಕಾಗಿದೆ.

ಇಂದಿನ ಅಗತ್ಯವೆಂದರೆ ಸಾಮಾಜಿಕ ವಾತಾವರಣ ತಿಳಿಯಾಗಲು ಮಹಿಳೆಯರಿಗೆ ಘನತೆ, ಗೌರವ ತರಿಸುವಂತಹ ಕಾರ್ಯಗಳು ನಡೆಯಬೇಕಾಗಿದೆ. ಇಂದು ಮಾಧ್ಯಮಗಳಲ್ಲಿ ಮಹಿಳೆಯರನ್ನು ಅಶ್ಲೀಲವಾಗಿ ತೋರಿಸುವುದನ್ನು ನಿಲ್ಲಿಸಬೇಕು. ಸಿನಿಮಾ ಸಾಹಿತ್ಯದಲ್ಲಿ ಅವಳನ್ನು ಗೌರವಿಸುವಂತಹ ಚಿತ್ರಗಳು ನಿರ್ಮಾಣವಾಗಬೇಕು. ಇಂಟರ್ನೆಟ್ ಮೊಬೈಲ್‌ಗಳಲ್ಲಿ ಹಸಿಹಸಿಯಾದ ನೀಲಿ ಚಿತ್ರಗಳನ್ನು ತಡೆಗಟ್ಟಬೇಕು. ಇವೆಲ್ಲವೂ ಕಾಮಪ್ರಚೋದಕ ತಾಣಗಳಾಗಿರುವುದರಿಂದ ಮಹಿಳೆಯರಿಗೆ ಇವುಗಳಿಂದಲೇ ದೊಡ್ಡ ಆಘಾತವಾಗುತ್ತಿದೆ.

ವಿಜಯಪುರ **ಲಲಿತಾ ಬಿಜ್ಜರಗಿ**

**ಭಾರತೀಯ ಅರಣ್ಯಗಳು – ಒಂದು ವಿವೇಚನೆ**

ಇಂದಿನ ದಿನಗಳಲ್ಲಿ ಭೂಕಬಳಿಕೆ ಅಧಿಕವಾಗಿದೆ. ಸಚಿವರು ಹಾಗೂ ಜನಪ್ರತಿನಿಧಿಗಳೇ ಈ ಕಾರ್ಯದಲ್ಲಿ ಮುಂಚೂಣಿಯಲ್ಲಿದ್ದಾರೆ. ಹೀಗಾಗಿ ಅರಣ್ಯಗಳು ಮಾಯವಾಗತೊಡಗಿವೆ. ಅರಣ್ಯಗಳು, ಪ್ರಾಕೃತಿಕ ಸಂಪನ್ಮೂಲಗಳು ರಾಷ್ಟ್ರದ ಪ್ರಗತಿಗೆ ಅನಿವಾರ್ಯ. ಆದುದರಿಂದ ಅವನ್ನು ಕಾಪಾಡಿಕೊಂಡು ಹೋಗಬೇಕಾದುದು ಸರಕಾರದ ಕರ್ತವ್ಯ. ಜನಸಂಖ್ಯೆಯ ಒತ್ತಡದಿಂದ ಹಾಗೂ ವಿಕಾಸದ

ಹೆಸರಿನಲ್ಲಿ ಅರಣ್ಯಗಳ ಒತ್ತುವರಿ ಎಗ್ಗಿಲ್ಲದಂತೆ ಸಾಗಿದೆ. ಭೂಕಬಳಿಕೆ ಮತ್ತಿತರ ಕಾರಣಗಳಿಂದಾಗಿ ಅರಣ್ಯಗಳು ನಾಶವಾಗತೊಡಗಿವೆ.

ಅರಣ್ಯ ರಕ್ಷಣೆಗೆ ಸರಕಾರ ಹಲವಾರು ನಿಯಮಗಳನ್ನು ಜಾರಿಗೆ ತಂದಿದೆ. ಹಾದಿಹೋಕರು ಬೀಡಿ, ಸಿಗರೇಟ್ ಸೇದಿ ಅವನ್ನು ಹುಲ್ಲಿನ ಮೇಲೆ ಎಸೆಯದಂತೆ ಅಡವಿಯ ಬದಿಯ ಹುಲ್ಲನ್ನು ಕಾಲಕಾಲಕ್ಕೆ ಕೊಯ್ಯಬೇಕು. ಸರಕಾರವು ಹೊಸ ಹೊಸ ಪ್ರದೇಶಗಳಲ್ಲಿ ಅಡವಿಯನ್ನು ಬೆಳೆಸಬೇಕು. ಈ ನಿಟ್ಟಿನಲ್ಲಿ ಸಾಮಾಜಿಕ ಅರಣ್ಯದ ಯೋಜನೆಯು ಶ್ಲಾಘನೀಯ. ಕಾಡುಪ್ರದೇಶದಲ್ಲಿ ಉಗಿಬಂಡಿಯ, ಅಂದರೆ ರೈಲಿನ ಕಿಡಿಗಳು ಹಾರದಂತೆ ನೋಡಿಕೊಳ್ಳಬೇಕು.

ಕಾಡು ಜನರು ಇಲಿಗಳನ್ನು ಹಿಡಿಯಲು ಬೆಂಕಿ ಹಾಕುತ್ತಾರೆ. ಅದನ್ನು ತಪ್ಪಿಸಬೇಕು. ಕುರುಬರು ಮತ್ತು ಗೌಳಿಗರು ಸುಟ್ಟ ನೆಲದಲ್ಲಿ ಹುಲ್ಲು ಬೇಗನೆ ಬೆಳೆಯುತ್ತದೆಂದು ಒಣಹುಲ್ಲಿಗೆ ಬೆಂಕಿ ಹಚ್ಚುತ್ತಾರೆ. ಇದಕ್ಕೆ ಕಡಿವಾಣ ಹಾಕಬೇಕು.

ರಾಷ್ಟ್ರೀಯ ವಿಕಾಸಕ್ಕೆ ಕಾಡುಗಳ ಅಭಿವೃದ್ಧಿ ಅನಿವಾರ್ಯ. ಹೀಗಾಗಿ ೧೯೫೨ರಲ್ಲಿ ಭಾರತ ಸರಕಾರ ಧೋರಣೆಯೊಂದನ್ನು ನಿರೂಪಿಸಿತು. ಆದರೆ ಆ ಧೋರಣೆ ಕೇವಲ ಧೋರಣೆಯಾಗೇ ಉಳಿದಿರುವುದು ಖೇದನೀಯ.

ಕಾಡುಗಳಿದ್ದರೆ ಹವಾಮಾನ ಉತ್ತಮವಾಗಿರುತ್ತದೆ. ಕಾಡಿನಿಂದ ಭೂಸಂರಕ್ಷಣೆಯಾಗಿ ಭೂಮಿ ಫಲವತ್ತಾಗಿರುತ್ತದೆ. ಕಾಡಿನಿಂದ ಪ್ರವಾಹಗಳನ್ನು ತಡೆಗಟ್ಟಬಹುದು. ಕಾಡುಗಳಿಂದ ಮಾನವರ ಆರೋಗ್ಯ ಸುಧಾರಿಸುತ್ತದೆ.

ಈ ಎಲ್ಲಾ ಅಂಶಗಳ ಅರಿವಿದ್ದರೂ ಮಾನವರು ಕಾಡುಗಳನ್ನು ನಾಶಗೊಳಿಸುತ್ತಿರುವುದು ಶೋಚನೀಯ.

*ಬೆಂಗಳೂರು* **ಪ್ರೊ ॥ ಎಂ. ಧ್ರುವನಾರಾಯಣ**

**ಪ್ರೊ ॥ ಎನ್. ಬೋರಲಿಂಗಯ್ಯನವರ 'ಕಡಿವಾಣ' ಕಾದಂಬರಿ – ನನ್ನ ಅನಿಸಿಕೆಗಳು**

✉ ಯುವರಾಜ ಕಾಲೇಜಿನಲ್ಲಿ ನಾನು ಭೌತ ವಿಜ್ಞಾನದ ಅಧ್ಯಾಪಕನಾಗಿ ಸೇರಿದ್ದ ಹೊಸತರಲ್ಲಿ ಪ್ರೊ॥ ಎನ್. ಬೋರಲಿಂಗಯ್ಯನವರು ಕನ್ನಡ ಪ್ರಾಧ್ಯಾಪಕರಾಗಿದ್ದರು. ಒಮ್ಮೊಮ್ಮೆ ನಾನು ಕಾಲೇಜಿನ ಹಿಂಭಾಗದ ಕೊಠಡಿಗಳ ಮಾರ್ಗವಾಗಿ ಗಣಿತ ವಿಭಾಗಕ್ಕೆ ಅಥವಾ ಎಲೆಕ್ಟ್ರಾನಿಕ್ಸ್ ಪ್ರಯೋಗಾಲಯಕ್ಕೆ ಹೋಗುತ್ತಿದ್ದಾಗ ಕಿಕ್ಕಿರಿದು ತುಂಬಿರುತ್ತಿದ್ದ ಕನ್ನಡ ತರಗತಿಗಳೂ ಕಣ್ಣಿಗೆ ಬೀಳುತ್ತಿದ್ದವು. ಪ್ರೊ॥ ಬೋರಲಿಂಗಯ್ಯನವರು ಪಾಠ ಮಾಡುತ್ತಿದ್ದುದನ್ನು, ವಿದ್ಯಾರ್ಥಿಗಳೂ ಗುರುಗಳ ಕಡೆಗೇ ದೃಷ್ಟಿಯನ್ನು ಕೇಂದ್ರೀಕರಿಸಿ ತದೇಕಚಿತ್ತರಾಗಿ ಪಾಠ ಕೇಳುತ್ತಿದ್ದುದನ್ನು ಕಂಡು ಪ್ರೊಫೆಸರರ ಬಗ್ಗೆ ಅಸೂಯೆಪಡುತ್ತಿದ್ದೆ. ಅವರು ಪಾಠ ಮಾಡುವುದನ್ನು ಅವರಿಗೂ ವಿದ್ಯಾರ್ಥಿಗಳಿಗೂ ಕಾಣದಂತೆ ಗೋಡೆಯ ಮರೆಯಲ್ಲಿ ಹೇಗೋ ನಿಂತು ಅವರನ್ನೇ ಗಮನಿಸುತ್ತಿದ್ದೆ. ಆಗೆಲ್ಲ ನನ್ನ ಕಣ್ಣಿಗೆ ಕಾಣುತ್ತಿದ್ದುದು ಒಂದೇ ನೋಟ. ಶ್ರೀ ಬೋರಲಿಂಗಯ್ಯನವರು ಉತ್ಸಾಹದ ಚಿಲುಮೆಯಂತೆ, ಯಾರನ್ನೂ ನಿರ್ದಿಷ್ಟವಾಗಿ ನೋಡದಿದ್ದರೂ, ಕೇಳುತ್ತಿದ್ದವರಿಗೆ ತಮ್ಮನ್ನೇ ನೋಡುತ್ತಿದ್ದಾರೆ ಎನ್ನಿಸುವಂತೆ ಅವರು ಉಪನ್ಯಾಸ ನೀಡುತ್ತಿದ್ದರು. ಕಾಲೇಜಿನ ಸಮಾರಂಭಗಳಲ್ಲೂ ಅವರು ಆಗಾಗ್ಗೆ ಭಾಷಣ ಮಾಡುತ್ತಿದ್ದರು. ಅಂತಹ ಭಾಷಣಗಳಲ್ಲಿ ದೇಶದ ಒಳಿತಿನ ಬಗೆಗೆ, ಸರಳ ಜೀವನದ ಕಡೆಗೆ, ಜಾತಿರಹಿತ, ವರ್ಗರಹಿತ ಸಮಾಜದ ಕಡೆಗೆ, ಶ್ರಮದ ದುಡಿಮೆಯ ಕಡೆಗೆ ಇವೇ ಮುಂತಾದ ಸದ್ವಿಚಾರಗಳ ಕಡೆಗೆ ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದುದು, ಅವುಗಳ ಕುರಿತು ಹೆಚ್ಚು ಒತ್ತುಕೊಟ್ಟಿರುತ್ತಿದ್ದುದು ಕಾಣಿಸುತ್ತಿತ್ತು.

ಪ್ರೊ॥ ಬೋರಲಿಂಗಯ್ಯನವರ 'ಕಡಿವಾಣ' ಕಾದಂಬರಿ ಲೋಕಾರ್ಪಣೆಗೊಂಡ ಸಮಾರಂಭದಲ್ಲಿ ನಾನೂ ಇದ್ದೆ. ಡಾ॥ ಜಿ. ರಾಮಕೃಷ್ಣರವರು ಕೃತಿಯನ್ನು ಮನಮುಟ್ಟುವಂತೆ ಸುದೀರ್ಘವಾಗಿ ತಮ್ಮ ವಿಮರ್ಶೆಯನ್ನು ಸೊಗಸಾಗಿ ಮಂಡಿಸಿದ್ದರು. ಅಷ್ಟೇ ಸೊಗಸಾಗಿ ಪ್ರೊ॥ ಕೃಷ್ಣೇಗೌಡರೂ ಹಾಗೆಯೇ ಅಂದಿನ ಕಾರ್ಯಕ್ರಮದ ನಿರೂಪಕರೂ ಅತ್ಯಂತ ಆತ್ಮೀಯತೆಯ ಮಾತುಗಳನ್ನು ಬೋರಲಿಂಗಯ್ಯನವರ ಬಗೆಗೆ ಆಡಿದ್ದು ಕೂಡ ಇನ್ನೂ ನೆನಪಿದೆ. 'ಕಡಿವಾಣ' ಕಾದಂಬರಿಯನ್ನು ಓದಲೇಬೇಕೆಂದು ಅನ್ನಿಸಿ ಕಾರ್ಯಕ್ರಮ ಇನ್ನೇನು ಮುಗಿಯುತ್ತದೆ ಎನ್ನುವಾಗಲೇ (ಅಕಸ್ಮಾತ್ ಅಲ್ಲಿ ಪ್ರತಿಗಳೂ ತೀರಿಹೋಗಿಬಿಟ್ಟರೆ !) ಹೊರಗೆ ಬಂದು ಅಲ್ಲಿಯೇ ಕಾದಂಬರಿಯನ್ನು ಕೊಂಡು ಮನೆಗೆ ಬಂದೆ. ಒಂದು ವಾರಕ್ಕಿಂತಲೂ ಕಡಿಮೆ ಅವಧಿಯಲ್ಲಿ ಓದಿ ಮುಗಿಸಿದ ನನಗೆ ಕುತೂಹಲಕಾರಿಯಲ್ಲದಿದ್ದರೂ ಸಹಜವೆನಿಸಿದ, ರೋಚಕವಲ್ಲದಿದ್ದರೂ ಸರಾಗವಾಗಿ ಓದಿಸಿಕೊಳ್ಳುವ, ನಗರ ಜೀವನದ ಆಡಂಬರ ಫ್ಯಾಂಟಸಿಗಳಿಲ್ಲದೆ ಗ್ರಾಮೀಣ ಬದುಕಿನ ವಾಸ್ತವವನ್ನೂ ಮೈಗೂಡಿಸಿಕೊಂಡಿರುವಂತಹ ಕಾದಂಬರಿಯೊಂದನ್ನು ಓದಿದ ತೃಪ್ತಿ ಸಿಕ್ಕಿತು. ಓದುತ್ತಿದ್ದ ಆ ಐದಾರು ದಿನಗಳಲ್ಲಿ ಮಲಗುವ ವೇಳೆ ಒಂದು ರೀತಿಯ ಸಂತೃಪ್ತ ಭಾವದಿಂದ ಸುಖನಿದ್ದೆಗೈದದ್ದು ಜ್ಞಾಪಕ.

ಎಲ್ಲೆಲ್ಲಿ ಸಾಧುವೋ ಸಿಂಧುವೋ ಅಲ್ಲಲ್ಲಿ ವೈಜ್ಞಾನಿಕ ಮೌಲ್ಯಗಳನ್ನು ಆಧರಿಸಿದ ಮತ್ತು ವಿಜ್ಞಾನದಾಚೆಗೂ ಉಳಿದುಕೊಳ್ಳುವ ಇನ್ನಿತರ ಸಂದರ್ಭಗಳಲ್ಲಿ ವೈಚಾರಿಕ ಮೌಲ್ಯಗಳನ್ನು ಆಧರಿಸಿದ ಅಡಿಪಾಯದ ಮೇಲೆ ವ್ಯಷ್ಟಿ ಮತ್ತು ಸಮಷ್ಟಿಯ ಬದುಕು ನಿಂತಿರಬೇಕೆಂಬ ನನ್ನ ಅಪ್ರಬುದ್ಧ ಆಶಯಕ್ಕೆ ಪಾರ್ಶ್ವ ಸಹಸ್ಪಂದನೆಯನ್ನು ಇಲ್ಲಿ ಕಂಡದ್ದು ಈ ಕಾದಂಬರಿಯನ್ನು ಮೆಚ್ಚಲು ವೈಯಕ್ತಿಕ ಕಾರಣವೆನಿಸುತ್ತದೆ. ಶ್ರೀ ಬೋರಲಿಂಗಯ್ಯನವರಂತೂ ಎಲ್ಲರ ಬದುಕಿಗೆ ವಿಜ್ಞಾನ ದೀವಿಗೆಯ ಬೆಳಕೇ ಬೇಕು ಅದೊಂದೇ ಸಾಕು ಎನ್ನುವವರು, ಅದನ್ನೇ ತಮ್ಮ ಬದುಕಲ್ಲೂ ಕಂಡವರು,

## ಮಡೆಸ್ನಾನ – ಎಡೆಸ್ನಾನ

ಮಡೆಸ್ನಾನ ಎಡೆಸ್ನಾನ ಎರಡೂ ಒಂದೇ
ಒಂದೇ ರಾಕ್ಷಸ ನಾಣ್ಯದ ಎರಡು ಮುಖಗಳು !
ಅಳಿಯ ಅಲ್ಲ ಮಗಳ ಗಂಡ ಎಂದಂತೆ
ಹಳೇ ವೈನ್ ಹೊಸ ಬಾಟಲಿಗೆ ಹಾಕಿ
ಸೀಲ್ ಮಾಡಿ ಮಾರಾಟಕ್ಕಿಟ್ಟಂತೆ !
ಮೂಢನಂಬಿಕೆಗಳ ವ್ಯಾಪಾರ ಭರ್ಜರಿ
ದೇವರ ಹುಂಡಿ ಗಲ್ಲಾಪೆಟ್ಟಿಗೆ ಭರಪೂರ !
ಮಠಮಾನ್ಯ ಷೇರ್‌ಹೋಲ್ಡರ್ ಮಠಾಧೀಶರಿಂದ
ತಂತಿ ಮೇಲಿನ ನಡಿಗೆ ದೊಂಬರಾಟ
ಷೇರ್ ಪಾತಾಳಕ್ಕಿಳಿಯದಂತೆ ತಡೆಯಲು.
ಜನ ಮರುಳೋ ? ಜಾತ್ರೆ ಮರುಳೋ ?
ಹೇಸಿಗೆ ಮರುಳೋ ಶಂಭುಲಿಂಗಾ ?

ಉಸಿರಿರುವವರು ಉಂಡು ಎಸೆದ
ಯ್ಯೂಸ್ ಆ್ಯಂಡ್ ಥ್ರೋ ಎಂಜಿಲೆಲೆ ಮೇಲೆ
ಉಸಿರಿಲ್ಲದವರ ನಂಬಿಕೆಗಳ ಉರುಳಾಟ
ಅಂಗಾಂಗಗಳ ಹೊರಳಾಟ, ನರಳಾಟ ಮುಂದೆ
ಕುಕ್ಕೆಯೊಳಗಿಲ್ಲದ ಸುಬ್ರಹ್ಮಣ್ಯ ಮೂಕ ಪ್ರೇಕ್ಷಕ !
ಅದಕೆ ವಿಶ್ವೇಶ್ವರ ತೀರ್ಥರ ಘಂಟಾ ನಾದದ ನೈವೇದ್ಯ
ನ್ಯಾಯಾಲಯದ ನಾದಸ್ವರ

ನಂಬಿಕೆ, ಆಚರಣೆ, ಸಂಪ್ರದಾಯದ ಹೆಸರಲ್ಲಿ
ಮತ್ತದೇ ಅಜ್ಜ ನೆಟ್ಟ ಆಲದ ಮರಕೆ
ನೇಣಿಗೇರಿಸುವ ಹುನ್ನಾರ

ಇಲ್ಲಿ ಕಾನೂನಿಗೂ ಕಣ್ಣು ಮಂಜಾಗಿ
ಪೊರೆ ಬಂದಿದೆ ದೊಡ್ಡದಾಗಿ
ವೈಜ್ಞಾನಿಕ ಡಿಜಿಟಲ್ ಆಪರೇಷನ್
ಮಾಡಿ ಪೊರೆ ಹರಿಯಬೇಕಾಗಿದೆ.

ಕುರಿಗಳು ಬಲಿತಷ್ಟೂ ಕಟುಕನಿಗೇ ಲಾಭ
"ಬಕ್ರಿಕಾ ಬಲಿ"ಗಾಗಿ
ಮತ್ತಷ್ಟು ಕುರಿಗಳು ಕೊರಳೊಡ್ಡಿ ಕಾಯುತ್ತಿವೆ
ಗೊಡ್ಡು ಸಂಪ್ರದಾಯದ ನೇಣಿಗೇರಲು.

ಮಡಿವಂತರೇ ಮಾಡದ ಮಡೆಸ್ನಾನಕೆ
ಸ್ನಾನವೇ ಗತಿಯಿಲ್ಲದ ಗತಿಗೇಡಿಗಳಿಗೇಕೆ
ಈ ನೇಣಿನ ಉರುಳು ?

**ಸಂಗಮೇಶ ಉಪಾಸೆ**

೨೭೩, 'ಪ್ರೇಮಸಂಗಮ', ೩ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ವಿಧಾನಸೌಧ ಲೇಔಟ್, ಲಗ್ಗೆರೆ, ಬೆಂಗಳೂರು-೫೬೦೦೫೮

ಕಾದಂಬರಿಯ ಪುಟಪುಟದಲ್ಲೂ ಇದು ಮಾರ್ದನಿಗೊಂಡಿರುವುದನ್ನು ಗಮನಿಸಿದರೆ ತಾವು ಮನಗಂಡ ಸತ್ಯವನ್ನು ಸಮಾಜದ ಹಿತಕ್ಕಾಗಿ ಸಕ್ಷೇಮ ಬೆಳವಣಿಗೆಗಾಗಿ ಅನಾವರಣಗೊಳಿಸಬೇಕೆಂಬ ಆಲೋಚನೆಯನ್ನೇ ಕೃತಿರೂಪದಲ್ಲಿ ಸಾಕ್ಷಾತ್ಕಾರಗೊಳಿಸಿದ್ದಾರೆ ಎನಿಸುತ್ತದೆ.

ಕಾದಂಬರಿಯ ತುಂಬೆಲ್ಲ ಸತ್ಯ ಮತ್ತು ಸೌಂದರ್ಯ ಅನಾವರಣಗೊಂಡಿವೆ ಎಂದು ನನಗನ್ನಿಸಿದೆ. ಪ್ರಕೃತಿಯು ಗ್ರಾಮೀಣ ಹಿನ್ನೆಲೆಯಲ್ಲಿ ತನ್ನ ಸಹಜ ಸೌಂದರ್ಯದಿಂದ ಕಂಗೊಳಿಸಿದರೆ ಇಲ್ಲಿನ ಪಾತ್ರಗಳು ಮಾನವೀಯ ಮೌಲ್ಯ ಮತ್ತು ವೈಜ್ಞಾನಿಕ ದೃಷ್ಟಿಕೋನಗಳಿಗೆ ತೆರೆದ ಹೃದಯ ಹಾಗೂ ಮನಸ್ಸುಗಳೊಂದಿಗೆ ಸ್ಪಂದಿಸಿ ಓದುಗರಿಗೆ ಸನ್ನಡತೆಯ ದರ್ಶನ ಮಾಡಿಸುತ್ತವೆ. ಬದುಕಿಗೆ ಇವೆರಡೇ ಸಾಕು ಎನ್ನುವುದನ್ನು ಬೆಂಬಲಿಸುವ ಶ್ರೀ ಬೋರಲಿಂಗಯ್ಯನವರಿಗೆ ಅಧ್ಯಾತ್ಮದ ಕಡೆಗೆ ಅಷ್ಟಾಗಿ ಒಲವಿಲ್ಲ, ಅದು ಬದುಕಿಗೆ ಅನಿವಾರ್ಯವೂ ಅಲ್ಲವೆಂಬುದು ಅವರ ನಿಲುವು. ಕಾದಂಬರಿಯಲ್ಲಿ ಅಧ್ಯಾತ್ಮದ ವಿಚಾರ ಬಂದಾಗ ಕೇವಲ ಪ್ರಾಸಂಗಿಕ ವಿವರಣೆ ಕೊಟ್ಟು ಅದರ ಬಿಸಿಲಿನ ಝಳಕ್ಕೆ ಮೈಮನಗಳನ್ನೊಡ್ಡದೆ ಧಾವಿಸಿ ವಿಜ್ಞಾನದ ಪ್ರಕೃತಿ ಸೌಂದರ್ಯದ ಸಾಲುಮರಗಳ ನೆರಳಲ್ಲಿ ನಡೆಯಲಿಚ್ಛಿಸುತ್ತಾರೆ. ವಿಜ್ಞಾನದ ಕಾರಣಗಳನ್ನು ಕೊಡುವಾಗ ಉತ್ಸಾಹದೊಡನೆ ಪ್ರತ್ಯಕ್ಷ ಸಾಕ್ಷಿಗಳಾಗುವ ಪಾತ್ರಗಳು ಅಧ್ಯಾತ್ಮದ ವಿಷಯ ಬಂದಾಗ ಅಷ್ಟೇನೂ ಉತ್ಸಾಹ ತೋರದೆ ಕೇವಲ ಪರೋಕ್ಷ ಬೆಂಬಲ ಕೊಡುತ್ತವೆ ಎನಿಸುತ್ತದೆ. ಎಲ್ಲ ಮುಖ್ಯ ಪಾತ್ರಗಳೂ ವಿಜ್ಞಾನದ ಬಗೆಗಿನ ನಿಲುವು ಬಂದಾಗ ಲೇಖಕರ ಮನದಿಂಗಿತವನ್ನು ಅರಿತು ಮಾತನಾಡುತ್ತವೆ ಎನಿಸುತ್ತದೆ. ಮಕ್ಕಳಿಗೆ ಶ್ರೀಲಕ್ಷ್ಮಿಯು ಗೆಲಿಲಿಯೋನ ಕತೆ ಹೇಳುತ್ತಿದ್ದಾಗ ಮಾಯಮ್ಮ ಎಂಬಾಕೆ 'ಅಯ್ಯೋ ಪಾಪಿಗಳೇ, ಸತ್ಯ ಹೇಳಿದ್ರೂ ಕಲ್ಲು ಹೊಡೆದು ಸಾಯಿಸ್ತೀವಿ ಅಂತೀರಲ್ರೋ' ಎಂದು ಕೊರಗುವುದನ್ನು ಕಾಣುತ್ತೇವೆ. ಅಧ್ಯಾತ್ಮಕ್ಕೆ ಅಷ್ಟಾಗಿ ಎಳಸದ ಲೇಖಕರ ಮನಸ್ಸು ಊರಲ್ಲಿನ ಜಾತ್ರೆಯೋ ಅಥವಾ ಹಬ್ಬವೋ ಬಂದಾಗ, ಆ ಸಂದರ್ಭಗಳನ್ನು ಗ್ರಾಮೀಣ ಬದುಕಿನ ಶ್ರಮ ಜೀವಿಗಳ ಸಂಸ್ಕೃತಿಯ ಪ್ರತೀಕವೆಂದು ಪರಿಗಣಿಸಿ, ಸಂಭ್ರಮ ಉತ್ಸಾಹಗಳಿಂದ ವರ್ಣಿಸುತ್ತದೆಯೇ ಹೊರತು ಜನಪದರ ಮುಗ್ಧ ಸಂತೃಪ್ತತೆಯ ಆಳಕ್ಕೆ ತರ್ಕದ ಗಾಳವನ್ನೆಸೆದು ದೋಷಗಳನ್ನು ಹೊರಕ್ಕೆ ತೆಗೆಯುವ ಪ್ರಯತ್ನ ಮಾಡುವುದಿಲ್ಲ.

ವಿಜ್ಞಾನದ ಪರಿಕಲ್ಪನೆಗಳನ್ನು, ಸಿದ್ಧಾಂತಗಳ ಸಾರವನ್ನು, ಸೂತ್ರಗಳ ಅರ್ಥವನ್ನು ವಿವರಿಸುವಲ್ಲಿ ಅತ್ಯಂತ ಆಸಕ್ತಿ ತಳೆಯುವ ಶ್ರೀ ಬೋರಲಿಂಗಯ್ಯನವರು ಸಾಕಷ್ಟು ಎಚ್ಚರಿಕೆಯನ್ನೂ ವಹಿಸಿದ್ದಾರೆ. ಆದರೂ ಭೂಮಿ ಮತ್ತು ಸೂರ್ಯರನ್ನು ಸುತ್ತುವ ಚಂದ್ರನಿಗೆ ಎರಡು ಚಲನೆಗಳಿವೆ ಎನ್ನುವಾಗ ಚಂದ್ರ ತನ್ನ ಸುತ್ತಲೂ ಸುತ್ತುವುದನ್ನು ಹೇಳಲು ಮರೆತಂತೆ ಕಾಣುತ್ತದೆ. [ಹೀಗೆ ವಿಶೇಷ ರೀತಿಯಲ್ಲಿ ಸುತ್ತುವುದರಿಂದ ತಾನೇ ಭೂಮಿಯ ಮೇಲಿನ ನಮಗೆ ಯಾವಾಗಲೂ ಚಂದ್ರನ ಒಂದು ಪಾರ್ಶ್ವ (ಬೋಧಿಸತ್ವನಿಗೆ ತನ್ನ ಮಾಂಸವನ್ನೇ ಆಹಾರವಾಗಿ ಕೊಡಲು ಬೆಂಕಿಗೆ ಹಾರಿದ ಮೊಲವಿರುವ ಭಾಗ) ಮಾತ್ರ ಕಾಣುತ್ತದೆ] ಒಂದು ಗ್ರಾಂ ವಸ್ತುವಿನಲ್ಲಿರುವ ಶಕ್ತಿಯನ್ನು ಕುದುರೆಗಳ ಶಕ್ತಿಯೊಡನೆ ಹೋಲಿಸುವಾಗಲೂ ಸ್ವಲ್ಪ ಏರುಪೇರಾಗಿರುವುದು ನನ್ನ ಗಮನಕ್ಕೆ ಬಂತು. ಶ್ರೀ ಬೋರಲಿಂಗಯ್ಯನವರು ಕನ್ನಡ ಪ್ರಾಧ್ಯಾಪಕರಾದ್ದರಿಂದ ಕಾದಂಬರಿಯಲ್ಲಿ ವಿಜ್ಞಾನದ ದೃಷ್ಟಿಯಿಂದ ಸಣ್ಣಪುಟ್ಟ ಕೊರತೆಗಳು ಕಂಡರೂ ಇನ್ನುಳಿದೆಲ್ಲ ಕಡೆ ಕನ್ನಡದಲ್ಲಿ ವಿಜ್ಞಾನವನ್ನು ಎಲ್ಲ ಓದುಗರಿಗೆ ತಿಳಿಯುವಂತಹ ರೀತಿಯಲ್ಲಿ ಬರೆದಿರುವುದು ಅವರ ಬೋಧನಾ ಪ್ರಾವೀಣ್ಯತೆಯನ್ನು ಮತ್ತು ಕನ್ನಡ ಭಾಷೆಗೆ ವಿಜ್ಞಾನದ ಸಿದ್ಧಾಂತಗಳ ಜಟಿಲ ಅರ್ಥಗಳನ್ನು ಸಮರ್ಥವಾಗಿ ಅಭಿವ್ಯಕ್ತಗೊಳಿಸುವಷ್ಟು ಶ್ರೀಮಂತಿಕೆ ಇರುವುದನ್ನು ಪ್ರತ್ಯಕ್ಷವಾಗಿ ತೋರಿಸಿದೆ.

ಕಾಲವನ್ನು ಬೇಕೆಂತಲೇ ಹಿಂದಕ್ಕೆ ಓಡಿಸುವುದು ಬೋರಲಿಂಗಯ್ಯನವರ ಕತೆ ಹೇಳುವ ವಿಧಾನ. ಕಾದಂಬರಿ ಪ್ರಾರಂಭವಾಗುವುದೇ ಜವನಕ್ಕನ ಬದುಕಿನ ಒಂದು ಮಧ್ಯಂತರ ಸ್ಥಿತಿಯಲ್ಲಿ. ಪಾತ್ರಗಳು ಒಟ್ಟಾಗಿ ಕಾದಂಬರಿಯಲ್ಲಿ ಪಯಣಿಸುವುದಿಲ್ಲ. ಕೆಲವು ಪಾತ್ರಗಳನ್ನು ಕಾಲದೊಂದಿಗೆ ಹೆಜ್ಜೆಯಿಡಿಸುತ್ತ ಕರೆತಂದು ಅಲ್ಲೊಂದು ಕಡೆ ನಿಲ್ಲಿಸಿ ಇನ್ನಿತರ ಪಾತ್ರಗಳನ್ನು ಕರೆದೊಯ್ಯಲು ಕಾಲದ ಹಿಂದೆ ಮತ್ತೆ ಓಡುತ್ತಾರೆ.

ಬೆಳೆಯುವ ಭೂಮಿ ಪ್ರಯೋಗಶಾಲೆಯಾದರೆ ಒಕ್ಕಲುತನವೇ ಒಂದು ಪ್ರಯೋಗ. ಹಳ್ಳಿಗಾಡಿನ ರೈತಾಪಿ ಕುಟುಂಬಗಳಲ್ಲಿ ಒಕ್ಕಲುತನ ಮಕ್ಕಳನ್ನೂ ಬಿಡದೆ ಮನೆಯ ಎಲ್ಲರನ್ನೂ ಕಾಯಕಕ್ಕೆ ಹಚ್ಚುತ್ತದೆ. ಭೌತಿಕವಾಗಿ ಪದೇ ಪದೇ ತೊಡಗಿಸಿಕೊಳ್ಳುವ ಯಾವ ದೈಹಿಕ ಶ್ರಮದ ಕೆಲಸವೇ ಆಗಲಿ ಅದನ್ನು ಸುಲಭವಾಗಿ ಅಚ್ಚುಕಟ್ಟಾಗಿ, ಸುಸೂತ್ರವಾಗಿ ನಿಪುಣತೆಯಿಂದ ಮಾಡಬಲ್ಲ ವಿಧಾನಗಳ ಕಡೆ ಮನಸ್ಸು ಹರಿಯುತ್ತದೆ. ವೈಜ್ಞಾನಿಕವಾಗಿ ಆಲೋಚಿಸಿ ಪ್ರಯತ್ನಗಳಿಗೆ ಮತ್ತೆ ಮತ್ತೆ ಕೈಹಾಕಿ ಪರಿಹಾರ ಕಂಡು ಅದನ್ನೇ ತನ್ನ ಅನುಭವವನ್ನಾಗಿಸಿಕೊಳ್ಳುತ್ತದೆ. ವಿಜ್ಞಾನದ ಜ್ಞಾನವನ್ನು ಶಾಲೆಗಳಲ್ಲಿ ಪಠ್ಯಕ್ರಮದ ಚೌಕಟ್ಟಿನಲ್ಲಿ ಕಲಿಸುತ್ತಾರೆ, ನಿಜ. ಆದರೆ ವಿಜ್ಞಾನವನ್ನು ಮೈಗೂಡಿಸಿಕೊಳ್ಳುವಂತಹ, ವಿಜ್ಞಾನದಲ್ಲಿ ತೊಡಗಿಸಿಕೊಳ್ಳುವಂತಹ ಸಂದರ್ಭಗಳು ಶಾಲೆಗಳಲ್ಲಿ ಕಡಿಮೆ ಎನಿಸುತ್ತದೆ. ಇಂತಹ ಕೊರತೆ ನಮ್ಮ ಶಿಕ್ಷಣದಲ್ಲಿರುವುದನ್ನು ಶ್ರೀ ಬೋರಲಿಂಗಯ್ಯನವರು ಗಮನಿಸಿಯೇ ತಮ್ಮ ಕಾದಂಬರಿಯುದ್ದಕ್ಕೂ ವಿಜ್ಞಾನದ ತೊರೆಯನ್ನು ಹರಿಸಿದ್ದಾರೆ, ವಿಜ್ಞಾನ ದೀವಿಗೆಯ ಬೆಳಕಿನಲ್ಲಿ ಇಲ್ಲಿನ ಪಾತ್ರಗಳು ತಾವೂ ಹೊಳೆದು ಇತರರನ್ನೂ ಬೆಳಗಿಸಿವೆ. ಬಾಲಕೃಷ್ಣಗೌಡರು ಭೌತವಿಜ್ಞಾನ ಪ್ರಾಧ್ಯಾಪಕರಾಗಿ ಖಭೌತವಿಜ್ಞಾನದಲ್ಲಿ ಆಸಕ್ತಿಯುಳ್ಳವರಾಗಿ ವೃತ್ತಿ ಮತ್ತು ಪ್ರವೃತ್ತಿಗಳಲ್ಲಿ ವಿಜ್ಞಾನವನ್ನೇ ಉಸಿರಾಡಿದ್ದಾರೆ. ಬದುಕು ವಿಜ್ಞಾನದ ಮಾರ್ಗದರ್ಶನದಲ್ಲಿ ಸಾಗಬೇಕೆಂಬುದನ್ನೇ ತಮ್ಮ ನಿಜಜೀವನದಲ್ಲೂ ಗುರಿಯನ್ನಾಗಿಸಿಕೊಂಡು ಅದರಲ್ಲಿ ಯಶಸ್ಸು, ತೃಪ್ತಿ ಮತ್ತು ಸಾರ್ಥಕತೆಯನ್ನು ಕಂಡಿರುವ ಶ್ರೀ ಬೋರಲಿಂಗಯ್ಯನವರು ಕಾದಂಬರಿಯನ್ನು ಬರೆದಿರುವುದರ ಹಿಂದೆ ಈ ಸತ್ಫಲಗಳನ್ನು ಎಲ್ಲರೂ ಪಡೆಯಲಿ ಎನ್ನುವ ಕಳಕಳಿಯೂ ಆಶಯವೂ ಒತ್ತಾಸೆಯಾಗಿ ನಿಂತಿವೆ ಎಂದು ನನಗನ್ನಿಸಿದೆ. ಭೌತವಿಜ್ಞಾನದ ಉನ್ನತ ಅಂಶಗಳನ್ನು ಹೇಳುವಾಗ ಎಚ್ಚರಿಕೆಯಿಂದ ಸಾಮಾನ್ಯರಿಗೂ ಅರ್ಥವಾಗುವಂತೆ ಬರೆದಿರುವುದು ಅವರಿಗೆ ವಿಜ್ಞಾನದ ಬಗೆಗಿರುವ ವಿಶೇಷ ಆಸಕ್ತಿಯನ್ನೂ ಅವರೊಳಗೆ ಮನೆ ಮಾಡಿರುವ ಅತ್ಯುತ್ತಮ ಬೋಧಕ ಗುಣವನ್ನೂ ಎತ್ತಿ ತೋರಿಸುತ್ತದೆ. ಕನ್ನಡ ಸಾರಸ್ವತಲೋಕದೊಳಗೆ ವಿಹರಿಸುವ ಇವರು ವಿಜ್ಞಾನದ ಒಳತಿರುಳನ್ನು ಸಾಹಿತ್ಯದ ಜೇನಿನೊಡನೆ ಬೆರೆಸಿ ಓದುಗರಿಗೆ ರಸದೌತಣ ನೀಡಿದ್ದಾರೆಂದು ನನ್ನ ಸ್ಪಷ್ಟ ಗ್ರಹಿಕೆ.

ಮೈಸೂರು ***ಕೆ. ಎಸ್. ಮಲ್ಲೇಶ್***

✉ ಶ್ರೀಮತಿ ಹೆಚ್. ಆರ್. ಲೀಲಾವತಿ ಅವರು ಸುಗಮ ಸಂಗೀತದ ಪಿತಾಮಹ ಪಿ. ಕಾಳಿಂಗರಾಯರ ಕುರಿತು ಬರೆದ ಲೇಖನ ಬಹಳ ಅಪರೂಪದ ಲೇಖನ. ಇಂದಿನ ಯುವ ಜನಾಂಗಕ್ಕೆ ಕಾಳಿಂಗರಾಯರು ಒಬ್ಬ ಗಾಯಕ ಎಂದು ಗೊತ್ತೇ ಹೊರತು ಅವರ ಸಾಧನೆ ಮತ್ತು ಬದುಕಿನ ಬಗ್ಗೆ ಅಷ್ಟಾಗಿ ತಿಳಿಯದು. ಕೆಲವು ಯುವಕರಿಗೆ ಅವರ ಹೆಸರೇ ತಿಳಿಯದು. ನಾನು ಚಿಕ್ಕವನಾಗಿರುವಾಗ ಕಾಳಿಂಗರಾಯರ ಅಜ್ಜಿ ಎಮ್. ಲಕ್ಷ್ಮಮ್ಮ ನಮ್ಮೂರಿನಲ್ಲಿ ಒಂದು ದೊಡ್ಡ ಹಳೆಯ ಮನೆಯಲ್ಲಿ ಒಬ್ಬರೇ ಇದ್ದರು. ಎಮ್ಮೆ ಸಾಕಿ ಹಾಲು ಮಾರಿಕೊಂಡು ಜೀವನ ಮಾಡುತ್ತಿದ್ದರು. ಕಾಳಿಂಗರಾಯರು ಆಗಾಗ್ಗೆ ಅಜ್ಜಿಯನ್ನು ನೋಡಲು ಬರುತ್ತಿದ್ದರು. ನಮ್ಮೂರಿನ ಜನರಿಗೆ ಕಾಳಿಂಗರಾಯರು ಹಡೆ ಮನುಷ್ಯನಾಗಿ ಕಂಡಿದ್ದರು. ಸಾಹಿತ್ಯ, ಸಂಗೀತದ ಬಗ್ಗೆ ಅಭಿರುಚಿ ಇಲ್ಲದವರ ಅನಿಸಿಕೆಯದು. ಟೀಕೆ ಮಾಡಿದವರು ಹೇಳಹೆಸರಿಲ್ಲವಾಗಿದ್ದಾರೆ. ಕಾಳಿಂಗರಾಯರ ಭೌತಿಕ ಶರೀರ ನಾಶವಾಗಿದೆಯೆ ಹೊರತು ಅವರ ಕಂಠಸಿರಿಗೆ ಕಳಂಕವಿಲ್ಲ. ಅವರು ಅಮರರಾಗಿದ್ದಾರೆ. ೧೯೬೬ರಲ್ಲಿ ನಾನು ಮೈಸೂರಿನಲ್ಲಿದ್ದಾಗ ಕಾಳಿಂಗರಾಯರಿಗೆ ಅನಾರೋಗ್ಯವಾಗಿ ಕೆ. ಆರ್. ಆಸ್ಪತ್ರೆಗೆ ಸೇರಿದ್ದರು. ಸುದ್ದಿ ತಿಳಿದು ಕುವೆಂಪು ಅವರು ಆಸ್ಪತ್ರೆಗೆ ಭೇಟಿಕೊಟ್ಟು ಯೋಗಕ್ಷೇಮ ವಿಚಾರಿಸಿ ಐನೂರು ರೂಪಾಯಿ ಧನಸಹಾಯ ಮಾಡಿದ್ದರು. ತಾವು ಯಾಕೆ ಹಣ ಕೊಡುತ್ತೀರಿ ಎಂದು ರಾಯರು ಹೇಳಿದಾಗ ಕುವೆಂಪು ಅವರು, "ನಿಮ್ಮಂಥವರಿಂದ ನಾವು ಕರ್ನಾಟಕದಲ್ಲಿ ಮನೆಮಾತಾಗಿದ್ದೇವೆ. ತೆಗೆದುಕೊಳ್ಳಿ, ನಾವು ನಿಮ್ಮ ಋಣ ತೀರಿಸುವುದು ಹೇಗೆ?" ಎಂದಿದ್ದರು. ರಾಯರು ಗುಣಮುಖರಾಗಿದ್ದರು. ಇದು ಕವಿಗಳಿಗೂ ಗಾಯಕರಿಗೂ ಇರುವ ಅವಿನಾಭಾವ ಸಂಬಂಧ.

*ಬೆಂಗಳೂರು* ***ಬಿಳುಮನೆ ರಾಮದಾಸ್***

# ವ್ಯ - ಕಿರಣ

- ಪ್ರಕಾಶ್ ಎಸ್.







## ಭಾರತಕ್ಕೆ ಒಬಾಮಾ: ಸಂಪೂರ್ಣ ಸುರಕ್ಷತೆಗೆ ಆದೇಶ





# ಋಗ್ವೇದ ಪ್ರವೇಶಿಕೆ



## ಐತಿಹ್ಯ ಮತ್ತು ವಾಸ್ತವ

**ಜಿ. ರಾಮಕೃಷ್ಣ**

ಕೆಲವು ಋಗ್ವೇದ ಮಂತ್ರಗಳಿಗೆ ಅರ್ಥ ಹೇಳುವಾಗ ಕತೆಗಳನ್ನು ಕಲ್ಪಿಸಿಕೊಳ್ಳುವುದು ರೂಢಿಯಲ್ಲಿದೆ. ಹಾಗೆ ಮಾಡದಿದ್ದರೆ ಮಂತ್ರಗಳ ಅರ್ಥಗ್ರಹಿಸುವುದು ಕಠಿಣ ಎಂಬ ಕಾರಣದಿಂದ ಇದರಿಂದ ಒಂದು ಅಂಶವು ಸ್ಪಷ್ಟವಾಗುತ್ತದೆ: ವಾಸ್ತವ ಘಟನೆಗಳಿಗೆ ಮತ್ತು ಸನ್ನಿವೇಶಗಳಿಗೆ ಏನಾದರೊಂದು ಸಂಬಂಧ ವಿರುವ ಮಂತ್ರಗಳನ್ನು, ಯಾರೋ ವ್ಯಕ್ತಿಗಳು ರಚಿಸಿರಬೇಕಲ್ಲದೆ ಅವು 'ಅಪೌರುಷೇಯ' (ಅಂದರೆ, ಮನುಷ್ಯರು ರಚಿಸಿಲ್ಲದ) ಮಂತ್ರಗಳಾಗ ಲಾರವು. ಆದರೂ ಅಪೌರುಷೇಯವೆಂಬ ಐತಿಹ್ಯ ವನ್ನು ಪೋಷಿಸಲಾಗಿದೆ. ಋಗ್ವೇದದಲ್ಲಿ ನೂರಾರು ಹೆಸರುಗಳು ಮತ್ತು ಸನ್ನಿವೇಶಗಳು ಉಕ್ತವಾಗಿವೆ. ಅವು ನಿರ್ದಿಷ್ಟ ಸಂದರ್ಭ ಮತ್ತು ಸಂಬಂಧಗಳನ್ನು ಚಿತ್ರಿಸುತ್ತವೆ. ಮುಂಬೈಯಲ್ಲಿ ಜನವರಿ ೨೦೧೫ರಲ್ಲಿ ಜರುಗಿದ ಭಾರತೀಯ ವಿಜ್ಞಾನ ಸಮಾವೇಶದಲ್ಲಿ ಯಾರೋ 'ವಿದ್ವತ್ಪೂರ್ಣವಾದ' ಬೊಗಳೆಯೊಂದನ್ನು ಗಾಳಿಗೆ ತೂರಿದರು, "ಒಂಭತ್ತು ಸಾವಿರ ವರ್ಷಗಳ ಹಿಂದೆ ಅಂತರಗ್ರಹ ಸಂಚಾರಕ್ಕೆ ಅಂತರಿಕ್ಷದಲ್ಲಿ ಹಾರುವ ವಾಹನಗಳನ್ನು ಬಳಸಲಾಗುತ್ತಿತ್ತು, ಅದಕ್ಕೆ ಋಗ್ವೇದದಲ್ಲಿ ಆಧಾರವಿದೆ" ಎಂದು. ಯಾರಾದರೂ 'ದಯವಿಟ್ಟು ಆ ಭಾಗವನ್ನು ಉದ್ಧರಿಸುವ ಕೃಪೆ ಮಾಡಿ' ಎಂದು ಕೇಳಿದ್ದರೆ ಯಾವ ಅಪೂರ್ವವಾದ ಮತ್ತು ಗಹನವಾದ ಮಂತ್ರವನ್ನು ಉದ್ಧರಿಸುತ್ತಿದ್ದರೋ ತಿಳಿಯದು. ಋಗ್ವೇದವನ್ನು ಯಾರು ಓದಲು ಹೋಗುತ್ತಾರೆ, ಎಂಬ ಕೆಟ್ಟ ಧೈರ್ಯ ಅವರದು; ಇಲ್ಲವೆ, 'ಯಾವುದಾದರೂ ಮಂತ್ರಕ್ಕೆ ನಾವು ಹೇಳಿದ್ದೇ ಅರ್ಥ' ಎಂಬ ಅಹಂಕಾರವೂ ಇರಬಹುದು. ವಸ್ತುನಿಷ್ಠವಾಗಿ ನೋಡಿದರೆ ಋಗ್ವೇದದಲ್ಲಿ ದಿನನಿತ್ಯದ ಜೀವನದ ಪ್ರತಿಫಲನವು ಹೇರಳವಾಗಿ ದೊರೆಯುತ್ತದೆ. ಕೆಲವು ಮಂತ್ರಗಳ ಅರ್ಥವನ್ನು ತಿಳಿಯುವುದು ಕಷ್ಟವೆಂಬುದು ನಿಜ. ಅದಕ್ಕೆ ಕಾರಣ ಅವುಗಳ ಸ್ಪಷ್ಟ ಹಿನ್ನೆಲೆ ಏನೆಂಬುದು ನಮಗೆ ತಿಳಿದಿಲ್ಲದಿರುವುದು. ಜೊತೆಗೆ, ಅಂದಿನ ಭಾಷೆಯ ಸ್ವರೂಪವು ಮುಂದಿನ ಕಾಲಗಳಲ್ಲಿ ಅಂತೆಯೇ ಉಳಿದುಬಂದಿಲ್ಲ. ಸೂಕ್ತಗಳಲ್ಲಿ ಕೆಲ ವೇಳೆ ಹಿಂದಿನದಕ್ಕೂ ಮುಂದಿನದಕ್ಕೂ ಸಂಬಂಧವೇ ಇಲ್ಲವೇನೋ ಎಂಬಂತಹ ಸಂದಿಗ್ಧತೆ ಯನ್ನು ಉಂಟುಮಾಡುವ ಮಂತ್ರಗಳು ಎದುರಾಗಿ ಬಿಡುತ್ತವೆ. ಅವನ್ನು ವಿವರಿಸಿಕೊಳ್ಳಲು ಒಂದು ಕತೆ ಕಟ್ಟಿಕೊಳ್ಳಬಹುದು, ಆದರೆ ಅದು ಸೂಕ್ತದ ಸಂಪೂರ್ಣ ಅರ್ಥವನ್ನು ಗ್ರಹಿಸಲು ಸಹಾಯ ಮಾಡದೆಯೂ ಹೋಗಬಹುದು. ಸ್ವತಃ ಅದನ್ನು ಬರೆದ ಕವಿಯನ್ನೇ ಕೇಳಿಬಿಡೋಣ ಎಂದರೆ ಅದು ಆಗದ ಮಾತು. ಋಗ್ವೇದದ ಕವಿಗಳು ಸುಮಾರು ೩೫೦೦ ವರ್ಷಗಳ ಹಿಂದೆ ಇದ್ದವರು, ಅವರಿಂದ ಸಮಜಾಯಿಷಿ ಪಡೆಯಲಾಗುವುದಿಲ್ಲ. ಅವನ್ನು ಬರೆದಿದ್ದ ಕಾಲದಲ್ಲೇ ಕೇಳಿದ್ದರೂ ಪ್ರಯೋಜನ ಆಗುತ್ತಿರಲಿಲ್ಲವೇನೋ, ಯಾರಿಗೆ ಗೊತ್ತು ! ಬರೆದಾಗ ಅದು ತೋಚಿತ್ತು, ಈಗ ನನಗೂ ತೋಚುತ್ತಿಲ್ಲ ಎಂಬುತ್ತರ ಕೊಟ್ಟುಬಿಡುತ್ತಿದ್ದರೇನೊ. ರಾಬರ್ಟ್ ಬ್ರೌನಿಂಗ್ ಎಂಬ ಇಂಗ್ಲಿಷ್ ಕವಿ ಅವನ ಪದ್ಯದ ಕೆಲವು ಸಾಲುಗಳ ಅರ್ಥದ ಬಗ್ಗೆ ಅಂತಹ ಉತ್ತರ ಕೊಟ್ಟಿದ್ದನಂತೆ : "ಅದನ್ನು ಬರೆದಾಗ ಇಬ್ಬರಿಗೆ ಅದರರ್ಥ ತಿಳಿದಿತ್ತು ; ನನಗೆ ಮತ್ತು ದೇವರಿಗೆ. ಈಗ ಅದು ಒಬ್ಬನಿಗೆ ಮಾತ್ರ ತಿಳಿದಿರಬೇಕು; ಅಂದರೆ ದೇವರಿಗೆ ಮಾತ್ರ." ದೇವರಿಲ್ಲ ಎನ್ನುವವರಿಗೆ ಪ್ರಸಂಗ ಇಲ್ಲಿಗೆ ಮುಕ್ತಾಯ. ಇಲ್ಲ, ದೇವರಿದ್ದಾನೆ, ಎಂಬುವವರಿಗೆ ಇನ್ನೊಂದು ಹೆಜ್ಜೆಯ ನಂತರ ಪ್ರಸಂಗ ಮುಗಿಯು ತ್ತದೆ. 'ಯಾರೋ ಗೀಚಿದ ಪದ್ಯದ ಸಾಲುಗಳಿಗೆ ಅರ್ಥ ಹೇಳಲು ನಾನಿಲ್ಲಿ ಕೂತಿಲ್ಲ, ಹೋಗು', ಎಂದು ಹೇಳಿ ದೇವರು ಕೈತೊಳೆದುಕೊಳ್ಳುತ್ತಾನೆ ! ಆದ್ದರಿಂದ ಒಂದು ಹಂತದಲ್ಲಿ 'ಋಗ್ವೇದದ ಈ ಮಂತ್ರದ ಅರ್ಥ ನಮಗೆ ಗೊತ್ತಾಗುವುದಿಲ್ಲ' ಎಂದು ಒಪ್ಪಿಕೊಳ್ಳುವುದು ಸ್ವಾಗತಾರ್ಹವಾದ್ದು, ಕ್ಷೇಮ ವಾದ್ದು. ಅಂತಹ ಒಂದು ಸೂಕ್ತದ ಒಂದೆರಡು ಮಂತ್ರಗಳನ್ನು ಪರಿಚಯಿಸಿಕೊಂಡು, ನಂತರ ಆ ಮಂತ್ರಗಳು ಅಷ್ಟೇನೂ ಯಥಾರ್ಥವಲ್ಲವೆಂದು ತಿಳಿಯಲು ಋಗ್ವೇದದ ಕೆಲವು ಕವಯಿತ್ರಿಯರು ರಚಿಸಿದ ಸೂಕ್ತಗಳತ್ತ ಪ್ರಸ್ತುತ ಮಾಲಿಕೆಯ ಇಪ್ಪತ್ತನೆಯ ಕಂತಿನಲ್ಲಿ ಗಮನ ಹರಿಸೋಣ.






ಋಗ್ವೇದದ ಹತ್ತನೆಯ ಮಂಡಲದ ೩೩ನೆಯ ಸೂಕ್ತವು ಇಂದ್ರನನ್ನು ಉದ್ದೇಶಿಸಿ ಹೇಳುವಂಥದು. ಅದರಲ್ಲಿ ೧೯ ಮಂತ್ರಗಳಿವೆ. ಎಲ್ಲಾ ಬೃಹತೀ ಛಂದ್ರಸ್ಸಿನವು : ಅದರಲ್ಲಿ ಮೊದಲನೆಯ ಪಾದದಲ್ಲಿ ೧೬ ಮತ್ತು ಎರಡನೆಯ ಪಾದದಲ್ಲಿ ೨೦ ಸ್ವರಾಕ್ಷರಗಳಿರುತ್ತವೆ. ಸೂಕ್ತದ ಕರ್ತೃ ಕಣ್ವ ವಂಶದ ಮೇಧ್ಯಾತಿಥಿಯೆಂದು ಹೇಳಲಾಗಿದೆ. ಶುದ್ಧೀಕರಿಸಿ ಸಿದ್ಧಮಾಡಿಟ್ಟಿರುವ ಸೋಮರಸವನ್ನು ಸ್ವೀಕರಿಸಿ ಪಾನ ಮಾಡಲು ಇಂದ್ರನನ್ನು ಆಹ್ವಾನಿಸುತ್ತಿದ್ದಾನೆ ಕವಿ. ಅವನು ಬಂದರೆ ಗೂಳಿಯು ಗುಟುರು ಹಾಕುವಂತೆಯೇ ಸರಿ. ಅಲ್ಲದೆ ಅವನ ಆತಿಥೇಯನ ಯಜ್ಞಗೃಹವು ಇಂದ್ರನಿಗೆ ಚಿರಪರಿಚಿತವಾದ ಜಾಗ. ಅವನಿಗೆ ಇಂದ್ರನು ಯಥೇಷ್ಟವಾಗಿ ಗೋವುಗಳನ್ನು ಕೊಡುತ್ತಾನೆ. ಕೋಟೆಗಳನ್ನು ನುಚ್ಚುನೂರು ಮಾಡುವ ಇಂದ್ರನು (ಮಂತ್ರ ೫ : ಪೂಃ ಭಿತ್) ಅತಿ ಪ್ರಬಲನಾದವನು, ನೂರು–ಸಾವಿರ ಪ್ರಮಾಣದಲ್ಲಿ ಸಂಪತ್ತನ್ನುಳ್ಳವನು; ಸೋಮರಸವನ್ನು ಹೀರಿ ಅದೆಷ್ಟು ಶಕ್ತಿ ಪಡೆಯುತ್ತಾನೋ ತಿಳಿಯದು (೭ : ಕ ಈಂ ವೇದ ಸುತೇ ಸಚಾ ಪಿಬಂತಂ ಕತ್ ವಯಃ ದಧೇ). ಅವನಲ್ಲಿರುವ ಗೂಳಿಯ ಲಕ್ಷಣಗಳನ್ನು ಮೂರು ಮಂತ್ರಗಳಲ್ಲಿ ಶ್ಲಾಘಿಸಲಾಗಿದೆ (೧೦–೧೨). ಕವಿಯು ಕೇಳಿಕೊಳ್ಳುತ್ತಾನೆ : "ನೀನು ರಥವೇರಿ ಹೊರಟಾಗ ಕುದುರೆಗಳು ನಿನ್ನನ್ನು ಬೇರಾವ ಯಜ್ಞಗೃಹಕ್ಕೂ ಕೊಂಡೊಯ್ಯದೆ ನಮ್ಮಲ್ಲಿಗೇ ಬರುವಂತೆ ಮಾಡು. ನಾವು ನಿನ್ನ ಹೃದಯಕ್ಕೆ ಹತ್ತಿರವಿರೋಣ, ನಾವು ನೀಡುವ ಸೋಮರಸವು ಸಿಹಿಯಾಗಿದ್ದು ನಿನಗೆ ಆಪ್ಯಾಯಮಾನವಾಗಿರಲಿ" (೧೪–೧೫ : ...ಅಸ್ಮಾಕಂ ತೇ ಸವನಾ ಸಂತು ಶಂತಮಾ ಮದಾಯ ದ್ಯುಕ್ಷ ಸೋಮಪಾಃ).

ಇಲ್ಲಿಯವರೆಗಿನ ಮಂತ್ರಗಳ ಇಂಗಿತದ ಬಗ್ಗೆ ಸ್ಪಷ್ಟತೆಯ ಕೊರತೆ ಇಲ್ಲ. ಆದರೆ ಮುಂದಿನ ನಾಲ್ಕು ಕಡೆಯ ಮಂತ್ರಗಳ ಸೂಚನೆ ಏನು ಮತ್ತು ಹಿಂದಿನ ೧೫ ಮಂತ್ರಗಳೊಡನೆ ಅವುಗಳ ಸಂಬಂಧವೇನು ಎಂಬುದು ನಮ್ಮನ್ನು ಇಕ್ಕಟ್ಟಿಗೆ ಸಿಲುಕಿಸುತ್ತದೆ. ಆ ನಾಲ್ಕು ಮಂತ್ರಗಳಲ್ಲಿ ಎರಡನ್ನು (೧೬ ಮತ್ತು ೧೮) ಒಬ್ಬ ಮಹಿಳೆಯು ಹೇಳಿದ್ದೆಂದೂ, ಒಂದನ್ನು (೧೭) ಒಬ್ಬ ಪುರುಷನು ಹೇಳಿದ್ದೆಂದೂ, ಕಡೆಯದನ್ನು (೧೯) ಸ್ವತಃ ಇಂದ್ರನೇ ಪ್ಲಯೋಗನ ಮಗ ಅಸಂಗನಿಗೆ ಹೇಳಿದ್ದೆಂದೂ ಊಹಿಸಲಾಗಿದೆ. ಅನಿರೀಕ್ಷಿತವಾಗಿ ಹೀಗೆ ನಾಲ್ಕು ಮಂತ್ರಗಳು ಈ ಸೂಕ್ತದಲ್ಲಿ ಬಂದಿರುವುದು ಗೊಂದಲವನ್ನುಂಟುಮಾಡುತ್ತದೆ. ಯಾರಿವನು ಅಸಂಗ ? ಸೂಕ್ತದಲ್ಲೆಲ್ಲೂ ಅವನ ಹೆಸರಿಲ್ಲ. ಆದರೆ ಅವನ ಬಗೆಗಿನ ಒಂದು ಪ್ರಸಂಗವನ್ನು ಸಾಯಣನು ಉಲ್ಲೇಖಿಸಿದ್ದಾನೆ. ಈ ಕತೆಯನ್ನು ಕಟ್ಟಿದವರಾರು ಮತ್ತು ಯಾವಾಗ ಕಟ್ಟಿದರು ? ಇಷ್ಟಕ್ಕೂ ಅದು ಕತೆಯೋ ವಾಸ್ತವವೋ ? ಹಿಂದಿನ ೧೫ ಮಂತ್ರಗಳಿಗೂ ಈ ನಾಲ್ಕು ಮಂತ್ರಗಳಿಗೂ ಸಂಬಂಧವೇನು ? ಅದಕ್ಕೆ ಮೌನವೇ ಸರಿಯಾದ ಉತ್ತರ ಎನಿಸುತ್ತದೆ. (ಶಂಕರಾಚಾರ್ಯರ ಮೌನವೇ ಅವರ ಶಿಷ್ಯರ ಸಂಶಯಗಳನ್ನೆಲ್ಲಾ ನಿವಾರಿಸಿತೆಂದು ಹೇಳುವ ಶ್ಲೋಕವೊಂದಿದೆ. ಅದರಂತೆ ನಮ್ಮದೂ ಮೌನ ವ್ಯಾಖ್ಯಾನವೇ, ಆದರೆ ಅದು ಸಂಶಯಗಳನ್ನು ನಿವಾರಿಸುವುದಿಲ್ಲ, ಅಷ್ಟೆ). ಕತೆಯಾದರೂ ಏನು ? ದೇವತೆಗಳು ಯಾವ ಕಾರಣಕ್ಕೋ ಏನೋ ಪ್ಲಯೋಗನ ಮಗ ಅಸಂಗನನ್ನು ಒಮ್ಮೆ ಹೆಣ್ಣಾಗಿಸಿಬಿಟ್ಟರಂತೆ; ಆಮೇಲೆ ಯಾವಾಗಲೋ ಮತ್ತೆ ಅವನು ಗಂಡಾಗುವಂತೆ ಮಾಡಿದರಂತೆ. ಸದ್ಯದ ಪ್ರಸಂಗದಲ್ಲಿ ಅವನಿನ್ನೂ ಹೆಣ್ಣಾಗಿದ್ದಾನೆ. ಅವನ ಮಾನ ಮುಚ್ಚಿಕೊಳ್ಳಲು ಇಂದ್ರನು ಕಡೆಯ ಮಂತ್ರದಲ್ಲಿ ಒಂದು ಸೂಚನೆ ನೀಡುತ್ತಿದ್ದಾನೆ. ಮೊದಲಿಗೆ (ಮಂತ್ರ ೧೬) ಯಾವುದೋ ಹೆಣ್ಣಿನ ಮಾತು; ಅವಳು ಕವಿ ಮೇಧ್ಯಾತಿಥಿಯ ಪತ್ನಿ ಇರಬಹುದೆ ? ತಿಳಿಯದು, ಏಕೆಂದರೆ ಸೂಕ್ತದಲ್ಲಿ ಈವರೆಗೆ ಯಾವ ಹೆಣ್ಣಿನ ಪ್ರಸ್ತಾಪವೂ ಬಂದಿಲ್ಲ. ಯಾರೇ ಇರಲಿ, ಆ ಮಹಿಳೆಯು ಹೀಗೆ ಹೇಳಿದ್ದಾಳೆಂದು ಸೂಕ್ತದ ೧೬ನೆಯ ಮಂತ್ರ ಹೇಳುತ್ತದೆ : "ನಮ್ಮನ್ನು ಈ ಸ್ಥಿತಿಗೆ ತಂದ ಅವನು ನಿನ್ನ ಅಂಕೆಯಲ್ಲಿಲ್ಲ, ನನ್ನ ಅಂಕೆಯಲ್ಲೂ ಇಲ್ಲ; ಅವನ ಋಷಿಯೇ ಬೇರೆ" (ನಹಿ ಸಃ ತವ ನೋ ಮಮ ಶಾಸ್ತ್ರೇ ಅನ್ಯಸ್ಯ ರಣ್ಯತಿ । ಯೋ ಅಸ್ಮಾನ್ ವೀರ ಆ ಅನಯತ್ ॥). ಅದಕ್ಕೆ ಪುರುಷನು ಪ್ರತಿಕ್ರಿಯಿಸಿರುವುದು ಹೀಗೆ : "ಸ್ತ್ರೀಯರ ಮನಸ್ಸು ಶಿಸ್ತುರಹಿತವಾದ್ದು (ಹಿಡಿತಕ್ಕೆ ಸಿಗದಿರುವಂಥದು), ಅವರ ಪ್ರಜ್ಞೆಯು ಲಘುವಾದ್ದು, ಎಂದು ಇಂದ್ರನೇ ಹೇಳಿದ್ದಾನೆ" (೧೭ : ಇಂದ್ರಶ್ಚಿತ್ ಘ ತತ್ ಅಬ್ರವೀತ್ ಸ್ತ್ರಿಯಾಃ ಅಶಾಸ್ಯಂ ಮನಃ । ಉತೋ ಅಹ ಕ್ರತುಂ ಲಘುಂ ॥). ಪ್ರಶ್ನೆ ಇದು : ಇಂದ್ರನು ಹಾಗೇಕೆ ಹೇಳಿದ, ಯಾರಿಗೆ ಹೇಳಿದ ? ೧೬ನೆಯ ಮಂತ್ರದಲ್ಲಿ ಮಹಿಳೆ ಹೇಳಿದ್ದು ಅಷ್ಟು ಕಳಪೆಯ ಮತ್ತು ನಿಂದನೆಗೆ ಅರ್ಹವಾದ ಮಾತೆಂದು ನಾವು ತಿಳಿಯಬೇಕೆ ? ಸ್ತ್ರೀಯರನ್ನು ಕುರಿತಾದ ಈ ಮಾತು ಸಾಮಾನ್ಯೀಕರಿಸಿ ಹೇಳಲಾಗಿದೆಯೋ ಅಥವಾ ಪ್ರಸ್ತುತ ಸಂದರ್ಭಕ್ಕೆ ಮಾತ್ರ ಅನ್ವಯಿಸಿ ಹೇಳಲಾಗಿದೆಯೋ ? ಸಾಮಾನ್ಯೀಕರಿಸಿ ಹೇಳಲಾಗಿದೆ ಎಂದಾದರೆ ಅದು ಋಗ್ವೇದದ ಕಾಲದಲ್ಲಿ ಸ್ತ್ರೀಯರ ಬಗೆಗಿದ್ದ ಪೂರ್ವಗ್ರಹ ಎಂಬುದರಲ್ಲಿ ಅನುಮಾನವಿಲ್ಲ. ಅದು ಅಂದಿನ ಮಹಿಳೆಯ ಸ್ಥಾನಮಾನದ ಸೂಚಕವೂ ಆಗುತ್ತದೆ. ಪಶುಸಂಗೋಪನಾ ಹಂತದಿಂದ ಕೃಷಿಯ ಆವಿಷ್ಕಾರದ ದಿಕ್ಕಿನಲ್ಲಿ ಚಲಿಸುತ್ತಿದ್ದ ಸಮಾಜದಲ್ಲಿ ಸ್ತ್ರೀಯರ ಬಗೆಗೆ ಅಂತಹ ಅಭಿಪ್ರಾಯವಿರಲು ಸಾಧ್ಯವಿದ್ದಿತೆ ? ಬುಡಕಟ್ಟು ಜೀವನದ ಸಮಾನತೆಯ ಆಧಾರದ ಸ್ಮೃತಿಯು ಆ ವೇಳೆಗಾಗಲೆ ನಶಿಸಿ ಹೋಗಿದ್ದಿತೆ ? ಮೇಲಾಗಿ, ಈ ಸೂಕ್ತವು (೮.೩೩) ಋಗ್ವೇದದ ಅಂತಿಮ ಘಟ್ಟಕ್ಕೆ ಸೇರಿರುವಂಥದಲ್ಲ. "ಸ್ತ್ರೀಯರ ಪ್ರಜ್ಞೆ ಲಘುವಾದದ್ದು" ಎನ್ನುವ ಋಗ್ವೇದದಲ್ಲಿ ಸ್ತ್ರೀಯರು ರಚಿಸಿದ ಸೂಕ್ತಗಳು ಸಹ ಸೇರ್ಪಡೆಗೊಂಡಿವೆಯೆಂಬುದು ಪ್ರಸ್ತುತ ಸೂಕ್ತದ ಕವಿಗೆ ತಿಳಿಯದೆ ಹೋಯಿತೆ ? ಅಂತಹ ಸೂಕ್ತಗಳ ಪರಿಚಯವನ್ನು ನಾವೀಗ ಮಾಡಿಕೊಳ್ಳಲಿದ್ದೇವೆ. "ಲಘು ಪ್ರಜ್ಞೆಯವಳು" ಎಂದು ತಿರಸ್ಕಾರಕ್ಕೊಳಗಾದ ಮಹಿಳೆಯು ತೆಪ್ಪಗಾಗದೆ ಇಂದ್ರನ ಬರುವಿಕೆಯನ್ನು ಸಾರಿದಳು : "ರಭಸದಿಂದ ಓಡುತ್ತಿರುವ ಇಂದ್ರನ ಕುದುರೆಗಳು ಅವನ ರಥವನ್ನು ಎಳೆದುತರುತ್ತಿವೆ; ಅಗೋ ನೋಡು, ನೊಗವನ್ನು ಮೇಲಕ್ಕೆ ಎತ್ತಲಾಗಿದೆ" (೧೮ : ಸಪ್ತೀ ಚಿತ್ ಘ ಮದಚ್ಯುತಾ ಮಿಥುನಾ ವಹತೋ ರಥಂ । ಏವ ಇತ್ ಧೂಃ ವೃಷ್ಣಃ ಉತ್‌ತರಾ ॥).

ಇಂದ್ರನು ಸೋಮರಸ ಸೇವಿಸಲು ಬಂದಿದ್ದಾನೋ ಅಥವಾ ಮೊದಲೇ ಸ್ವಲ್ಪ ಸೇವಿಸಿ ಬಂದಿದ್ದಾನೋ, ಅಂತೂ ಸೂಕ್ತದ ಕಡೆಯ ಮಂತ್ರದಲ್ಲಿ ಅವನು ಸದ್ಯದಲ್ಲಿ ಸ್ತ್ರೀ ಆಗಿರುವ ಪ್ಲಯೋಗನ ಮಗ ಅಸಂಗನ ಕಾಲೆಳೆಯಲೋ ಎಂಬಂತೆ ಅವನಿಗೆ ಹೇಳುತ್ತಾನೆ : "ಮೇಲೆ ಕತ್ತೆತ್ತಿ ನೋಡಬೇಡ, ತಲೆ ತಗ್ಗಿಸಿ ನಿಲ್ಲು. ಕಾಲುಗಳನ್ನು ಅಗಲಿಸಿ ನಿಲ್ಲಬೇಡ, ಅವನ್ನು ಪಕ್ಕಕ್ಕೆ ಜೋಡಿಸು. ನಿನ್ನ ಬಟ್ಟೆಯು ಏನನ್ನು ಮುಚ್ಚಿದೆಯೋ ಅದನ್ನು ಯಾರೂ ನೋಡುವಂತೆ ಇರದಿರಲಿ; ಏಕೆಂದರೆ ನೀನೀಗ ಸ್ತ್ರೀ ಆಗಿದ್ದೀಯೆ" (೧೯ : ಅಧಃ ಪಶ್ಯಸ್ವ ಮಾ ಉಪರಿ ಸಂತರಾಂ ಪಾದುಕೌ ಹರ । ಮಾ ತೇ ಕಶಪ್ಲಕೌ ದೃಶನ್ ಸ್ತ್ರೀ ಹಿ ಬ್ರಹ್ಮಾ ಬಭೂವಿಥ ॥).

ಕವನದ ಸ್ವಾರಸ್ಯಕರ ಭಾಗವೆನಿಸಿಕೊಳ್ಳಲು ಇದಕ್ಕೆ ಸರ್ವಥಾ ಅರ್ಹತೆ ಇದೆ. ಅಸಂಗ ಈಗ ಹೆಣ್ಣು, ಆದ್ದರಿಂದ ನಾಚಿ ತಲೆ ತಗ್ಗಿಸಬೇಕು (ಅಥವಾ, ಹೆಂಗಸಿನಂತೆ ತಗ್ಗಿ ಬಗ್ಗಿ ನಡೆಯಬೇಕು !). ಕಾಲುಗಳನ್ನು ಅಗಲಿಸಿ ನಿಲ್ಲುವುದು ಅವಳಿಗೆ ಸಹಜವಲ್ಲ. ಗಂಡಾಗಿದ್ದವನು ಹೆಣ್ಣಾಗಿರುವಾಗಲಂತೂ ಹಾಗೆ ಪಾದಗಳನ್ನು ಜೋಡಿಸಿ ನಿಲ್ಲದಿದ್ದರೆ ಅನಾಹುತವಾದೀತು, ಯಾರ ಕುತೂಹಲ ಏನನ್ನು ಗಮನಿಸುವಂತೆ ಮಾಡುತ್ತದೋ ಏನೋ ! ಇನ್ನೂ ಹುಷಾರಾಗಿರಬೇಕೆಂದರೆ ಬಟ್ಟೆಯಿಂದ ಕೆಳಭಾಗವನ್ನು ಮುಚ್ಚಿಟ್ಟುಕೊಳ್ಳಬೇಕು. ಅವನೀಗ ಸ್ತ್ರೀ ಅಲ್ಲವೇ, ಅದಕ್ಕೆ. ಈ ಸೂಕ್ತದ ಕಾಲಕ್ಕಾಗಲೆ ಮಹಿಳೆಯ ಸ್ಥಾನಮಾನದಲ್ಲಿ ಪಲ್ಲಟವಾಗಿದೆಯೆಂಬುದು ಸ್ಪಷ್ಟವಾಗಿದೆ. ಇಂತಹ ಪದ್ಯವನ್ನು ಮುಕ್ತವಾಗಿ

ಬರೆಯಬಲ್ಲ ಕವಿಯನ್ನು ಋಗ್ವೇದವು ಯಾವ ಅಳುಕೂ ಇಲ್ಲದೆ ಸ್ವೀಕರಿಸುತ್ತದೆ; ಆದರೆ ಸಂಪ್ರದಾಯವು ಋಗ್ವೇದವೆಂದರೆ ಏನೋ ನಿಗೂಢವಾದ ತತ್ವಗಳಿಂದ ತುಂಬಿಹೋಗಿದೆ ಎಂಬಂತೆ ಅದನ್ನು ಸಲ್ಲದ ಕಾರಣಕ್ಕೆ ಮೇಲಕ್ಕೇರಿಸುತ್ತದೆ. ಅದು ನಿಜಕ್ಕೂ ಮೇಲಕ್ಕೇರುವುದು ಅದರ ಕವಿತ್ವದಿಂದಾಗಿ ಎಂಬುದರಲ್ಲಿ ಸಂದೇಹವಿಲ್ಲ. ಬೇರೊಂದೆಡೆ ಕವಿಯು ಹೇಳುತ್ತಾನೆ, "ಬಿಳಿ ಬಟ್ಟೆ ಧರಿಸಿದ ಸ್ತ್ರೀಯರು ನಿನ್ನ ಬಳಿಗೆ ಸಾರಿಬರುವಂತೆ ಈ ಬಿಳಿಯ ಸೋಮವು ನಿನಗೆ ಅರ್ಪಿತವಾಗಲಿ" (೮.೧೭.೭ : ...ಜನೀಃ ಇವ ಅಭಿ ಸಂವೃತಃ) ಎಂದು.

ಮಹಿಳೆಯದು 'ಲಘು ಪ್ರಜ್ಞೆ'ಯೆಂದು ಒಮ್ಮೆ ಟೀಕಿಸಿದ್ದಾಗ್ಯೂ ಋಗ್ವೇದದಲ್ಲಿ ಕವಯಿತ್ರಿಯರಿಗೆ ಸ್ಥಾನ ಇದೆ. ಅವರಲ್ಲಿ ಕೆಲವರು ವಿಶೇಷವಾಗಿ ಲೈಂಗಿಕತೆಯ ಪ್ರಸ್ತಾಪ ಮಾಡಿದ್ದಾರೆ. ಉದಾಹರಣೆಗೆ ಮೊದಲನೆಯ ಮಂಡಲದ ೧೭೯ನೆಯ ಸೂಕ್ತವನ್ನು ನೋಡಬಹುದು. ಸಾಯಣನು ಪ್ರತಿಯೊಂದು ಸೂಕ್ತಕ್ಕೂ ಒಂದು ಪೀಠಿಕೆಯನ್ನು ಕೊಡುತ್ತಾನೆ. ಅದರಲ್ಲಿ ಸೂಕ್ತದ ಕರ್ತೃ, ಛಂದಸ್ಸು, ದೇವತೆ, ವಿನಿಯೋಗ ಮುಂತಾದ ವಿವರಗಳನ್ನು ಕೊಡುತ್ತಾನೆ. ಪ್ರಸ್ತುತ ಸೂಕ್ತದ ಪೀಠಿಕೆಯಲ್ಲಿ ಅವನ ವ್ಯಾಖ್ಯಾನದ ಕಡೆಯ ವಾಕ್ಯ ಇದು : "ವಿಶೇಷವಿನಿಯೋಗೋ ಲೈಂಗಿಕಃ ॥" ಸಾಯಣನಿಗಿಲ್ಲದ ಮುಜುಗರ ಅನುವಾದಕ ಗ್ರಿಫ಼ಿತ್‌ಗಿದೆ. ಆದ್ದರಿಂದ ಅವನು ಈ ಸೂಕ್ತವನ್ನು ಪಠ್ಯದಿಂದ ಬೇರ್ಪಡಿಸಿ ಅನುಬಂಧಕ್ಕೆ ವರ್ಗಾಯಿಸಿದ್ದಾನೆ. ಅಲ್ಲದೆ, ಅದರ ಎರಡು ಮಂತ್ರಗಳನ್ನು (೩ ಮತು ೪) ಆಂಗ್ಲಭಾಷೆಗೆ ಅನುವಾದಿಸುವ ಬದಲು ಲ್ಯಾಟಿನ್ ಭಾಷೆಗೆ ಅನುವಾದಿಸಿಬಿಟ್ಟಿದ್ದಾನೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ೧೯೫೦-೬೦ರ ದಶಕಗಳಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದ ಎಸ್. ರಾಮಚಂದ್ರ ರಾವ್ ಇಂತಹ ಪದ್ಯಗಳನ್ನು "ಮಡಿ ಪದ್ಯ" ಎಂದು ಹೇಳಿ ತರಗತಿಗಳಲ್ಲಿ ಓದದೆ ಬಿಟ್ಟು ಬಿಡುತ್ತಿದ್ದರು. ಸಾಯಣನು ಸೂಕ್ತದ ಕರ್ತೃಗಳನ್ನು ಹೆಸರಿಸುವಾಗ "ಲೋಪಾಮುದ್ರಾ, ಅಗಸ್ತ್ಯ ಮತ್ತು ಅಗಸ್ತ್ಯನ ಒಬ್ಬ ಶಿಷ್ಯ" ಎಂದಿದ್ದಾನೆ. ಮೂಲತಃ ಇಲ್ಲಿ ಲೋಪಾಮುದ್ರಾ ಮತ್ತು ಅಗಸ್ತ್ಯ ಸಂಭಾಷಿಸುತ್ತಾರೆ ಮತ್ತು ಆ ಸಂಭಾಷಣೆಯನ್ನು ಕೇಳಿಸಿಕೊಂಡಿದ್ದ ಶಿಷ್ಯನು ಕಡೆಯ ಎರಡು ಮಂತ್ರಗಳನ್ನು ಹೇಳಿದ್ದಾನೆ. "ಸೂಕ್ತವು ಪ್ರತಿಪಾದಿಸಿರುವ ಅರ್ಥವನ್ನನುಸರಿಸಿ ಹೇಳುವುದಾದರೆ ಅದರ ದೇವತೆಯು ರತಿ" ಎಂದು ಸಾಯಣ ಹೇಳಿದ್ದಾನೆ (ಸೂಕ್ತ ಪ್ರತಿಪಾದ್ಯೋಽರ್ಥೋ ರತಿರ್ದೇವತಾ). ಇಲ್ಲಿ ಲೋಪಾಮುದ್ರೆ ತನ್ನ ವೃದ್ಧ ಪತಿ ಅಗಸ್ತ್ಯನನ್ನು ರತಿಗೆ ಆಹ್ವಾನಿಸುತ್ತಾಳೆ. ಹಲವು ಶರತ್ಕಾಲಗಳನ್ನು ನೂಕಿರುವ ಆಕೆ ಹಗಲಿರುಳೆನ್ನದೆ ದುಡಿದಿದ್ದಾಳೆ, ತನ್ನ ವಯಸ್ಸನ್ನು ಲೆಕ್ಕಿಸದೆ ಶ್ರಮಿಸಿದ್ದಾಳೆ. ವಯಸ್ಸು ಸಹಜವಾಗಿಯೇ ಶರೀರದ ಮೇಲೆ ತನ್ನ ಪ್ರಭಾವ ಬೀರುತ್ತದೆ; ಆದಾಗ್ಯೂ ಗಂಡಂದಿರು ಪತ್ನಿಯರನ್ನು ಸಮೀಪಿಸಬೇಕೆಂದು ಅವಳು ಆಗ್ರಹಿಸುತ್ತಾಳೆ. (೧.೧೭೯.೧ : ಪೂರ್ವೀಃ ಅಹಂ ಶರದಃ ಶಶ್ರಮಾಣಾ ದೋಷಾಃ ವಸ್ತೋಃ ಉಷಸಃ ಜರಯಂತೀಃ । ಮಿನಾತಿ ಶ್ರಿಯಂ ಜರಿಮಾ ತನೂನಾಂ ಅಪ್ಯೂ ನು ಪತ್ನೀಃ ವೃಷಣಃ ಜಗಮ್ಯುಃ ॥). "ಪೂರ್ವಕಾಲದಲ್ಲಿ ಋತವನ್ನು ಅರಸುತ್ತಿದ್ದ ಹಿರಿಯರು ದೇವತೆಗಳೊಡನೆ ಕೂಡಿ ಋತವನ್ನು ನುಡಿಯುತ್ತಿದ್ದರು; ಆದರೆ ರತಿಸೌಖ್ಯವನ್ನವರು ಅವಗಣಿಸುತ್ತಿರಲಿಲ್ಲ. ಅಂತೆಯೇ ಅವರ ಪತ್ನಿಯರೂ ಸಹ" (೨ : ಯೇ ಚಿತ್ ಹಿ ಪೂರ್ವೇ ಋತಸಾಪಃ ಆಸನ್ ಸಾಕಂ ದೇವೇಭಿಃ ಅವದನ್ ಋತಾನಿ । ತೇ ಚಿತ್ ಅವಾಸುಃ ನಹಿ ಅಂತಂ ಆಪುಃ ಸಮೂ ನು ಪತ್ನೀಃ ವೃಷಭಿಃ ಜಗಮ್ಯುಃ ॥). ಇದರ ಮೇಲಿನ ಸಾಯಣ ಭಾಷ್ಯವನ್ನು ಆಸಕ್ತರು ನೋಡಬಹುದು; ನಾವದನ್ನು ಇಲ್ಲಿ ಬೇಕೆಂದೇ ಪ್ರಸ್ತುತಪಡಿಸುತ್ತಿಲ್ಲ.

ಲೋಪಾಮುದ್ರಾಳ ಆಹ್ವಾನಕ್ಕೆ ಅಗಸ್ತ್ಯನ ಪ್ರತಿಕ್ರಿಯೆಯು ಮುಂದಿನ ಎರಡು ಮಂತ್ರಗಳಲ್ಲಿದೆ. (ಅದನ್ನು ಮಂತ್ರರೂಪಕ್ಕಿಳಿಸಿ ದಾಖಲಿಸಿರುವುದು ಕವಯಿತ್ರಿ ಲೋಪಾಮುದ್ರಾಳೇ ಎಂಬುದನ್ನು ಗಮನಿಸಬೇಕು.) ಅವನೆನ್ನುತ್ತಾನೆ : "ಪ್ರಿಯೆ, ನಾವು ವೃಥಾ ಖಿನ್ನರಾಗುವುದು ಬೇಡ. ದೇವತೆಗಳು ಸಂಪ್ರೀತರಾಗಿದ್ದಾರೆ, ಅವರು ನಮ್ಮನ್ನೇನೂ ದಂಡಿಸುವುದಿಲ್ಲ. ನಾವೆಲ್ಲವನ್ನೂ ಪಡೆದುಕೊಳ್ಳೋಣ,



ಅಪರಿಮಿತವಾದ ಪರಸ್ಪರ ಪ್ರಾಪ್ತಿಯನ್ನು ಜಯಿಸಿಕೊಳ್ಳೋಣ; ಒಬ್ಬರನ್ನೊಬ್ಬರು ಸೇರಿ ಸುಖಿಸೋಣ" (೩ : ನ ಮೃಷಾ ಶ್ರಾಂತಂ ಯತ್ ಅವಂತಿ ದೇವಾಃ ವಿಶ್ವಾಃ ಇತ್ ಸ್ಪೃಧಃ ಅಭಿ ಅಶ್ನವಾವ । ಜಯಾವ ಇತ್ ಅತ್ರ ಶತನೀಥಂ ಆಜಿಂ ಯತ್ ಸಮ್ಯಂಚಾ ಮಿಥುನೌ ಅಭಿ ಅಜಾವ ॥). ಮುಂದುವರಿದು ಅಗಸ್ತ್ಯ ಹೇಳುತ್ತಾನೆ : "ಪ್ರೀತಿಯ ಪತ್ನಿಯೇ, ಅಧ್ಯಯನಶೀಲನಾದ ನಾನು ತಡೆದಿದ್ದೇನೆ, ಆದರೆ ಕಾಮವು ನನ್ನನ್ನಾವರಿಸಿದೆ; ಅದು ಹಾಗೇಕೆಂದು ತಿಳಿಯದು. ಲೋಪಾಮುದ್ರೆ, ಬಾ, ನಾವು ಕೂಡೋಣ" (ಇದು ಮಂತ್ರದ ಪ್ರತಿಪದಾರ್ಥವಲ್ಲ, ಅದು ಇನ್ನೂ ಹೆಚ್ಚು ಆಪ್ತವಾಗಿದೆ. ೪ : ನದಸ್ಯ ಮಾ ರುಧತಃ ಕಾಮಃ ಆ ಅಗನ್ ಇತಃ ಆಜಾತಃ ಅಮುತಃ ಕುತಶ್ಚಿತ್ । ಲೋಪಾಮುದ್ರಾ ವೃಷಣಂ ನೀ ರಿಣಾತಿ ಧೀರಂ ಅಧೀರಾ ಧಯತಿ ಶ್ವಸಂತಂ ॥). ಸೂಕ್ತದ ಮಿಕ್ಕೆರಡು ಮಂತ್ರಗಳನ್ನು ಕವಯಿತ್ರಿಯು ಶಿಷ್ಯನ ಬಾಯಲ್ಲಿ ಹೇಳಿಸಿದ್ದಾಳೆ : "ಸನಿಹದಲ್ಲಿರುವ ಸೋಮನಿಗೆ ನಾನು ಅರುಹುತ್ತೇನೆ, ನಾನು ಕೇಳಿಸಿಕೊಂಡದ್ದು ನನಗೆ ತಟ್ಟದಿರಲಿ ಎಂದು. ಮರ್ತ್ಯರು ಬಹುಕಾಮನೆಯುಳ್ಳವರಲ್ಲವೆ!" (೫ : ಇಮಂ ನು ಸೋಮಂ ಅಂತಿತಃ ಹೃತ್ಸು ಪೀತಂ ಉಪ ಬ್ರುವೇ । ಯತ್ ಸೀಂ ಆಗಃ ಚಕೃಮ ತತ್ ಸು ಮೃಳತು ಪುಲುಕಾಮಃ ಹಿ ಮರ್ತ್ಯಃ ॥). "ಹೀಗೆ ಅಗಸ್ತ್ಯನು ಮಕ್ಕಳು ಬೇಕೆಂಬ ಅಭೀಪ್ಸೆಯನ್ನು ಈಡೇರಿಸಿಕೊಂಡನು. ಅಗೆಯುವ ಸಾಧನವಾದ ಗುದ್ದಲಿಯಿಂದ ಅಗೆಯುತ್ತಾ ಸಂತತಿಯನ್ನು ವೃದ್ಧಿಮಾಡಿಕೊಂಡ, ಬಲವನ್ನು ಗಳಿಸಿಕೊಂಡ ಮತ್ತು ಕಾಮ ಹಾಗೂ ತಪಸ್ಸು, ಎರಡನ್ನೂ ಪೋಷಿಸಿಕೊಂಡ." (೬ : ಅಗಸ್ತ್ಯಃ ಖನಮಾನಃ ಖನಿತ್ರೈಃ ಪ್ರಜಾಂ ಅಪತ್ಯಂ ಬಲಂ ಇಚ್ಛಮಾನಃ । ಉಭೌ ವರ್ಣೌ ಋಷಿಃ ಉಗ್ರಃ ಪುಪೋಷ ಸತ್ಯಾಃ ದೇವೇಷು ಆಶಿಷಃ ಜಗಾಮ ॥).

ಈ ಸೂಕ್ತದ "ನಿಗೂಢ ಆಧ್ಯಾತ್ಮಿಕತೆಯು" ಗಮನಾರ್ಹವಾದುದೆಂದೂ, ಸೂಕ್ತವನ್ನು ಆ ನಿಟ್ಟಿನಿಂದ ಅರ್ಥೈಸಿಕೊಳ್ಳಬೇಕೆಂದೂ ಬರ್ಗೇಯ್ನ್ ಅಭಿಪ್ರಾಯಪಟ್ಟಿದ್ದಾನೆ. ಗ್ರೀಸಿನ ಕವಯಿತ್ರಿ ಸ್ಯಾಫ಼ೋ ಪ್ರೇಮಕವನಗಳನ್ನು ಬರೆಯುವುದಕ್ಕೆ ಒಂದು ಸಾವಿರ ವರ್ಷ ಪೂರ್ವದಲ್ಲಿ ಲೋಪಾಮುದ್ರಾ ಒಂದು ಪ್ರೇಮಕವಿತೆ ರಚಿಸಿದ್ದಾಳೆ ಎಂಬುದು ಅಷ್ಟೇ ಗಮನಾರ್ಹವಾಗಿದೆ. ಮೊದಲನೆಯ ಮಂಡಲದ ೧೨೬ನೆಯ ಸೂಕ್ತದಲ್ಲಿಯೂ ಪ್ರೇಮಕಾವ್ಯದ ಸೊಗಡನ್ನು ಸೂಕ್ಷ್ಮವಾಗಿ ಸೂಚಿಸಲಾಗಿದೆ. ಭಾವ್ಯ ಅಥವಾ ಭಾವಯವ್ಯನು ಸ್ವನಯ ಎಂಬುವನ ತಂದೆ. ಸ್ವನಯನು ಸಿಂಧೂ ತಟದಲ್ಲಿದ್ದವನು ಮತ್ತು ಮಹಾದಾನಿ. ಅವನಿಂದ ಅನೇಕ ವಿಧದ ಸಂಪತ್ತನ್ನು ಪಡೆದವರು ಅವನನ್ನು ಬಹುವಾಗಿ ಶ್ಲಾಘಿಸಿದ್ದಾರೆ (೧.೧೨೫). "ಕೊಡುಗೈ ದಾನಿಯು ದ್ಯುಲೋಕಕ್ಕೆ ಹೋಗುತ್ತಾನೆ, ಅಮರನಾಗುತ್ತಾನೆ. ದಾನಿಗಳು ದುಃಖ ಮತ್ತು ಪಾಪಕ್ಕೆ ಈಡಾಗದಿರಲಿ ಮತ್ತು ಜಿಪುಣರು ಹಾಳಾಗಲಿ" ಎನ್ನುತ್ತದೆ ಈ ಸೂಕ್ತ (೧.೧೨೫.೭ : ...ಅಪೃಣಂತಂ ಅಭಿ ಸಂ ಯಂತು ಶೋಕಾಃ ॥). ಸ್ವನಯನ ಶ್ಲಾಘನೆಯು ಮುಂದಿನ ಸೂಕ್ತದಲ್ಲಿ ಮುಂದುವರಿದಿದೆ. ಕಡೆಯ ಎರಡು ಮಂತ್ರಗಳಲ್ಲಿ (೧.೧೨೬.೬-೭) ಭಾವಯವ್ಯನನ್ನು ಅವನ ಪತ್ನಿ ರೋಮಶಾ ಸಂಭೋಗಕ್ಕೆ ಆಹ್ವಾನಿಸುತ್ತಾಳೆ. ಅವಳೊಬ್ಬ ಹೆಣ್ಣು ಮುಂಗುಸಿಯಂತೆ ಪ್ರೇಮದಲ್ಲಿ ಪ್ರಬಲಳೆಂಬ ರೂಪಕವು ಮಂತ್ರದಲ್ಲಿದೆ (೬ : ... ಯಾ ಕಶಿಕಾ ಇವ ಜಂಗಹೇ). ಕಡೆಯ ಮಂತ್ರದಲ್ಲಿ ರೋಮಶಾ ಪತಿಯನ್ನುದ್ದೇಶಿಸಿ ಹೇಳುತ್ತಾಳೆ : "ಪತಿಯೇ, ನನ್ನಲ್ಲಿಗೆ ಬಂದು ನನ್ನನ್ನು ಸ್ಪರ್ಶಿಸು; ನನ್ನ ಕೂದಲು ಅಲ್ಪವೆಂದು ಭಾವಿಸಿಕೊಳ್ಳಬೇಡ. ನಾನು ಗಂಧಾರ ದೇಶದ ಮೇಕೆಯಿದ್ದಂತೆ ಎಂಬುದನ್ನು ತಿಳಿ" (೭ : ಉಪೋಪ ಮೇ ಪರಾ ಮೃಶ ಮಾ ಮೇ ದಭ್ರಾಣಿ ಮನ್ಯಥಾಃ । ಸರ್ವಾ ಅಹಂ ಅಸ್ಮಿ ರೋಮಶಾ ಗಂಧಾರೀಣಾಂ ಇವ ಅವಿಕಾ ॥). ಮೇಕೆಯ ಅಪರಿಮಿತ ಲೈಂಗಿಕ ತೃಷೆಯು ಪ್ರಸಿದ್ಧವಾಗಿದೆ; ಗ್ರೀಸ್ ದೇಶದ ಪುರಾಣಗಳಲ್ಲಿ ಸ್ಯಾಟರ್ ಎಂಬ ದೇವತೆಯು ಮೇಕೆಯ ಪ್ರತೀಕ. ಕಾಬೂಲ್ ನದಿಯ ದಕ್ಷಿಣಕ್ಕೆ ಮತ್ತು ಸಿಂಧೂ ನದಿಯ ಪಶ್ಚಿಮಕ್ಕೆ ಇರುವ ಪ್ರದೇಶವು ಗಂಧಾರ ದೇಶ ಎನ್ನುತ್ತಾರೆ. ಮೇಲಿನ ಎರಡೂ ಮಂತ್ರಗಳಿಗೆ ಸಾಯಣನ ಭಾಷ್ಯವು ವಿಸ್ತೃತವಾಗಿದೆ.

# ಪ್ರಶ್ನೆ




ಪ್ರತಿಯೊಬ್ಬರೂ ಬದುಕುತ್ತಿದ್ದಾರೆ
ತಮ್ಮದೇ ಜಗತ್ತಿನಲ್ಲಿ, ಗತ್ತಿನಲ್ಲಿ
ಇವನ ಸರಿ ಅವನಿಗೆ ತಪ್ಪು
ಅವನ ಬಿಳಿ ಇವನಿಗೆ ಕಪ್ಪು
ನೀರಿನ ಜೋಡಿ ಬಿಟ್ಟು ಇದ್ದಬದ್ದ ರಾಡಿ ಎರಚಾಡಿ
ಎಗರಾಡಿ, ಪರಚಾಡಿ, ಭೋರಾಡಿ ಕೊನೆಗೆ
ಶುದ್ಧವಾಗಲು ಬಯಸಿ ಪರದಾಡಿ
ದಿಕ್ಕೆಟ್ಟು ನಿಂತ ರಾಡ್ಯಾಗಳು ಎಷ್ಟೋ ಜನ
ಎಲ್ಲಾ ಮಾಡಿ ಮುಗಿಸಿ ಎಲ್ಲಮ್ಮನ ಹಾದಿ
ಹಿಡಿದು ಅವಧೂತರಾಗಲು ಹೋಗಿ
ನಟ್ಟನಡುವೆ ದಾರಿತಪ್ಪಿ ಜೋಗ್ಯಾಗಳಾದರು
ತತ್ವಗಳಿಗೆ ತುಕ್ಕು ಹಿಡಿದು 'ಇಸಂ'ಗಳಿಗೆ ಇಸಬು ಬಡಿದು
ಪಂಥಗಳು ಪತರುಗುಟ್ಟಿ ದಿಕ್ಕೆಟ್ಟು, ಉಸಿರುಗಟ್ಟಿಹೋದರು
ಕ್ಷಮಿಸಿ ಇವರೆ !
ಸದರಿ ಮೇಲಿನವರ ಮೇಲೆ ರಾಡಿ
ಎರಚಿದ ನಾನೂ ನನ್ನ ಜಗತ್ತಿನಲ್ಲೇ ಇದ್ದೇನೆ
ಒಬ್ಬ ರಾಡ್ಯಾ ಆಗಿ.
ದಯವಿಟ್ಟು ನಿಮ್ಮಲ್ಲಿ ನೀರು ಇದೆಯೆ ?
ಬೆಳಕಿನೆಡೆಗೆ ದಾರಿ ಇದೆಯೆ ?

**ರಾಜಕುಮಾರ ಸಂಕಪಾಳ, ಗಳತಗಾ**
ಸರಕಾರಿ ಪದವಿ ಪೂರ್ವ ಕಾಲೇಜು, ಮಜಲಟ್ಟಿ, ಚಿಕ್ಕೋಡಿ ತಾಲೂಕು
ಬೆಳಗಾವಿ ಜಿಲ್ಲೆ – ೫೯೧ ೨೨೬

ಆಸಕ್ತರು ಅದನ್ನು ನೋಡಬಹುದು; ನಾವಿಲ್ಲಿ ಅದನ್ನು ಪೂರ್ತಿಯಾಗಿ ಬಳಸಿಕೊಂಡಿಲ್ಲ.

ಋಗ್ವೇದದಲ್ಲಿ ಇನ್ನೊಬ್ಬ ಕವಯಿತ್ರಿ ಅಪಾಲಾ. ಇಂದ್ರನನ್ನು ಕುರಿತ ಅವಳ ಸೂಕ್ತದಲ್ಲಿ (೮.೯೧) ಏಳು ಮಂತ್ರಗಳಿವೆ. ಹೊಳೆಯತ್ತ ಹೋಗುತ್ತಿದ್ದಾಗ ಸೋಮಲತೆಯನ್ನು ಕಂಡು ಅದನ್ನು ಮನೆಗೆ ತಂದಳು ಮತ್ತು ಸೋಮರಸವನ್ನು ಸಿದ್ಧಪಡಿಸಿದಳು. ಅದು ಇಂದ್ರನಿಗಾಗಿ. ಆತ್ಮೀಯವಾಗಿ ಅವನಿಗೆ ಹೇಳಿದಳು : "ನನ್ನ ಹಲ್ಲಿನಿಂದ ಲತೆಯನ್ನು ಜಗಿದು ರಸ ಪಡೆದಿದ್ದೇನೆ; ಪರಿಕರಗಳೊಂದಿಗೆ ಅದನ್ನು ನಿನಗೆ ನೀಡುತ್ತಿರುವೆ, ಸ್ವೀಕರಿಸು." ಅವಳಿಗೇನೋ ಚರ್ಮರೋಗವಿದ್ದುದರಿಂದ ಗಂಡನು ಅವಳನ್ನು ಒಂಟಿಯಾಗಿಸಿದ್ದನೆಂಬ ಕತೆಯಿದೆ. ಇಂದ್ರನು ಅವಳನ್ನು ಸಂಪದ್ಭರಿತಳ ನ್ನಾಗಿಸುತ್ತಾನೆಂಬ ಮತ್ತು ಗಂಡನನ್ನು ಸೇರಿಕೊಳ್ಳುವ ಭರವಸೆ ಅವಳಿಗಿದೆ (ಮಂತ್ರ ೪ : ...ಕುವಿತ್ ಪತಿದ್ವಿಷಃ ಯತೀಃ ಇಂದ್ರೇಣ ಸಂಗಮಾಮಹೈ ॥). ತನ್ನ ಹಲ್ಲುಗಳಿಂದ ಸೋಮಲತೆಯನ್ನು ಕಚ್ಚಿ ತೆಗೆದಿದ್ದ ರಸವನ್ನು ಅಪಾಲಾ ನೀಡಿದಾಗ ಇಂದ್ರನು ಅದನ್ನು ಸ್ವೀಕರಿಸಿ ಅವಳ ಆಸೆಗಳನ್ನು ಪೂರೈಸಲು ಮುಂದಾದ. ಈ ಕತೆಯು ಸುದೀರ್ಘವಾಗಿ ಶಾಟ್ಯಾಯನ ಬ್ರಾಹ್ಮಣದಲ್ಲಿ ಉಕ್ತವಾಗಿದೆ. ಅವಳು ಮೂರು ಆಸೆಗಳನ್ನು ನಿವೇದಿಸಿ ಕೊಂಡಳು : "ಮೂರು ಸ್ಥಳಗಳಲ್ಲಿ 'ಬೆಳೆ' ಇಲ್ಲವಾಗಿದೆ; ಆ ಮೂರು ಕಡೆಯೂ ಬೆಳೆ ಬರುವಂತೆ ಮಾಡು." ಆ ಮೂರು ಸ್ಥಳಗಳನ್ನು ಐದನೆಯ ಮಂತ್ರವು ತಿಳಿಸುತ್ತದೆ : ಅವಳ ತಂದೆಯ ಬೋಳುತಲೆ, ಪಾಳುಬಿದ್ದಿರುವ ಅವನ ಹೊಲ ಮತ್ತು ಅವಳ ಸೊಂಟದ ಕೆಳಗಿನ ಭಾಗ (೫ : ಇಮಾನಿ ತ್ರೀಣಿ ವಿಷ್ಟಪಾ ತಾನಿ ಇಂದ್ರ ವಿ ರೋಹಯ । ಶಿರಃ ತತಸ್ಯ ಉರ್ವರಾಂ ಆತ್ ಇದಂ ಮೇ ಉಪ ಉದರೇ ॥). ಚರ್ಮದ ತೊಂದರೆಯಿಂದಾಗಿ ಅವಳ ಗುಹ್ಯಸ್ಥಾನದಲ್ಲಿ ಕೂದಲು ಇಲ್ಲವಾಗಿತ್ತು, ತಂದೆಗೆ ವಯಸ್ಸಿನಿಂದಾಗಿ ತಲೆ ಬೋಳಾಗಿತ್ತು ಮತ್ತು ಮಳೆಯಿಲ್ಲದೆ ಹೊಲವು ಬೋಳಾಗಿತ್ತು. ಅವಳ ಚರ್ಮರೋಗವನ್ನು ಇಂದ್ರನು ಹೋಗಲಾಡಿಸಿದ. ಅವಳ ಚರ್ಮವು ಸೂರ್ಯಪ್ರಭೆಯನ್ನು ಪಡೆಯಿತು. (೭ : ...ಅಪಾಲಾಂ ಇಂದ್ರ ತ್ರಿಃ ಪೂತ್ವೀ ಅಕೃಣೋಃ ಸೂರ್ಯತ್ವಚಂ). ಒಟ್ಟಿನಲ್ಲಿ, ಚರ್ಮರೋಗಕ್ಕೆ ಇಂದ್ರನು ಮದ್ದು ಕೊಡುತ್ತಾನೆ ಎಂದಾಯಿತು ! ಕವಯಿತ್ರಿಯು ತನ್ನ ಕವನದಲ್ಲಿ ವಿಶೇಷವಾದ ಕಾವ್ಯಾಂಶವನ್ನೇನೂ ತುಂಬಿದಂತೆ ಕಾಣುವುದಿಲ್ಲ.

ಐದನೆಯ ಮಂಡಲದ ೨೮ನೆಯ ಸೂಕ್ತದ ಕರ್ತೃ ವಿಶ್ವವಾರಾ ಎಂಬುವಳು. ಯಜ್ಞ ಸಂಬಂಧಿ ಅಂಶಗಳನ್ನೊಳಗೊಂಡ ಈ ಸೂಕ್ತವು ಅಗ್ನಿಯನ್ನು ಕುರಿತಾದದ್ದು. ಉಷೋ ದೇವತೆಯೊಡನೆ ಅಗ್ನಿಯು ರಾರಾಜಿಸುತ್ತಾನೆ; ಇಬ್ಬರೂ ಏಕಕಾಲದಲ್ಲಿ ಕಾಣಿಸಿಕೊಳ್ಳು ವಂಥವರು. ಎಲ್ಲ ಸೌಭಾಗ್ಯಗಳನ್ನೂ ಕೊಡುವ ಅಗ್ನಿಗೆ ವಿಶ್ವವಾರಾ ಹೇಳುತ್ತಾಳೆ, "ನಮ್ಮನ್ನು ದ್ವೇಷಿಸುವವರನ್ನು ಹಿಂದಿಕ್ಕು" ಎಂದು (೩ : ... ಶತ್ರುಯತಾಂ ಅಭಿತಿಷ್ಠ ಮಹಾಂಸಿ).

ಬೇರೆ ಕವಯಿತ್ರಿಯರ ಸೂಕ್ತಗಳೆಲ್ಲಾ ಹತ್ತನೆಯ ಮಂಡಲದಲ್ಲಿವೆ. ಅವನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಳ್ಳೋಣ. ೩೯ ಮತ್ತು ೪೦ನೆಯ ಸೂಕ್ತಗಳೆರಡೂ ಅಶ್ವಿನಿ ದೇವತೆಗಳನ್ನುದ್ದೇಶಿಸಿರುವಂಥವು ಮತ್ತು ಎರಡೂ ಕಕ್ಷಿವಾನನ ಮಗಳು ಘೋಷಾ ರಚಿಸಿರುವವು. ಋಗ್ವೇದದ ಕವಯಿತ್ರಿಯರಲ್ಲಿ ಈಕೆ ಪ್ರಮುಖಳು ಮತ್ತು ಪ್ರಸಿದ್ಧಳು. ಬೇರೆ ಹಲವು ಋಗ್ವೇದ ಮಂತ್ರಗಳಿಗಿರುವಂತೆ ಅವಳು ರಚಿಸಿದ ಮಂತ್ರ ಗಳಿಗೂ ವಿನಿಯೋಗವಿದೆ; ಅಂದರೆ ಯಾವ ಮಂತ್ರವನ್ನು ಯಾವ ಯಜ್ಞದ ಸಂದರ್ಭದಲ್ಲಿ ಹೇಗೆ ಬಳಸಿಕೊಳ್ಳಬಹುದೆಂಬುದರ ಸೂಚನೆ ಇದೆಯೆಂದರ್ಥ. ಬೇರೆ ಕವಯಿತ್ರಿಯರು ರಚಿಸಿದ ಮಂತ್ರಗಳಿಗೆ ವಿನಿಯೋಗವನ್ನು ಹೇಳಿಲ್ಲವೆಂದೇನೂ ಇಲ್ಲ. ಮುಂದೆ ನಾವು ನೋಡುವಂತೆ ಕೆಲವು ಸೂಕ್ತಗಳಿಗೆ ಅದಿರುವುದಿಲ್ಲ.

ಅಶ್ವಿನೀ ದೇವತೆಗಳನ್ನು ಸ್ಮರಿಸುವುದು ತಂದೆಯನ್ನು ಸ್ಮರಿಸಿದಂತೆ (ಮಂತ್ರ ೧) ಎನ್ನುವ ಘೋಷಾ ಸರ್ವಾಂಗೀಣವಾದ ಯಶಸ್ಸನ್ನು ಕೋರುತ್ತಾಳೆ (೨ : ...ಯಶಸಂ ಭಾಗಂ ಕೃಣುತಂ...). ತಾನು ಮನೆಯಲ್ಲೇ ಕೂತು ವೃದ್ಧಳಾಗಿಬಿಡುವ ಆತಂಕ ಅವಳಿಗೆ; ಅಂತಹ ಸಮಯದಲ್ಲಿ ಆಸರೆ ದೊರೆಯುವುದು ಅಶ್ವಿನಿಗಳಿಂದ; ಅವರು ಪತಿಯನ್ನು ಕೊಡುತ್ತಾರೆ (೩ : ಅಮಾಜುರಃ ಚಿತ್ ಭವಥಃ ಯುವಂ ಭಗಃ). ಬೇರೊಂದು ಸೂಕ್ತದಲ್ಲಿ (೧.೧೧೭.೭) ಸಹ ಇದು ಉಕ್ತವಾಗಿದೆ (ಘೋಷಾಯೈ ಚಿತ್ ಪಿತೃಷದೇ ದುರೋಣೇ ಪತಿಂ ಜೂರ್ಯಂತ್ಯಾ ಅಶ್ವಿನೌ ಅದತ್ತಂ). ಅಂದರೆ, ಋಗ್ವೇದದ ಉತ್ತರ ಕಾಲದಲ್ಲಿ ಹೆಣ್ಣುಮಕ್ಕಳು ತಾವೇ ಸ್ವತಃ ಗಂಡಂದಿರನ್ನು ಅರಸಿಕೊಳ್ಳುತ್ತಿರಲಿಲ್ಲ ಎನ್ನೋಣವೆ ? ಪುರುಷರು ನಾಸತ್ಯರನ್ನು "ಮನಸ್ಸಿಗೆ ಔಷಧಿ ಕೊಡುವವರು" ಎನ್ನುತ್ತಾರೆಂದು ಘೋಷಾ ಹೇಳುತ್ತಾಳೆ (...ಯುವಾಂ ಇತ್ ಆಹುಃ ಭಿಷಜಾ ರುತಸ್ಯ ಚಿತ್). ಅವರು ಭೇದ ಮಾಡದೆ ಎಲ್ಲರಿಗೂ ಆಪ್ತರಾಗುತ್ತಾರೆ (ಅವಿತಾರಾ ಅಪಮಸ್ಯ ಚಿತ್). ಇದು ನಾಸತ್ಯರ ಪ್ರಮುಖ ಮತ್ತು ಉದಾತ್ತ ಲಕ್ಷಣ.

ಋಗ್ವೇದದ ಕಾಲದ ಒಂದೆರಡು ಶತಮಾನಗಳ ನಂತರ, ದೇವ ವೈದ್ಯರೆಂದು ಯಶಸ್ಸನ್ನು ಪಡೆದಿದ್ದ ಅಶ್ವಿನೀ ದೇವತೆಗಳಿಗೆ ಯಜ್ಞದಲ್ಲಿ ಹವಿಸ್ಸು ನೀಡಬಾರದೆಂದು ಹೇಳಲಾಯಿತು. ಅದನ್ನು ತೈತ್ತಿರೀಯ ಸಂಹಿತೆ ಮತ್ತು ಶತಪಥ ಬ್ರಾಹ್ಮಣ ಬಹಳ ಕಟ್ಟುನಿಟ್ಟಾಗಿ ಆಗ್ರಹಿಸುತ್ತವೆ. ಅವರು "ಭೇದ ಮಾಡದೆ ಎಲ್ಲರನ್ನೂ ಸಲಹುವುದು" ಅದಕ್ಕೆ ಕಾರಣ. ಅವರು ಪ್ರಾಯಶ್ಚಿತ್ತ ಮಾಡಿಕೊಂಡರೆ ಮಾತ್ರ ಹವಿರ್ಭಾಗಕ್ಕೆ ಅರ್ಹರಾಗುತ್ತಾರೆಂದು ತೈತ್ತಿರೀಯ ಸಂಹಿತೆ ಹೇಳುತ್ತದೆ (೬.೪.೯): ಅವರನ್ನು ಬಹಿಷ್ಪವಮಾನ ಸ್ತೋತ್ರದಿಂದ ಶುದ್ಧೀಕರಿಸಿ ಆಮೇಲೆ ಹವಿಸ್ಸು ನೀಡಬಹುದು. ಋಗ್ವೇದದ ಕಾಲದಲ್ಲಿ ಸಚ್ಚಾರಿತ್ರ್ಯಕ್ಕೆ ಹೆಸರಾಗಿದ್ದವರು ಆಮೇಲೆ ಅಶುದ್ಧರೆನಿಸಿಕೊಂಡಿದ್ದು ಹೇಗೆ ಮತ್ತು ಏಕೆ ? ಋಗ್ವೇದೋತ್ತರ ವೈದಿಕ ಸಾಹಿತ್ಯದಲ್ಲಿ ವೈದ್ಯಕೀಯವನ್ನು ಖಂಡಿಸುವ ಪ್ರವೃತ್ತಿ ಬೆಳೆದಿತ್ತು ಮತ್ತು ಅಶ್ವಿನಿ ದೇವತೆಗಳು ವೈದ್ಯರು. ಅದಕ್ಕೇ ಅವರು ಹವಿಸ್ಸಿಗೆ ಅನರ್ಹರು ! ಶ್ರೇಣೀಕೃತ ಸಮಾಜ ಅಥವಾ ವರ್ಣ ವಿಭಜಿತ ಸಮಾಜವು ಅಸ್ತಿತ್ವಕ್ಕೆ ಬಂದನಂತರದ ವಿದ್ಯಮಾನ ಇದು. ಕಾಡುಮೇಡುಗಳಲ್ಲಿ ಸಂಚರಿಸಿ ಎಲ್ಲರೊಡನೆ ಬೆರೆಯುವ ಮತ್ತು ಎಲ್ಲರಿಗೂ ಚಿಕಿತ್ಸೆ ನೀಡುವ ವೈದ್ಯರು ವರ್ಣವಿಭಜನೆಯನ್ನು ನಿರಾಕರಿಸುವಂಥವರು. ಉಚ್ಚ ವರ್ಣದವರಿಗೆ ಸದಾ ವರ್ಣ ಸಂಕರದ್ದೇ ಭಯ ಮತ್ತು ವೈದ್ಯರು ಸಂಕರದ ಕಾರಣ ರಾಗುವಂಥವರು. ಇನ್ನೂ ಮುಂದಿನ ಕಾಲದಲ್ಲಿ ಧರ್ಮಶಾಸ್ತ್ರಕಾರರು ವೈದ್ಯರನ್ನು ಬಹಳ ತುಚ್ಛವಾಗಿ ಕಂಡರು. ಅದಕ್ಕೆ ಎರಡು ಕಾರಣಗಳಿದ್ದವು : (ಅ) ವೈದ್ಯರು ಎಲ್ಲ ಜಾತಿಯವರೊಡನೆ ಬೆರೆಯುತ್ತಾರೆ, ಎಲ್ಲರಿಗೂ ಚಿಕಿತ್ಸೆ ನೀಡುತ್ತಾರೆ; (ಆ) ವೈದ್ಯರು ಕರ್ಮಸಿದ್ಧಾಂತವನ್ನು ಮಾನ್ಯ ಮಾಡುವುದಿಲ್ಲ. ಋಗ್ವೇದದ ಮೌಲ್ಯವು ಮೂಲತಃ ಬುಡಕಟ್ಟು ಸಮಾಜದ್ದು, ಅಂದರೆ ಅದು ಸಮಾನತೆಯ ಪರವಾದ್ದು. ಸಾಮಾಜಿಕ ಅಸಮಾನತೆಯನ್ನು ಎತ್ತಿಹಿಡಿಯುವವರು ತಾವು ಋಗ್ವೇದಕ್ಕೆ ಅಪಾರ ಮಹತ್ವ ನೀಡುವುದಾಗಿ ಹೇಳಿಕೊಂಡರೆ ಅದು ಅತಿದೊಡ್ಡ ವಿಪರ್ಯಾಸವಾಗುತ್ತದೆ. ಅಶ್ವಿನೀ ದೇವತೆಗಳು "ಅಪಮರ ರಕ್ಷಕರು" ಎಂದಿರುವುದು ಘೋಷಾಳ ಮಹತ್ವವನ್ನು ಹೆಚ್ಚಿಸುತ್ತದೆ. (ಅಪಮರು ಎಂದರೆ ನಿಕೃಷ್ಟರು ಎಂದರ್ಥ. ಅಶ್ವಿನಿಗಳ ಶ್ರೇಷ್ಠತೆ ಯೆಂದರೆ ಅಂಥವರಿಗೆ ಕೂಡ "ಭೇದ ಮಾಡದೆ" ಸಹಾಯ ಹಸ್ತ ನೀಡುವುದು).

ಮುಂದಿನ ಮಂತ್ರದಲ್ಲಿ ಚ್ಯವಾನ ಮತ್ತು ತುಗ್ರ ಹೇಗೆ ಅಶ್ವಿನಿಗಳಿಂದ ಉಪಕೃತ ರಾದರೆಂಬುದನ್ನು ಸ್ಮರಿಸಲಾಗಿದೆ. ಇಬ್ಬರಿಗೂ ವೈದ್ಯಕೀಯದ ಸೇವೆ ದೊರಕಿದ್ದು ಅಶ್ವಿನಿಗಳಿಂದಾಗಿ; ಆದ್ದರಿಂದ ಯಜ್ಞದಲ್ಲಿ ಹವಿಸ್ಸು ನೀಡುವಾಗ ಅವರನ್ನು ಮರೆಯುವಂತಿಲ್ಲ ಎಂದು ಘೋಷಾ ಹೇಳುತ್ತಾಳೆ (೪ : ...ವಾಂ ಸವನೇಷು ಪ್ರವಾಚ್ಯಾ). ಇದಕ್ಕೆ ತೀರಾ ವ್ಯತಿರಿಕ್ತವಾದ್ದು ತೈತ್ತಿರೀಯ ಸಂಹಿತೆಯ ಆಪಾದನೆ : "ಅಶ್ವಿನಿಗಳು ಅಶುದ್ಧರು; ವೈದ್ಯರಾಗಿ ಸಾಮಾನ್ಯ ಮನುಷ್ಯರ ನಡುವೆ ಸಂಚರಿಸುತ್ತಾರೆ" (ಅಪೂತೌ ವಾ ಇಮೌ ಮನುಷ್ಯಚರೌ ಭಿಷಜೌ). ಘೋಷಾ ಇನ್ನೂ ಮುಕ್ತವಾಗಿ ದೇವವೈದ್ಯರ ಶ್ರೇಷ್ಠತೆಯನ್ನು ಘೋಷಿಸುತ್ತಾಳೆ : "ನಿಮ್ಮ ಪ್ರಸಿದ್ಧ ಸಾಹಸಗಳನ್ನು ಜನರಿಗೆ ತಿಳಿಸಿಕೊಡುತ್ತೇವೆ; ನಮ್ಮ ವಿರೋಧಿಗಳು ಅದನ್ನು ತಿಳಿಯಲಿ" (೫ : ಪುರಾಣಾ ವಾಂ ವೀರ್ಯಾ ಪ್ರ ಬ್ರವ ಜನೇ... ಅಯಂ ನಾಸತ್ಯಾ ಶ್ರತ್ ಅರಿಃ ಯಥಾ ದಧತ್). ತನ್ನ ವೈಯಕ್ತಿಕ ಸ್ಥಿತಿಯನ್ನು ತಿಳಿಸಿ ಘೋಷಾ ಮುಂದಿನ ಮಂತ್ರದಲ್ಲಿ ಅಶ್ವಿನಿಗಳ ಸಹಾಯ ಕೇಳುತ್ತಾಳೆ. ಅವಳಿಗೆ ಕುಷ್ಠರೋಗವಿತ್ತು; ಅದಕ್ಕೇ ಮದುವೆಯೂ ಸಾಧ್ಯವಾಗದೆ ಹೋಗಿತ್ತು. ಅವಳಿಗೆ ಯಾರೂ ಇಲ್ಲದಂತಹ ಸಂದರ್ಭದಲ್ಲಿ ನಾಸತ್ಯರೇ ಅವಳಿಗೆ ತಂದೆ–ತಾಯಿ ಮತ್ತು ಬಳಗ (೬ : ಇಯಂ ವಾಂ ಅಹ್ವೇ ಶೃಣುತಂ ಮೇ ಅಶ್ವಿನಾ ಪುತ್ರಾಯ ಇವ ಪಿತರಾ ಮಹ್ಯಂ ಶಿಕ್ಷತಂ। ಅನಾಪಿಃ ಅಜ್ಞಾಃ ಅಸಜಾತ್ಯಾ ಅಮತಿಃ ಪುರಾ ತಸ್ಯಾಃ ಅಭಿಶಸ್ತೇಃ ಅವ ಸ್ಪೃತಂ ॥). ವಿಮದ, ಪುರುಮಿತ್ರ, ಕಲಿ, ವಂದನ, ವಿಶ್ಪಲಾ, ಇವರೆಲ್ಲಾ ಬೇರೆ ಬೇರೆ ರೀತಿಗಳಲ್ಲಿ ಅಶ್ವಿನಿಗಳ ಸಹಾಯ ಪಡೆದವರು; ರೇಭ, ಸಪ್ತವಧ್ರಿ, ಅತ್ರಿ, ಇವರೆಲ್ಲಾ ಅನಾಹುತ ಗಳಿಂದ ಪಾರಾಗಲು ಅವರನ್ನು ಆಶ್ರಯಿಸಿದ್ದರು; ಪೇದು ಅವರಿಂದ ಒಂದು ಬಿಳಿ ಕುದುರೆಯನ್ನು ಪಡೆದಿದ್ದ (೭–೧೦). ಇಂತಹ ಇಬ್ಬರು ಮಹಾನ್ ಅಶ್ವಿನೀ ದೇವತೆಗಳಿರುವಾಗ ಮಾನವನಿಗೆ ಸಂಕಷ್ಟ, ಅಪಾಯ, ಯಾವುದೂ ಇರುವುದಿಲ್ಲ; ಅವರ ಇದಿರಾಗಿ ನಿಲ್ಲುವವರಾದರೂ ಯಾರು ? (೧೧). ಋಭುಗಳು ನಿರ್ಮಿಸಿಕೊಟ್ಟ ರಥವು ಅವರನ್ನು ವೇಗವಾಗಿ ಎಲ್ಲಿಗೆ ಬೇಕಾದರೂ ಕೊಂಡೊಯ್ಯುತ್ತದೆ; ಎಲ್ಲಿದ್ದರೂ ಅಶ್ವಿನಿಗಳ ಸಹಾಯ ದಿನವಾಗಿರಲಿ, ರಾತ್ರಿಯಾಗಿರಲಿ, ಯಾವಾಗಲೂ ಲಭ್ಯ (೧೨). ತೋಳದ ಬಾಯಿಗೆ ಸಿಕ್ಕ ಸಣ್ಣ ಪಕ್ಷಿಗೆ ಸಹ ನಾಸತ್ಯರ ರಕ್ಷಣೆಯುಂಟು; ರಾತ್ರಿಯು ತೋಳವಾದರೆ ಉಷಸ್ಸು ಸಣ್ಣ ಪಕ್ಷಿ. ಕತ್ತಲು ಎಂದೂ ಬೆಳಕನ್ನು ನುಂಗಿಹಾಕದಂತೆ ನೋಡಿಕೊಳ್ಳುವವರು ಅಶ್ವಿನೀ ದೇವತೆಗಳು. ಅನಾರೋಗ್ಯವು ಕತ್ತಲು, ಆರೋಗ್ಯವು ಬೆಳಕು. (೧೩ : ...ವೃಕಸ್ಯ ಚಿತ್ ವರ್ತಿಕಾಂ ಅಂತಃ ಆಸ್ಯಾತ್ ಯುವಂ ಶಚೀಭಿಃ ಗ್ರಸಿತಾಂ ಅಮುಂಚತಂ). ಅಶ್ವಿನೀ ದೇವತೆಗಳನ್ನು ಉದ್ದೇಶಿಸಿ ರಚಿತವಾಗಿರುವ ಸೂಕ್ತಗಳಲ್ಲಿ ಘೋಷಾಳ ಕವನವು ಗಮನಾರ್ಹವಾಗಲು ಇಂತಹ ರೂಪಕಗಳು ಬೆನ್ನಿಗೆ ನಿಂತಿವೆ.

ಮುಂದಿನ ಸೂಕ್ತ (೧೦.೪೦) ಸಹ ಘೋಷಾಳದು; ಅದೂ ಅಶ್ವಿನೀದೇವತೆ ಗಳನ್ನು ಕುರಿತಾದದ್ದೇ ಆಗಿದೆ. ಅಶ್ವಿನೀ ದೇವತೆಗಳು ವೈದ್ಯರಾಗಿರುವುದರಿಂದ ಸರ್ವತ್ರ ಸಂಚಾರಿಗಳಾಗಿರುವುದು ಅನಿವಾರ್ಯ. ಈಗ ಇಲ್ಲಿ; ಆಮೇಲೆ ಎಲ್ಲಿ ? ಇದು ಸತತವಾಗಿ ಮುಂಬರುವ ಪ್ರಶ್ನೆ. ಹೀಗೆ ನಿರಂತರ ಸಂಚಾರಿಗಳಾಗಿರುವುದರಿಂದ ಅವರೆಲ್ಲಿ ಎಂಬುದು ನಿತ್ಯ ಪ್ರಶ್ನೆ. ಘೋಷಾ ಅದಕ್ಕೆ ಒತ್ತುಕೊಟ್ಟಿರುವುದು ಈ ಸೂಕ್ತದ ವಿಶೇಷ. ಪ್ರಜ್ಞಾಪೂರ್ವಕವಾಗಿಯೋ ಅಲ್ಲವೋ, ಅಂತೂ ಅವಳಿಗೆ ಅನುಪ್ರಾಸದ ಗೀಳಿದೆ. ಮೊದಲನೆಯ ಮಂತ್ರವನ್ನು ನೋಡಿ :

*ರಥಂ ಯಾಂತಂ ಕುಹ ಕೋ ಹ ವಾಂ ನರಾ ಪ್ರತಿ ದ್ಯುಮಂತಂ*
*ಸುವಿತಾಯ ಭೂಷತಿ । ಪ್ರಾತರ್ಯಾವಾಣಂ ವಿಭ್ವಂ*
*ವಿಶೇವಿಶೇ ವಸ್ತೋರ್ವಸ್ತೋರ್ವಹಮಾನಂ ಧಿಯಾ ಶಮಿ ॥*

ಬಿಡುವಿಲ್ಲದ ಅಶ್ವಿನಿಗಳು ರಥ ಹತ್ತಿದರೆ ಮುಗಿಯಿತು, ಯಾವ ಹೊತ್ತಿನಲ್ಲಿ ಎಲ್ಲಿರುತ್ತಾರೋ ಹೇಳಲಾಗದು. ಕಡೆಗೆ ಯಜ್ಞಶಾಲೆಗಾದರೂ ಬರುತ್ತಾರೋ ಇಲ್ಲವೋ. ಅವರಿಗೆ ಇಂಥದೇ ಎಂದು ಒಂದು ತಂಗುದಾಣವಿದೆಯೆ ? ಜನಸಾಮಾನ್ಯರ ವಿಶ್ವದಲ್ಲಿ, ಅವರ ಜೀವನದಲ್ಲಿ, ಯಥಾಪ್ರಕಾರ ಏನೇನು ನಡೆಯಬೇಕೋ ಅವೆಲ್ಲಾ ನಡೆಯುತ್ತಿರುತ್ತವೆ. ಉದಾಹರಣೆಗೆ, ವಿಧವೆಯೊಬ್ಬಳು ತನ್ನ ಗಂಡನ ಸೋದರನನ್ನು ಕೂಡಿಕೊಳ್ಳುತ್ತಾಳೆ; ಇನ್ನೊಂದೆಡೆ ಕನ್ಯೆಯೊಬ್ಬಳು ಯುವಕನನ್ನು ಆಕರ್ಷಿಸುವುದರಲ್ಲಿ ಮಗ್ನಳು. ಅಶ್ವಿನಿಗಳಿಗೆ 'ಯಥಾಪ್ರಕಾರ' ಎಂಬುದಿಲ್ಲ. (೨ : ಕುಹ ಸ್ವಿತ್ ದೋಷಾ ಕುಹ ವಸ್ತೋಃ ಅಶ್ವಿನಾ ಕುಹ ಅಭಿಪಿತ್ವಂ ಕರತಃ ಕುಹ ಊಷತುಃ । ಕಃ ವಾಂ ಶಯುತ್ರಾ ವಿಧವಾ ಇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸಧಸ್ಥೇ ಆ ॥). ವಿಧವೆಯರ ಪುನರ್ವಿವಾಹಕ್ಕೆ ಋಗ್ವೇದದ ಕಾಲದಲ್ಲಿ ಅಡ್ಡಿಯಿರಲಿಲ್ಲ. ಮನುವಿನ ಕಾಲದಲ್ಲೂ ಆ ಪದ್ಧತಿ ಇದ್ದಿತು (ಮನು : ೯.೬೯–೭೦). ಯಹೂದಿಗಳಲ್ಲಿಯೂ ಅಂಥದೇ ಪದ್ಧತಿಯು ಇದ್ದಿತೆಂದು ಹೇಳುತ್ತಾರೆ. ಅದಂತಿರಲಿ, ಘೋಷಾ ಋಗ್ವೇದದ ಸಾಮಾನ್ಯ ಕವಿಗಳಿಗಿಂತ ಕಲ್ಪನೆ, ಪ್ರತಿಪಾದನೆ ಮತ್ತು ಅಭಿವ್ಯಕ್ತಿಯಲ್ಲಿ ಎತ್ತರದ ಸ್ಥಾನದಲ್ಲಿ ನಿಲ್ಲುತ್ತಾಳೆ. ಅಶ್ವಿನಿಗಳು ಯಾರ ಹಾನಿಗೂ ಹಾತೊರೆಯುವುದಿಲ್ಲ (೩ : ...ಕಸ್ಯ ಧ್ವಸ್ರಾ ಭವಥಃ ...). ಅವರು ಇಂದ್ರನಂತಲ್ಲವೆಂದು ಬೇಕಾದರೆ ನಾವು ಸೇರಿಸಬಹುದು.

ಹವಿಸ್ಸಿಗಾಗಿ ದೇವತೆಗಳು ಧಾವಿಸಿ ಬರುತ್ತಾರೆ. ಅಶ್ವಿನಿಗಳು ಅದಕ್ಕೆ ಅಪವಾದ. ಯಜ್ಞ ಮಾಡುವ ಯಜಮಾನನು ಅವರನ್ನು ಹುಡುಕಿಕೊಂಡು ಅವರ ಹಿಂದೆ ಓಡುತ್ತಿರಬೇಕು; ಬೇಟೆಗಾರರು ಕಾಡಾನೆಗಳನ್ನು ಹಿಡಿಯಲು ಹಿಂಬಾಲಿಸಿ ಓಡುವಂತೆ (೪ : ಯುವಾಂ ಮೃಗೇವ ವಾರಣಾ ಮೃಗಣ್ಯವಃ ...). ಮುಂದಿನ ಮಂತ್ರದಲ್ಲಿ ಕವಯಿತ್ರಿಯು ತೃತೀಯ ಪುರುಷದ ಬಳಕೆ ಮಾಡಿ ಹೇಳುತ್ತಾಳೆ : "ನಿಮ್ಮ ಬಳಿಗೆ ಕಕ್ಷೀವನನ ಮಗಳು ಘೋಷಾ ಬಂದು ಬೇಡುತ್ತಾಳೆ, ನೀವು ಸದಾ ಅವಳೊಡನೆ ಇರಬೇಕೆಂದು. ರಥ ಮತ್ತು ಕುದುರೆಗಳನ್ನು ಉಳ್ಳವನೊಬ್ಬ ಅವಳಿಗೆ ಬೇಕಂತೆ, ದಯವಿಟ್ಟು ಕೊಡಿಸಿ ಎಂದು ನಿಮ್ಮನ್ನು ಕೇಳಿಕೊಳ್ಳುತ್ತಿದ್ದಾಳೆ" (೫ : ಯುವಾಂ ಹ ಘೋಷಾ ಪರಿ ಅಶ್ವಿನಾ ಯತೀ ರಾಜ್ಞಃ ಊಚೇ ದುಹಿತಾ ಪೃಚ್ಛೇ ವಾಂ ನರಾ। ಭೂತಂ ಮೇ ಅಹ್ನೇ ಉತ ಭೂತಂ ಅಕ್ತವೇ ಅಶ್ವಾವತೇ ರಥಿನೇ ಶಕ್ತಮರ್ವತೇ ॥). ಜೇನುನೊಣವು ತನ್ನಲ್ಲಿ ತುಂಬಿಕೊಳ್ಳುವ ಜೇನುತುಪ್ಪವು ಅಶ್ವಿನಿಗಳದ್ದು; ಅದನ್ನು ಯುವತಿಯೊಬ್ಬಳು ಅಂಗೈಯಲ್ಲಿ ಹಾಕಿಕೊಂಡು ಓಡಾಡುತ್ತಿದ್ದಾಳೆ (೬ : ...ಯುವೋಃ ಹ ಮಕ್ಷಾ ಪರಿ ಅಶ್ವಿನಾ ಮಧು ಆಸಾ ಭರತ ನಿಷ್ಕೃತಂ ನ ಯೋಷಣಾ). ಈ ಯುವತಿಯ ಆಶಯವು ಘೋಷಾಳ ಆಶಯದಂತೆಯೇ ಇರಬಹುದು (ಮಂತ್ರ ೫), ರಥ–ಕುದುರೆ ಹೊಂದಿದ ಯಾವನಾದರೂ ಯುವರಾಜನಿಗಾಗಿ ಎದುರುನೋಡುವುದು !

ಮುಂದೆ ನಾಸತ್ಯರಿಂದ ಸಹಾಯ ಪಡೆದ ಕೆಲವರ ಹೆಸರುಗಳು ಬರುತ್ತವೆ : ಭುಜ್ಯು, ವಶ, ಶಿಂಜಾರ, ಉಶನಾ, ಕೃಶ, ಶಯು, ಇತ್ಯಾದಿ. ಯಾರಾದರೂ ಸರಿಯೆ, ಉಪಚಾರ ಮಾಡುವವನಿರಬಹುದು ಇಲ್ಲವೆ ವಿಧವೆ ಇರಬಹುದು,

ಎಲ್ಲರಿಗೂ ಅಶ್ವಿನಿಗಳು ಏಕರೂಪವಾಗಿ ರಕ್ಷಣೆ ನೀಡುತ್ತಾರೆ (೮: ...ವಿಧಂತಂ ವಿಧವಾಂ ಉರುಷ್ಯಥಃ). ವೈದ್ಯರೆಂದರೆ ಹಾಗಿರಬೇಕು ಎಂಬ ಇಂಗಿತವೂ ಇದರಲ್ಲಿದೆ. ಅಂಥವರನ್ನು ಮನು ಗಾಯದ ಕೀವಿಗೆ ಸಮನೆಂದುಬಿಟ್ಟ ; ವರ್ಣ ವ್ಯವಸ್ಥೆ ಎಂಬ ಕಲ್ಲುಚಪ್ಪಡಿ ನಮ್ಮ ಪರಂಪರೆಯಲ್ಲಿ ಅಷ್ಟು ಘೋರವಾಗಿ ಬೆಳೆಯಿತು ! ಅಶ್ವಿನಿಗಳು ಮಗು, ಹೂವು, ಹೀಗೆ ಜೀವ ಮತ್ತು ಸೌಂದರ್ಯ ಎರಡಕ್ಕೂ ಜನಕರು ಎಂದು ಹೇಳುವಾಗ ಘೋಷಾ ತನ್ನನ್ನೇ ನಿದರ್ಶನವಾಗಿ ನೀಡಿಕೊಂಡಿದ್ದಾಳೆ. ಹೂವನ್ನು ಸೃಷ್ಟಿಸಿರುವುದು ಮಗುವಿಗಾಗಿಯೇ ಎಂಬ ಮಧುರ ಭಾವನೆ ಅವಳದು (೯ : ಜನಿಷ್ಟ ಯೋಷಾ ಪತಯತ್ ಕನೀನಕಃ ವಿ ಚ ಅರುಹನ್ ವೀರುಧಃ ದಂಸನಾಃ ಅನು). ಇದನ್ನು ಅರ್ಥೈಸುವಾಗ ಗ್ರಿಫಿತ್ ಅಂಥವರು 'ಹೆಂಗಸು ಹಡೆದಳು' ಎಂದಾಗ ಹೆಂಗಸೆಂದರೆ ಮೋಡ, ಮಗು ಎಂದರೆ ಮಿಂಚು, ಎಂದೆಲ್ಲಾ ಸೂಚಿಸಿದ್ದಾರೆ. ಅವರಿಗೆ ಸೂಕ್ತದ ಕವಿತ್ವಕ್ಕಿಂತಲೂ ಯಜ್ಞ ಸಂಬಂಧಿ ಅಂಶವೇ ಪ್ರಧಾನವಾಗುತ್ತದೆ. ಈ ಕವಯಿತ್ರಿಯ ಪ್ರತಿಭೆಯ ಹರಿವು ಕೆಲವೇಳೆ ಎತ್ತೆತ್ತಲೋ ಹೋಗಿ ಗೊಂದಲ ಉಂಟುಮಾಡುತ್ತದೆಂಬುದಕ್ಕೆ ಅದೊಂದು ಉದಾಹರಣೆ. ಮುಂದಿನ ಮಂತ್ರವು (೧೦ : ಜೀವಂ ರುದಂತಿ ವಿ ಮಯಂತೇ ಅಧ್ವರೇ ದೀರ್ಘಾಂ ಅನು ಪ್ರಸಿತಿಂ ದೀಧಿಯುಃ ನರಃ। ವಾಮಂ ಪಿತೃಭ್ಯಃ ಯೇ ಇದಂ ಸಮೇರಿರೇ ಮಯಃ ಪತಿಭ್ಯಃ ಜನಯಃ ಪರಿಷ್ವಜೇ ॥) ಇನ್ನೂ ಹೆಚ್ಚು ಗೊಂದಲ ಉಂಟುಮಾಡಬಲ್ಲದು. ಹಿಂದಿನ ಮಂತ್ರವು ಹುಟ್ಟಿನ ಸಡಗರವನ್ನು ಚಿತ್ರಿಸಿತ್ತು; ಈಗಿನ ಮಂತ್ರವು ಸಾವಿನ ಚಿತ್ರವನ್ನು ಕೊಡುತ್ತದೆ. ಅಶ್ವಿನೀ ದೇವತೆಗಳು ಎಷ್ಟೇ ನಿಪುಣ ವೈದ್ಯರಾಗಿದ್ದರೂ ಸಾವನ್ನು ತಪ್ಪಿಸಲು ಅವರಿಂದಲೂ ಆಗದು. ಪತಿಯು ಗತಿಸಿದಾಗ ಪತ್ನಿಯು ರೋದಿಸುತ್ತಾಳೆ; ಇತರರು ಅವಳಿಗಾಗಿ ಕನಿಕರಪಡುತ್ತಾರೆ. ಅದೂ ಬಹುಶಃ ಯಜ್ಞದ ಒಂದು ರೂಪ. ಮುಂದಿನ ಜೀವನ ವಿಧಾನ, ಸತ್ತವನ ಮಕ್ಕಳ ತ್ರಾಸ, ಅನಿಶ್ಚಿತತೆಯ ಗಾಢತೆ, ಇವೆಲ್ಲಾ ನೆರೆದವರನ್ನು ತಟ್ಟುತ್ತದೆ. ಅದೇ ಸಮಯದಲ್ಲಿ ತಮ್ಮ ಇರವಿನ ಬಗೆಗೆ ಯೋಚಿಸಿದಾಗ ಸಾಮ್ಯತೆಯ ಅಭಾವವು ಕಣ್ಣಿಗೆ ರಾಚುವಷ್ಟು ಸ್ಪಷ್ಟ. ನೆರೆದಿರುವವರಲ್ಲಿ ತಂದೆಯರಿದ್ದಾರೆ, ಅವರು ಜೀವಂತವಾಗಿದ್ದಾರೆ, ಪತ್ನಿಯರು ಪಕ್ಕದಲ್ಲಿದ್ದು ಕೈ ಹಿಡಿದಿದ್ದಾರೆ. ನೆಮ್ಮದಿಯ ಭಾವವು ಮೃತನ ಪತ್ನಿ ಮತ್ತು ಬಂಧುಗಳ ಶೋಕದ ನಡುವೆಯೇ ಮೂಡುತ್ತದೆ. ಅಶ್ವಿನೀ ದೇವತೆಗಳ ಸಖ್ಯವು ಇನ್ನಷ್ಟು ಸಾಂದ್ರವಾಗಿ ಅನುಭವಕ್ಕೆ ಬರುತ್ತದೆ. ಹೀಗೆ ಭಾವಗಳನ್ನು ವ್ಯಂಜಿಸುವ ಘೋಷಾ ನಿಜಕ್ಕೂ ಒಬ್ಬ ಯಶಸ್ವೀ ಕವಯಿತ್ರಿ.

ಎರಡು ಮಂತ್ರಗಳ ವಿಭಿನ್ನ ಸನ್ನಿವೇಶ ಮತ್ತು ಚಿತ್ರಗಳನ್ನು ನೀಡಿದ ಘೋಷಾ ಈಗ ಅಂತರ್ಮುಖಿ ಯಾಗುತ್ತಾಳೆ. ಈ ಜೀವನದಲ್ಲಿ ತಾನೆಲ್ಲಿ ನಿಲ್ಲುತ್ತಾಳೆ ? ಅವಳು ಒಬ್ಬೊಂಟಿ, ಅವಳಿಗೂ ಮದುವೆಯಾಗ ಬೇಕೆಂಬ ಲಾಲಸೆ ಉಂಟು. ಯಾರೋ ಯುವಕ ತನ್ನ ಪ್ರೇಯಸಿಯೊಡನೆ ಸುಖಿಸುತ್ತಿರುತ್ತಾನೆ, ಆದರೆ ಘೋಷಾ ಯಾರಿಗೂ ಪ್ರೇಯಸಿಯಲ್ಲ. ತನ್ನ ಒಂದೇ ಆಸೆ ಎಂದರೆ ಒಬ್ಬ ಒಳ್ಳೆಯ ಗಂಡನ ಮನೆಗೆ ಸೇರಿಕೊಳ್ಳು ವುದೆಂದು ತನ್ನ ಹೃದಯವನ್ನು ತೋಡಿಕೊಳ್ಳುತ್ತಾಳೆ. ಅಲಂಕಾರಶಾಸ್ತ್ರದ ನೆಲೆಯಲ್ಲಿ ಇದು ವಿಪ್ರಲಂಭ ಶೃಂಗಾರವೆನಿಸಿಕೊಳ್ಳುವುದಿಲ್ಲ, ಆದರೆ ಭಾವನೆಗಳ ತೀವ್ರತೆಯು ಅದರಲ್ಲಿರಬೇಕಾದಂತೆಯೇ ಇದೆ. ಒಂದು ಪುಟಿಯುವ ಯುವಮನಸ್ಸಿನ ಚಿತ್ರವು ಆರ್ದ್ರವಾಗಿ ಮೂಡಿಬಂದಿದೆಯೆಂಬುದಂತೂ ಖಚಿತ. (೧೧ : ನ ತಸ್ಯ ವಿದ್ಮ ತದು ಷು ಪ್ರ ವೋಚತ ಯುವಾ ಹ ಯದ್ಯುವತ್ಯಾಃ ಕ್ಷೇತಿ ಯೋನಿಷು । ಪ್ರಿಯೋಸ್ರಿಯಸ್ಯ ವೃಷಭಸ್ಯ ರೇತಿನೋ ಗೃಹಂ ಗಮೇಮ ಅಶ್ವಿನಾ ತತ್ ಉಶ್ಮಸಿ ॥ – ಇಲ್ಲಿ 'ಯೋನಿಷು' ಎಂದರೆ "ಅವರವರ ಮನೆಗಳಲ್ಲಿ" ಎಂದರ್ಥವೆಂಬುದನ್ನು ಗಮನಿಸಬೇಕು.) ಅಶ್ವಿನೀ ದೇವತೆಗಳ ಶ್ಲಾಘನೆಯಿಂದ ಆರಂಭವಾದ ಸೂಕ್ತವು ಘೋಷಾಳ ಆತ್ಮನಿವೇದನೆಯಾಗಿ ಪರಿವರ್ತನೆ ಹೊಂದಿರುವುದು ಕಾವ್ಯಾಂಶದ ದೃಷ್ಟಿಯಿಂದ ಮನೋಜ್ಞವಾಗಿದೆ. ಅದೇ ತುಡಿತವನ್ನು ಮಿಕ್ಕ ಮೂರು ಮಂತ್ರಗಳಲ್ಲಿಯೂ ಅಭಿವ್ಯಕ್ತಿಸಲಾಗಿದೆ.

"ಅಶ್ವಿನೀ ದೇವತೆಗಳೆ, ನೀವು ನನ್ನ ಆಶಯವನ್ನು ಪೂರೈಸುತ್ತೀರಲ್ಲವೆ ? ನನ್ನ ಮಹದಾಸೆಯು ನಿಮ್ಮ ಹೃದಯದಲ್ಲಿ ಸ್ಥಿರಗೊಂಡಿದೆಯೆಂದು ಭಾವಿಸುತ್ತೇನೆ. ನನ್ನ ರಕ್ಷಕರು ನೀವಾಗಿ. ನನ್ನೊಡನೆ ನೀವು ಸಹ ನನ್ನ ಅರ್ಯಮನ್‌ನ ಮನೆಗೆ ದಯಮಾಡಿ ಬನ್ನಿ." (೧೨ : ಆ ವಾಂ ಅಗನ್ ಸುಮತಿಃ ವಾಜಿನೀವಸೂ ನಿ ಅಶ್ವಿನಾ ಹೃತ್ಸು ಕಾಮಾಃ ಅಯಂಸತ। ಅಭೂತಂ ಗೋಪಾ ಮಿಥುನಾ ಶುಭಃ ಪತೀ ಪ್ರಿಯಾಃ ಅರ್ಯಮ್ಣಃ ದುರ್ಯಾನ್ ಅಶೀಮಹಿ ॥). ಸಾಮಾನ್ಯವಾಗಿ 'ಅರ್ಯಮನ್' ಎಂಬುದು ಸೂರ್ಯನ ಇನ್ನೊಂದು ಹೆಸರು. ಇಲ್ಲಿ 'ನೆಚ್ಚಿನ ನೇಹಿಗ' ಅಥವಾ 'ಜೊತೆಗಾರ' ಎಂಬರ್ಥದಲ್ಲಿ ಬಂದಿದೆ. ಅದರ ಮೂಲಾರ್ಥವೇ ಇದು. ಸೂರ್ಯನು ನಮ್ಮ ನೆಚ್ಚಿನ ನೇಹಿಗನಾದ್ದರಿಂದ ಅವನಿಗೂ ಈ ಹೆಸರನ್ನು ಬಳಸಲಾಗಿದೆ. ಯಾವ ವ್ಯಕ್ತಿಗಾದರೂ ಅನ್ವಯಿಸಬಹುದಾದ ಸಾಮಾನ್ಯ ನಾಮಪದವಾಗಿರುವುದು ಪದದ ಮೂಲಾರ್ಥ, ಸೂರ್ಯನಿಗೆ ಅನ್ವಯಿಸಿದಾಗ ಅದು ಒಬ್ಬ ವ್ಯಕ್ತಿಯನ್ನು ನಿರ್ದೇಶಿಸುವ ನಿರ್ದಿಷ್ಟ ಪದ.

ಅವಳು ನಾಸತ್ಯರ ಸಹಾಯದಿಂದ ಈಗಾಗಲೆ ಗಂಡನನ್ನು ಸೇರಿಕೊಂಡಿರುವಂತೆ ಭ್ರಮಿಸುವ ಕವಯಿತ್ರಿಯು ಆ ಹೊಸ ಉಲ್ಲಾಸದ ಸಂದರ್ಭದ ಸೊಗಸನ್ನು ಮನಸ್ಸಿನಲ್ಲೇ ಮೆಲುಕುಹಾಕುತ್ತಿದ್ದಾಳೆ. ಗಂಡನ ಮನೆಯಲ್ಲಿರುತ್ತಾ ಧೀಮಂತ ಮಕ್ಕಳನ್ನು ಪಡೆಯುತ್ತಾಳೆ, ಸಂಪತ್ತನ್ನು ಅನುಭವಿಸುತ್ತಾಳೆ. ಆ ಸಂಪತ್ತನ್ನು ಯೋಗ್ಯರಿಗೆ ಕೊಡುತ್ತಾಳೆ ಕೂಡ. ಮಧುಪಾನಕ್ಕೂ ಕೊರತೆ ಇರುವುದಿಲ್ಲ. "ಅಶ್ವಿನಿಗಳೇ, ಇದಕ್ಕೆ ಅಡ್ಡಬರಬಹುದಾದ ಮರದ ಕೊರಡನ್ನು ಪಕ್ಕಕ್ಕೆ ಸರಿಸಿ ನನ್ನ ರಕ್ಷಕರಾಗಿ", ಎನ್ನುತ್ತಾಳೆ ಘೋಷಾ. "ನಮ್ಮ ಸಂಸಾರ ಆನಂದ ಸಾಗರ" ಎಂದು ಹಾಡುತ್ತಾ ಆಗಲೆ ನಲಿಯುತ್ತಿದ್ದಾಳೆ ಅವಳು. (೧೩ : ತಾ ಮಂದಸಾನಾ ಮನುಷಃ ದುರೋಣೇ ಆ ಧತ್ತಂ ರಯಿಂ ಸಹವೀರಂ ವಚಸ್ಯವೇ । ಕೃತಂ ತೀರ್ಥಂ ಸುಪ್ರಪಾನಂ ಶುಭಸ್ಪತೀ ಸ್ಥಾಣುಂ ಪಥೇಷ್ಠಾಂ ಅಪ ದುರ್ಮತಿಂ ಹತಂ ॥).

ಆಕಾಂಕ್ಷೆ ಈಡೇರಿತೆಂದು ನಲಿಯುವುದು ಕಲ್ಪನಾಲೋಕದಲ್ಲಿ. ನೈಟಿಂಗೇಲ್ ಉಲಿಯುವುದನ್ನು ಕೇಳಿ ಜಾನ್ ಕೀಟ್ಸ್ ಭಾವಪರವಶನಾದಂತೆ ಘೋಷಾ ಕಲ್ಪನಾಲೋಕಕ್ಕೆ ಹಾರಿಹೋಗಿದ್ದಾಳೆ. ನೈಟಿಂಗೇಲ್ ಹಾರಿಹೋದಂತೆ ಅದರ ಗಾನವೂ ಮಸುಕಾಗುತ್ತದೆ, ಕೊನೆಗೊಳ್ಳುತ್ತದೆ. ಆಗ ಮತ್ತೆ ತನ್ನ ದುರ್ಭರ ವಾಸ್ತವ ಲೋಕಕ್ಕೆ ಹಿಂದಿರುಗಲೇಬೇಕು. "ಇಷ್ಟು ವೇಳೆ ನಾನೇನನ್ನು ಕಾಣುತ್ತಿದ್ದೆ, ಅದೊಂದು ಕನಸೇ ?" ಎಂದು ವಿಚಲಿತನಾಗುತ್ತಾನೆ ಕವಿ. ನಮ್ಮ ಕವಯಿತ್ರಿ ಘೋಷಾದು ಅದೇ ಸ್ಥಿತಿ. ಅಶ್ವಿನೀ ದೇವತೆಗಳು ಅವಳ ಆಶಯಗಳನ್ನು ಪೂರೈಸುತ್ತಾರೆಂಬ ಭರವಸೆಯಿಂದ ಬೇರೊಂದು ಸುಖಾತಿಶಯದ ಲೋಕದಲ್ಲಿ ವಿಹರಿಸುತ್ತಿದ್ದ ಘೋಷಾ ಕಣ್ಣುಬಿಟ್ಟು ನೋಡಿದರೆ ಅಶ್ವಿನೀ ದೇವತೆಗಳು ಎಲ್ಲಿದ್ದಾರೆ ! ಯಾರೊಡನೆ ಸಲ್ಲಾಪ ನಡೆಸಲು ಹೊರಟುಹೋಗಿದ್ದಾರೆ ? ಯಾರು ಅವರನ್ನು ತಡೆದು ನಿಲ್ಲಿಸಿಕೊಂಡರು ? ಯಾವ ಜಾಗಕ್ಕೆ ಹೋಗಿಬಿಟ್ಟರು ? ಯಾವ ವಿಪ್ರ ಅಥವಾ ಯಾವ ಯಜ್ಞ ಮಾಡುವ ಯಜಮಾನನಲ್ಲಿಗೆ ಹೋಗಿಬಿಟ್ಟರೋ ಏನೋ ! ಅದು ಕಟು ವಾಸ್ತವ. ಅವಳಿಗೆ ಗಂಡನ ಮನೆ ಇಲ್ಲ, ದೇಹ ಸುಧಾರಿಸಿಲ್ಲ, ಅದೇ ಹಿಂದಿನ ಜೀವನವನ್ನು ಅಂತೆಯೇ ಸವೆಸಬೇಕು. "ಹಾ, ಧಿಕ್" ಎಂದು ತನಗೆ ತಾನೇ ಸಾಂತ್ವನ ಹೇಳಿಕೊಳ್ಳಬೇಕು. ಜಗತ್ತು ಚಲಿಸುತ್ತಿದೆ, ಆದರೆ ಅವಳು ಸ್ಥಾವರವಾಗಿದ್ದಾಳೆ, ಪಾಪ. (೧೪ : ಕ್ವ ಸ್ವಿತ್ ಅದ್ಯ ಕತಮಾಸು ಅಶ್ವಿನಾ ವಿಕ್ಷು ದಸ್ರಾ ಮಾದಯೇತೇ ಶುಭಸ್ಪತೀ । ಕಃ ಈಂ ನಿ ಯೇಮೇ ಕತಮಸ್ಯ ಜಗ್ಮತುಃ ವಿಪ್ರಸ್ಯ ವಾ ಯಜಮಾನಸ್ಯ ವಾ ಗೃಹಂ ॥).

ಮಾನಸಿಕ ತುಮುಲ, ಪರಿಕೀಯತೆಯ ಪ್ರಜ್ಞೆ, ಒಂದು ರೀತಿಯ ಹತಾಶೆ, ಜೀವನದಲ್ಲಿ ಕ್ರೌರ್ಯ, ಎಲ್ಲ ಭಾವಗಳೂ ಎಷ್ಟು ಅಚ್ಚುಕಟ್ಟಾಗಿ ವ್ಯಕ್ತವಾಗಿವೆ. ಘೋಷಾ ಋಗ್ವೇದದಲ್ಲಿ ಒಬ್ಬ ಉದ್ದಾಮ ಕವಯಿತ್ರಿ ಎನ್ನಲಡ್ಡಿಯಿಲ್ಲ. ಈ ಸೂಕ್ತವನ್ನು ಹೀಗೆ ಕವನವನ್ನಾಗಿ ಓದದಿದ್ದವರಿಗೆ ಇಡೀ ಸೂಕ್ತದಲ್ಲಿ ಏನೋ ಕಳಂಕವಿದೆ, ನ್ಯೂನತೆ ಇದೆ, ಅಸಂಬದ್ಧವಾದ ಪ್ರಲಾಪವಿದೆ ಎನಿಸಿ ಬಿಡುತ್ತದೆ. ಯಜ್ಞಸಂಬಂಧೀ ಅಂಶಗಳು ಇಲ್ಲವಾದುವಲ್ಲಾ ಎಂದು ಅವರಿಗೆ ಮುಜುಗರ. ಆದರೆ ಇದು ಯಜ್ಞದಲ್ಲಿ ಬಳಕೆಗೆ ಬಂದರೆ ಅದು ಕೇವಲ ಪ್ರಾಸಂಗಿಕ. ನಿಜಕ್ಕೂ ಅದು ಘೋಷಾಳ ನಾಟಕೀಯ ಸ್ವಗತದ ರೂಪದಲ್ಲಿ ಇರುವ ಕವನ. ಅದನ್ನು ತಿಳಿಯದ ಒಬ್ಬ ವಿದ್ವಾಂಸ, ಗ್ರಾಸ್‌ಮನ್, ಈ ಸೂಕ್ತದ ಕಡೆಯ ಐದು ಮಂತ್ರಗಳು (೧೦–೧೪) ಗೋಜಲು ಗೋಜಲಾಗಿವೆ, ಅವು ಮೂಲ ಸೂಕ್ತದ ಭಾಗವೇ ಅಲ್ಲ, ಎಂದು ಘೋಷಿಸಿ ಬಿಟ್ಟಿದ್ದಾನೆ. ಘೋಷಾ ಅದನ್ನು ಕೇಳಿ ಮುಸಿಮುಸಿ ನಗುತ್ತಿರಬೇಕು. ಋಗ್ವೇದದಲ್ಲಿ ಏರೋಪ್ಲೇನ್ ಇಲ್ಲ, ಆದರೆ ಸೊಗಸಾದ ಕವನಗಳಿವೆ. ಅದು ಸಾಲದೇ ?

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ
೩ನೇ ಹಂತ, ಬೆಂಗಳೂರು – ೫೬೦ ೦೮೫

ಸ್ವಾತಂತ್ರ್ಯಾನಂತರದ ಭಾರತ – ೧೪

# ಜಾಗತೀಕರಣದ ಹಾದಿಯಲ್ಲಿ ಭಾರತ

**ಸಿ. ಆರ್. ಕೃಷ್ಣರಾವ್**

ಪೂರ್ಣ ಬಹುಮತವಿಲ್ಲದೆ ಪಿ. ವಿ. ನರಸಿಂಹರಾವ್ ನೇತೃತ್ವದಲ್ಲಿ ಸ್ಥಾಪನೆಗೊಂಡ ಕಾಂಗ್ರೆಸ್ ಸರಕಾರ ವಾಮಮಾರ್ಗ ಅನುಸರಿಸಿ ಬಹುಮತ ಸಾಧಿಸಿಕೊಂಡು ಐದುವರ್ಷ ಆಡಳಿತ ನಡೆಸಿತು. ಈ ಸರಕಾರ ಅಧಿಕಾರಕ್ಕೆ ಬರುವ ಹೊತ್ತಿಗೆ ಭಾರತದಲ್ಲಿ ಬಂಡವಾಳಶಾಹಿ ವ್ಯವಸ್ಥೆ ಸುಭದ್ರವಾಗಿ ನೆಲೆಯೂರಿ ಕಾರ್ಪೊರೇಟ್ ವಲಯ ಸಾಕಷ್ಟು ಪ್ರಬಲಗೊಂಡಿತ್ತು. ಸರ್ಕಾರದ ನೀತಿಗಳ ಮೇಲೆ ಪ್ರಭಾವ ಬೀರುತ್ತಿತ್ತು. ಹೊಸ ಕೈಗಾರಿಕೆಗಳ ಸ್ಥಾಪನೆ, ಮುಖ್ಯವಾಗಿ ಮಾಹಿತಿ ತಂತ್ರಜ್ಞಾನ ಕ್ಷೇತ್ರದ ಬೆಳವಣಿಗೆ, ತಂತ್ರಜ್ಞಾನದ ವೃದ್ಧಿ ಇವುಗಳಿಂದಾಗಿ ಮಧ್ಯಮ ವರ್ಗ ಮತ್ತು ನವ ಶ್ರೀಮಂತವರ್ಗ ವರ್ಧಿಸಿತ್ತು. ನಗರೀಕರಣದ ವಿಸ್ತಾರ ದೇಶದ ಹಲವೆಡೆ ಎದ್ದು ಕಾಣತೊಡಗಿತ್ತು. ಈ ಎಲ್ಲ ಬೆಳವಣಿಗೆಗಳಿಂದ ದೇಶದಲ್ಲಿ ಮಾರುಕಟ್ಟೆಯು ವರ್ಧಿಸಿ ಬಳಕೆದಾರಿ ವಸ್ತುಗಳಿಗೆ ಬೇಡಿಕೆಯು ಹೆಚ್ಚುತ್ತಿತ್ತು. ಅದೇ ಸಮಯದಲ್ಲಿ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಜಾಗತಿಕ ಬಂಡವಾಳಶಾಹಿ ವ್ಯವಸ್ಥೆ ಏಕಕೇಂದ್ರ ಸ್ಥಾಪನೆಯತ್ತ ಅಡಿಯಿರಿಸಿತ್ತು. ವಿಶ್ವಸಂಸ್ಥೆಯ ಆಶ್ರಯದಲ್ಲಿ ಅಂತರರಾಷ್ಟ್ರೀಯ ವಾಣಿಜ್ಯ ವಹಿವಾಟುಗಳನ್ನು ನಿರ್ದೇಶಿಸುತ್ತಿದ್ದ 'ಗ್ಯಾಟ್' ಒಪ್ಪಂದಕ್ಕೆ ಪ್ರತಿಯಾಗಿ ವಿಶ್ವವಾಣಿಜ್ಯ ಸಂಸ್ಥೆ (ವರ್ಲ್ಡ್ ಟ್ರೇಡ್ ಆರ್ಗನೈಸೇಷನ್ – ಡಬ್ಲ್ಯುಟಿಒ) ಸ್ಥಾಪಿಸಲು ಪ್ರಯತ್ನ ನಡೆಯುತ್ತಿತ್ತು. ಮುಕ್ತ ಮಾರುಕಟ್ಟೆಯ ವಿಸ್ತರಣೆ, ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳಕ್ಕೆ ಅನಿರ್ಬಂಧ ಅವಕಾಶ ಮುಂತಾದ ಕ್ರಮಗಳಿಗೆ ಅದು ಮುನ್ಸೂಚನೆಯಾಗಿತ್ತು. ಸೋವಿಯೆತ್ ಒಕ್ಕೂಟದಲ್ಲಿ ಗೊರ್ಬಚೆವ್ ನಾಯಕತ್ವದಲ್ಲಿ ಪ್ರಾರಂಭವಾದ 'ಪೆರೆಸ್ಟ್ರೊಯ್ಕಾ' ನೀತಿಯ ಪರಿಣಾಮವಾಗಿ ಅಲ್ಲೋಲಕಲ್ಲೋಲ ಉಂಟಾಗಿತ್ತು. ಪೂರ್ವ ಯೂರೋಪಿನ ಸಮಾಜವಾದಿ ರಾಷ್ಟ್ರಗಳಲ್ಲಿ ಅಸ್ಥಿರತೆ ಹಾಗೂ ತಳಮಳ ತಲೆದೋರಿತ್ತು. ಇಡೀ ಸಮಾಜವಾದಿ ಜಗತ್ತು ಕುಸಿಯಲಾರಂಭವಾಗಿತ್ತು. ೧೯೯೨ರ ಹೊತ್ತಿಗೆ ಸೋವಿಯೆತ್ ಒಕ್ಕೂಟ ವಿಭಜನೆಗೊಂಡು ಬಂಡವಾಳಶಾಹಿ ಜಗತ್ತು ವಿಕ್ರಮ ಸಾಧಿಸಿತ್ತು. ಮಿಲಿಟರಿ ಪ್ರಾಬಲ್ಯ, ಶ್ರೀಮಂತಿಕೆಯ ಅಟ್ಟಹಾಸದಿಂದ ಮೆರೆಯುತ್ತಿದ್ದ ಅಮೆರಿಕದ ನೇತೃತ್ವದಲ್ಲಿ ಏಕಕೇಂದ್ರೀಯ ವ್ಯವಸ್ಥೆ ರೂಪುಗೊಂಡಿತ್ತು. ಪ್ರಪಂಚದ ಮೇಲೆ ತನ್ನ ಅಧಿನಾಯಕತ್ವ ಹೇರಲು ಅಮೆರಿಕ ತವಕಿಸುತ್ತಿತ್ತು.

ದೇಶದಲ್ಲಿ ಆರ್ಥಿಕ ಸುಧಾರಣೆಗಳನ್ನು ಕೈಗೆತ್ತಿಕೊಂಡ ಕಾಂಗ್ರೆಸ್ ಸರಕಾರ ಅನುಸರಿಸಿದ್ದು ಬಂಡವಾಳಶಾಹಿಪರ ಧೋರಣೆ. ಸ್ವಾತಂತ್ರ್ಯಾನಂತರ ಜವಹರಲಾಲ್ ನೆಹರೂ ಸರ್ಕಾರ ಅನುಸರಿಸಿದ ಸ್ವಾವಲಂಬನೆಯ ನೀತಿಯನ್ನು ಕೈಬಿಟ್ಟು ಪರಾವಲಂಬನೆಯ ಮೊರೆಹೋದದ್ದು ಮೊದಲ ಹೆಜ್ಜೆ. ಹಾಗೆಂದ ಮಾತ್ರಕ್ಕೆ ನೆಹರೂ ಆರ್ಥಿಕ ನೀತಿಯಲ್ಲಿ ವಿದೇಶೀ ಬಂಡವಾಳಕ್ಕೆ ಮೊರೆಹೋಗುವ ಪರಿಪಾಠ ಇರಲಿಲ್ಲ ಎಂದೇನಲ್ಲ. ದೇಶದ ಔದ್ಯೋಗೀಕರಣಕ್ಕೆ ಮೊದಲು ಮೊರೆಹೋದದ್ದೇ ಅಮೆರಿಕಾಗೆ. ಆದರೆ ಭಾರತದಲ್ಲಿ ವಿದೇಶೀ ಬಂಡವಾಳ ಹೂಡಿಕೆಗೆ ಹಲವು ನಿರ್ಬಂಧಗಳಿದ್ದವು. ಮುಖ್ಯವಾಗಿ ಉದ್ಯಮಗಳು ಭಾರತೀಯ ಒಡೆತನದಲ್ಲೇ ಇರುವಂತೆ ವಿದೇಶೀ ಬಂಡವಾಳ ಶೇ. ೪೯ರಷ್ಟು ಇರಬೇಕೆಂಬ ಮಿತಿ ಹೇರಲಾಗಿತ್ತು. ಈಗ ಅದೆಲ್ಲ ಸಂಪೂರ್ಣವಾಗಿ ಹೋಗಿದೆ. ಯಾವ ನಿರ್ಬಂಧವೂ ಇಲ್ಲದೆ ವಿದೇಶೀ ಬಂಡವಾಳವನ್ನು ಓಲೈಸಲು ಹೊರಟಿದೆ ಭಾರತ. 'ಭಾರತದಲ್ಲಿ ತಯಾರಾದುದು' ಎನ್ನುವುದಕ್ಕೆ ಪ್ರತಿಯಾಗಿ ಈಗ ಘೋಷಣೆ 'ಭಾರತದಲ್ಲಿ ತಯಾರಿಸಿ' ಆಗಿದೆ. ಅರ್ಥಾತ್ ನಮ್ಮ ಕೆಲಸಗಾರರನ್ನು ಶೋಷಣೆ ಮಾಡಿ



ಬಾಬ್ರಿ ಮಸೀದಿ ಧ್ವಂಸದಲ್ಲಿ ತೊಡಗಿರುವ ಕರಸೇವಕರು

ಲಾಭ ಗಳಿಸಿ ಎಂದು ಆಹ್ವಾನ ನೀಡಿದೆ ಮೋದಿ ಸರಕಾರ. ಇದು ಕಳೆದ ಎರಡೂವರೆ ದಶಕಗಳಲ್ಲಿ ಆಗಿರುವ ಬದಲಾವಣೆ. ನರಸಿಂಹರಾವ್ ಸರಕಾರದಲ್ಲಿ ವಿತ್ತಮಂತ್ರಿ ಆಗಿದ್ದವರು ಮನಮೋಹನಸಿಂಗ್. ರೂಪಾಯಿ ವಿನಿಮಯ ದರವನ್ನು ಮಾರುಕಟ್ಟೆ ದರಕ್ಕೆ ಲಗತ್ತಿಸಿ ಕೈಗೊಂಡ ಕ್ರಮದಿಂದಾಗಿ ರೂಪಾಯಿ ಶೇಕಡ ೨೦ರಷ್ಟು ಮೌಲ್ಯ ಕಳೆದುಕೊಂಡಿತು. ವಿದೇಶೀ ವಸ್ತುಗಳ ಆಮದು ನೀತಿಯನ್ನು ಪರಿಷ್ಕರಿಸಿ ಹಿಂದೆ ವಿಧಿಸಿದ್ದ ಎಲ್ಲ ನಿರ್ಬಂಧಗಳನ್ನು ಕಿತ್ತುಹಾಕಿ ಮುಕ್ತ ಮಾರುಕಟ್ಟೆಗೆ ಅವಕಾಶ ನೀಡಲಾಯಿತು. ಕೈಗಾರಿಕೆಗಳ ಸ್ಥಾಪನೆಗೆ ಇದ್ದ ಅಡಚಣೆಗಳನ್ನು ನಿವಾರಿಸಲಾಯಿತು. ಸಣ್ಣ ಕೈಗಾರಿಕೆಗಳಿಗೆ ಉತ್ತೇಜನ ನೀಡಲು ವಿಧಿಸಲಾಗಿದ್ದ ಎಲ್ಲ ಕಾನೂನುಗಳನ್ನು ರದ್ದುಗೊಳಿಸಲಾಯಿತು. ಮುಖ್ಯವಾಗಿ ದೊಡ್ಡ ಉದ್ಯಮ ಸಂಸ್ಥೆಗಳಿಗೆ ಅನುಕೂಲವಾಗುವಂತೆ ಹಿಂದೆ ಇದ್ದ ಎಲ್ಲ ಕಟ್ಟುಪಾಡುಗಳನ್ನು ಪೂರ್ಣವಾಗಿ ಸಡಿಲಗೊಳಿಸ ಲಾಯಿತು. ಸಾರ್ವಜನಿಕ ಉದ್ಯಮಗಳನ್ನು ಖಾಸಗೀ ಕರಿಸುವ ಯೋಜನೆಯನ್ನು ರೂಪಿಸಲಾಯಿತು. ನಷ್ಟದಲ್ಲಿದ್ದ ಸಾರ್ವಜನಿಕ ಉದ್ಯಮಗಳನ್ನು ಖಾಸಗಿ ಬಂಡವಳಿಗರಿಗೆ ವಹಿಸಿಕೊಡಲು ನಿರ್ಧರಿಸಲಾಯಿತು. ಹಾಗೆಯೇ ವಿತ್ತೀಯ ಸಂಸ್ಥೆಗಳಿಂದ ಬಂಡವಾಳ ಹೂಡಿಕೆಗೆ ಅಗತ್ಯವಾದ ಹಣ ಒದಗಿಸಲು ಕ್ರಮ ಗಳನ್ನು ರೂಪಿಸಲಾಯಿತು. ವಿದೇಶೀ ಬಂಡವಾಳದ ಆಕರ್ಷಣೆಗಾಗಿ ಅಗತ್ಯವಾದ ವ್ಯವಸ್ಥೆ ಮಾಡಲಾಯಿತು. ಒಟ್ಟಿನಲ್ಲಿ ವಿದೇಶೀ ಸರಕುಗಳಿಗೆ ಭಾರತದ ಮಾರುಕಟ್ಟೆ ತೆರೆದುಕೊಂಡಿತು. ಇವೆಲ್ಲ ಕ್ರಮಗಳೂ ಜಾಗತೀಕರಣ, ಉದಾರೀಕರಣ, ಮುಕ್ತ ಮಾರುಕಟ್ಟೆಯ ಭಾಗವಾಗಿದ್ದವು.

ಪರಿಣಾಮ ನಿರೀಕ್ಷಿತವಾದದ್ದೆ. ಭಾರತದ ಮಾರುಕಟ್ಟೆಯಲ್ಲಿ ವಿದೇಶೀ ಸರಕುಗಳು ವಿಜೃಂಭಿ ಸಿದುವು. ವಾಷಿಂಗ್ಟನ್ ಸೇಬು, ಟ್ರಾಪಿಕಾನ ಕಿತ್ತಳೆ ರಸದಿಂದ ಹಿಡಿದು, ಬೆಳಗಿನ ಉಪಾಹಾರಕ್ಕೆ ಕೆಲ್ಲೋಗ್ ಕಂಪೆನಿಯ ಉತ್ಪನ್ನಗಳು, ಸೋನಿ, ಎಲ್‌ಜಿ ಕಂಪೆನಿಗಳ ಟೆಲಿವಿಷನ್, ಫ್ರಿಡ್ಜ್, ಮತ್ತಿತರ ಇಲೆಕ್ಟ್ರಾನಿಕ್ ಉಪಕರಣಗಳು, ಕಾರುಗಳು ಹಾಗೂ ಇತರ ಸರಕುಗಳು ತುಂಬಿ ತುಳುಕಾಡತೊಡಗಿದವು. ಇದರಿಂದಾಗಿ ಭಾರತದಲ್ಲೇ ತಯಾರಾಗುತ್ತಿದ್ದ ಸರಕುಗಳ ಮಾರುಕಟ್ಟೆಗೆ ಭಾರೀ ಹೊಡೆತ ಬಿತ್ತು. ಒಂದೆರಡು ವರ್ಷಗಳಲ್ಲಿಯೇ ಸಾವಿರಾರು ಸಣ್ಣ ಕೈಗಾರಿಕಾ ಸಂಸ್ಥೆಗಳು ದಿವಾಳಿಯಾಗಿ ಮುಚ್ಚಿಹೋದವು. ಭಾರತದಲ್ಲೇ ತಯಾರಾಗುತ್ತಿದ್ದ ಟೆಲಿವಿಷನ್ ಸಂಸ್ಥೆಗಳು ಹೆಸರಿಲ್ಲದೆ ಮರೆಯಾದದ್ದು ಅದಕ್ಕೊಂದು ಉದಾಹರಣೆ. ಹೊಸ ಯಂತ್ರೋಪಕರಣಗಳ ಆಮದಿನಿಂದಾಗಿ, ಹೊಸ ತಂತ್ರಜ್ಞಾನದ ಅಳವಡಿಕೆಯಿಂದಾಗಿ ಸಹಸ್ರಾರು ಮಂದಿ ಉದ್ಯೋಗ ಕಳೆದುಕೊಂಡರು. ಸಣ್ಣ ಕೈಗಾರಿಕೆಗಳ ಮುಚ್ಚುವಿಕೆಯಿಂದಾಗಿ ನಿರುದ್ಯೋಗದ ಸಮಸ್ಯೆ ಬೃಹದಾಕಾರವಾಗಿ ಬೆಳೆಯಿತು. ಬಡಜನರ ಪಾಡು ತೀರ ದುಸ್ಥಿತಿಗೆ ಇಳಿಯಿತು. ಬಡತನ ಸಿರಿತನದ ನಡುವೆ ಅಂತರ ಹೆಚ್ಚು ವಿಸ್ತಾರಗೊಂಡಿತು. ಆರ್ಥಿಕ ಹೊಂದಾಣಿಕೆಯ ಕಾಲ ಎಂದು ಅರ್ಥಶಾಸ್ತ್ರಜ್ಞರು ಬಣ್ಣಿಸಿದ ಕಾಲದಲ್ಲಿ ತಲೆದೋರಿದ



ಪಿ. ವಿ. ನರಸಿಂಹರಾವ್

ಆರ್ಥಿಕ ಹಿಂಜರಿತ ಸಾಕಷ್ಟು ಅವಾಂತರಗಳನ್ನು ಸೃಷ್ಟಿಸಿತು. ಕೃಷಿಪ್ರಧಾನ ದೇಶವಾದ ಭಾರತದಲ್ಲಿ ರೈತರ ಸ್ಥಿತಿ ಚಿಂತಾಜನಕವಾಗಿ ರೈತರ ಆತ್ಮಹತ್ಯೆ ಪ್ರಕರಣಗಳು ಪ್ರಾರಂಭವಾದ್ದು ಕೂಡ ಆಗಲೇ. ಇಪ್ಪತ್ತನೇ ಶತಮಾನದ ಕೊನೆಯ ದಶಕದಲ್ಲಿ ಪ್ರಾರಂಭವಾದ ಜಾಗತೀಕರಣ ಪ್ರಕ್ರಿಯೆ ಇಪ್ಪತ್ತೊಂದನೇ ಶತಮಾನದಲ್ಲೂ ಮುಂದುವರಿದು ಜೀವನದ ಎಲ್ಲ ಕ್ಷೇತ್ರಗಳನ್ನು ಆವರಿಸಿಕೊಂಡಿದೆ.

ಕಾಂಗ್ರೆಸ್ಸಿನ ಪ್ರಾಬಲ್ಯ ಉತ್ತರ ಭಾರತದಲ್ಲಿ ತೀವ್ರವಾಗಿ ಕುಸಿದಿತ್ತು. ಭಾಜಪದ ವರ್ಚಸ್ಸು ಈ ಭಾಗದಲ್ಲಿ ಅಧಿಕಗೊಂಡಿತ್ತು. ಉತ್ತರ ಪ್ರದೇಶ, ಮಧ್ಯಪ್ರದೇಶ, ರಾಜಾಸ್ತಾನ್ ಮೊದಲಾದ ರಾಜ್ಯಗಳಲ್ಲಿ ಭಾಜಪ ಸರಕಾರಗಳು ಅಸ್ತಿತ್ವಕ್ಕೆ ಬಂದಿದ್ದುವು. ದಕ್ಷಿಣ ಭಾರತದಲ್ಲಿ ಕಾಂಗ್ರೆಸ್ ಇದ್ದುದರಲ್ಲಿ ಭದ್ರವಾಗಿ ನೆಲೆಗೊಂಡಿತ್ತು. ಆಂಧ್ರಪ್ರದೇಶ, ಕರ್ನಾಟಕ, ಕೇರಳ ರಾಜ್ಯಗಳಲ್ಲಿ ಕಾಂಗ್ರೆಸ್ ಆಡಳಿತ ಪಕ್ಷವಾಗಿತ್ತು. ತಮಿಳುನಾಡು ೧೯೬೭ರಿಂದ ಸರದಿಯ ಮೇಲೆ



ರೈತರು

ನಮ್ಮೂರ ರೈತರು
ಬಿತ್ತಿದ ಬಳಿಕ
ನೋಡುವರು ಬಾನನ್ನು
ಅಥವಾ
ಹುಡುಕುವರು ನೇಣನ್ನು

ಡಾ॥ ವಿ. ಪುಗಳೇಂದಿ
ಬಳ್ಳಾರಿ

ದ್ರಾವಿಡ ಪಕ್ಷಗಳ ಆಡಳಿತಕ್ಕೊಳಪಟ್ಟಿತ್ತು. ಪಶ್ಚಿಮ ಬಂಗಾಳದಲ್ಲಿ ಎಡಪಕ್ಷ ಸರಕಾರಗಳು ಅಧಿಕಾರಕ್ಕೆ ಬಂದು ನೆಲೆಗೊಂಡಿತ್ತು ೧೯೭೭ರಿಂದ. ಹಾಗಾಗಿ ಕಾಂಗ್ರೆಸ್ ಕೇಂದ್ರದಲ್ಲಿ ಬಹುಮತ ಪಡೆದು ಸರಕಾರ ನಡೆಸುವ ಸಂಭಾವ್ಯ ತೀವ್ರವಾಗಿ ಕುಸಿಯುತ್ತಿತ್ತು. ಒಂದೇ ಪಕ್ಷದ ಆಡಳಿತಕ್ಕೆ ಕೊನೆಯಾಯಿತು ನರಸಿಂಹರಾವ್ ಸರಕಾರ. ಮುಂದೆ ಪ್ರಾರಂಭವಾದ್ದು ಸಮ್ಮಿಶ್ರ ಸರಕಾರದ ಯುಗ ಕೇಂದ್ರದಲ್ಲಿ. ಉತ್ತರ ಭಾರತದಲ್ಲಿ ಸಾಕಷ್ಟು ಪ್ರಾಬಲ್ಯ ಪಡೆದುಕೊಂಡಿದ್ದ ಭಾಜಪ ಕೇಂದ್ರದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿಯುವ ಕನಸು ಕಾಣುತ್ತಿತ್ತು. ಆಡ್ವಾನಿ ರಥಯಾತ್ರೆ ಕೂಡ ಅದೇ ಉದ್ದೇಶದಿಂದಲೇ ಕೂಡಿದ್ದುದು. ರಥಯಾತ್ರೆ ಯಶಸ್ಸಿನಿಂದ ಸಂಘಪರಿವಾರದ ಸಂಸ್ಥೆಗಳು ಅಯೋಧ್ಯೆಯ ಬಾಬ್ರಿ ಧ್ವಂಸಕ್ಕೆ ಸಂಚು ರೂಪಿಸಿದುವು. ಅಲ್ಲಿ ರಾಮಮಂದಿರದ ಸ್ಥಾಪನೆಗೆ ಪಣತೊಟ್ಟಿದ್ದ ಭಾಜಪ, ವಿಶ್ವ ಹಿಂದೂ ಪರಿಷತ್, ಭಜರಂಗದಳ ಮುಂತಾದುವು ಕರಸೇವಕರ ಹೆಸರಿನಲ್ಲಿ ಸಹಸ್ರಾರು ಸ್ವಯಂಸೇವಕರನ್ನೂ ಜಮಾಯಿಸ ತೊಡಗಿದುವು. ರಾಮಮಂದಿರ ನಿರ್ಮಾಣಕ್ಕೆ ಅಗತ್ಯವಾದ ಸಿದ್ಧತೆಗಳು ರಥಯಾತ್ರೆ ಸಮಯದಲ್ಲೇ ಪ್ರಾರಂಭವಾಗಿದ್ದುವು. ಲಕ್ಷಗಟ್ಟಳೆ ಕರಸೇವಕರನ್ನು ಅಯೋಧ್ಯೆಗೆ ರವಾನಿಸಲು ವ್ಯವಸ್ಥೆ ಪೂರ್ಣಗೊಳಿಸ ಲಾಗಿತ್ತು. ೧೯೯೨ರ ಡಿಸೆಂಬರ್ ೬ರಂದು ಬಾಬ್ರಿ ಮಸೀದಿಯ ಧ್ವಂಸದ ಕಾರ್ಯಾಚರಣೆ ನಡೆದು ಹೋಯಿತು. ನಂತರ ದೇಶಾದ್ಯಂತ ನಾನಾಕಡೆಗಳಲ್ಲಿ ಭುಗಿಲೆದ್ದ ಕೋಮುಗಲಭೆಯ ದಳ್ಳುರಿಯಿಂದಾಗಿ ಸಹಸ್ರಾರು ಮಂದಿ ಅಮಾಯಕ ಜನ ಸಾವಿಗೀಡಾದರು. ನಾಲ್ಕುನೂರು ವರ್ಷಗಳ ಹಿಂದಿನ ಈ ಐತಿಹಾಸಿಕ ಮಸೀದಿ ಧ್ವಂಸದಿಂದ ಭಾರತ ವಿಶ್ವ ಸಮುದಾಯದ ಮುಂದೆ ತಲೆತಗ್ಗಿಸುವಂತಾಯಿತು. ಪ್ರಧಾನಿ ನರಸಿಂಹರಾವ್ ಈ ಅನಾಹುತ ನಡೆಯದ ಹಾಗೆ ಕ್ರಮ ಕೈಗೊಳ್ಳಬಹುದಾಗಿತ್ತು. ಉತ್ತರಪ್ರದೇಶ ದಲ್ಲಿ ಆಡಳಿತ ನಡೆಸುತ್ತಿದ್ದ ಭಾಜಪದ ಕಲ್ಯಾಣಸಿಂಗ್ ಸರಕಾರ ಈ ದುಷ್ಕೃತ್ಯ ತಡೆಯಲು ಮುಂದಾಗುವುದಿಲ್ಲ ಎನ್ನುವುದು ಪ್ರಧಾನಿಗೆ ತಿಳಿದಿತ್ತು. ಕರಸೇವಕರು ಹಾರೆ, ಗುದ್ದಲಿ, ಪಿಕಾಸಿ ಮೊದಲಾದವನ್ನು ಒಯ್ದು ಮಸೀದಿ ಧ್ವಂಸಕ್ಕೆ ಸಿದ್ಧರಾಗಿ ಬಂದಿದ್ದರು. ಕ್ರಮ ಕೈಗೊಂಡರೆ ಹಿಂದೂ ಮತದಾರರು ಕಾಂಗ್ರೆಸ್ಸಿನಿಂದ ದೂರ ಸರಿಯುವರೆಂಬ ಭೀತಿ ಇತ್ತೇನೋ. ಅಂತೂ ಈ ಘಟನೆಯು ನರಸಿಂಹರಾವ್ ಸರಕಾರದ ನಿಷ್ಕ್ರಿಯತೆಯಿಂದ ನಡೆದುಹೋಯಿತು. ಮಸೀದಿ ಧ್ವಂಸ ಪ್ರಕರಣದಲ್ಲಿ ಭಾಜಪದ ಪ್ರಮುಖ ನಾಯಕರುಗಳ ಮೇಲೆ ಹೂಡಿರುವ ಕ್ರಿಮಿನಲ್ ಮೊಕದ್ದಮೆ ಎರಡು ದಶಕಗಳ ಮೇಲಾದರೂ ಇನ್ನೂ ಇತ್ಯರ್ಥವಾಗಿಲ್ಲ. ಹಾಗೆಯೇ ಬಾಬ್ರಿ ಮಸೀದಿಯ ವಿವಾದಕ್ಕೆ ಸಂಬಂಧಿಸಿದ ಸಿವಿಲ್ ಮೊಕದ್ದಮೆ ಕೂಡ ಇತ್ಯರ್ಥವಾಗದೆ ಇದೆ ದಶಕಗಳಿಂದ. ಸಂಘಪರಿವಾರ ಮಾತ್ರ ವಿವಾದಿತ ಬಾಬ್ರಿ ಮಸೀದಿ ಸ್ಥಳದಲ್ಲಿ ರಾಮಮಂದಿರ ನಿರ್ಮಿಸುವ ಪಣತೊಟ್ಟಿದೆ.

ಭಾರತದ ಜಾತ್ಯತೀತ ವ್ಯವಸ್ಥೆಗೆ ಕಳಂಕ ತಂದ ಪ್ರಕರಣ ಒಂದು ಕಡೆಯಾದರೆ, ಭ್ರಷ್ಟಾಚಾರದ ಆರೋಪಗಳು ಇನ್ನೊಂದು ಕಡೆ. ಸರಕಾರ ಬಹುಮತ ಸಾಬೀತುಗೊಳಿಸಲು ಜಾರ್ಖಂಡ್ ಮುಕ್ತಿಮೋರ್ಚಾದ ಸಂಸತ್ ಸದಸ್ಯರಿಗೆ ಲಂಚ ನೀಡಿತ್ತೆಂಬ ಆರೋಪ ನ್ಯಾಯಾಲಯದ ಮೆಟ್ಟಿಲೇರಿತ್ತು. ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲದೆ ಮೊಕದ್ದಮೆ ರದ್ದಾಯಿತು. ಹೇಗೋ ಮಾಡಿ ನರಸಿಂಹರಾವ್ ಸರಕಾರ ಐದು ವರ್ಷ ಆಡಳಿತಾವಧಿ ಪೂರೈಸಿತು. ಇದರೊಂದಿಗೆ ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಕೇಂದ್ರದಲ್ಲಿ ಒಂದೇ ಪಕ್ಷದ ಆಳ್ವಿಕೆ ಅಂತ್ಯಗೊಂಡು ಸಮ್ಮಿಶ್ರ ಸರಕಾರದ ಯುಗ ಪ್ರಾರಂಭವಾಯಿತು. ನರಸಿಂಹರಾವ್ ಆಡಳಿತ ವಹಿಸಿಕೊಂಡ ಮೇಲೆ ರಾಜಕೀಯ ಪ್ರವೇಶ ಮಾಡಿದ ರಾಜೀವ ಗಾಂಧಿಯ ಪತ್ನಿ ಸೋನಿಯಾ ಗಾಂಧಿ ಕಾಂಗ್ರೆಸ್ ಅಧ್ಯಕ್ಷರಾದರು. ಇಟಲಿ ಮೂಲದ ಸೋನಿಯಾ ಕಾಂಗ್ರೆಸ್ಸಿನ ನೇತೃತ್ವ ವಹಿಸಿದ್ದು ವಿವಾದಕ್ಕೀಡಾಗಿ ಹಲವರು ಕಾಂಗ್ರೆಸ್ ಪಕ್ಷ ತ್ಯಜಿಸಿದರು. ಆಗ ಹುಟ್ಟಿಕೊಂಡಿದ್ದೇ ಮಮತಾ ಬ್ಯಾನರ್ಜಿ ನೇತೃತ್ವದ ತೃಣಮೂಲ ಕಾಂಗ್ರೆಸ್ ಮತ್ತು ಶರದ್ ಪವಾರ್ ನಾಯಕತ್ವದ ನ್ಯಾಷನಲ್ ಕಾಂಗ್ರೆಸ್ ಪಾರ್ಟಿ.

೧೯೯೬ರಲ್ಲಿ ಜರುಗಿದ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಲೋಕಸಭೆಯಲ್ಲಿ ಲಭಿಸಿದ್ದು ೧೪೦ ಸ್ಥಾನಗಳು ಮಾತ್ರ. ಭಾಜಪ ೧೬೧ ಸ್ಥಾನಗಳನ್ನು ಪಡೆಯಿತು. ೧೯೯೧ರಲ್ಲಿ ಅದು ೧೨೦ ಸ್ಥಾನಗಳನ್ನು ಗಳಿಸಿತ್ತು. ಜನತಾದಳ, ಸಮಾಜವಾದಿ ಪಾರ್ಟಿ ಮತ್ತು ತೆಲುಗುದೇಶಂ ಕಲೆತು ರಚಿಸಿಕೊಂಡಿದ್ದ ರಾಷ್ಟ್ರೀಯ ರಂಗ ೭೯ ಸ್ಥಾನಗಳನ್ನು, ಡಿಎಂಕೆ ೧೭ ಸ್ಥಾನಗಳನ್ನು, ಎಡಪಕ್ಷಗಳು ೫೨ ಸ್ಥಾನಗಳನ್ನು, ಇತರರು ಉಳಿದ ಸ್ಥಾನಗಳನ್ನು ಪಡೆದಿದ್ದರು. ಹೆಚ್ಚು ಸ್ಥಾನಗಳನ್ನು ಪಡೆದುಕೊಂಡಿದ್ದ ಭಾಜಪ ಸರಕಾರ ತನ್ನ ಮಿತ್ರಪಕ್ಷಗಳ ಜೊತೆ ಸೇರಿ ೧೯೯೬ ಮೇ ೧೬ರಂದು ಅಧಿಕಾರ ವಹಿಸಿಕೊಂಡಿತು. ಅಟಲ್ ಬಿಹಾರಿ ವಾಜಪೇಯಿ ಪ್ರಧಾನಿಯಾದರು. ಬಹುಮತವಿಲ್ಲದ ಈ ಸರಕಾರ ಅಸ್ತಿತ್ವದಲ್ಲಿದ್ದುದು ಎರಡು ವಾರಗಳು



ಅಟಲ್ ಬಿಹಾರಿ ವಾಜಪೇಯಿ



ಎಚ್. ಡಿ. ದೇವೇಗೌಡ

ಮಾತ್ರ. ಲೋಕಸಭೆಯ ಮುಂದೆ ಬಾರದೆಯೇ ಈ ಸರಕಾರ ಅಸ್ತಂಗತಗೊಂಡಿತು. ಮತ್ತೆ ಸರಕಾರ ರಚನೆಯ ಕಸರತ್ತು ಪ್ರಾರಂಭವಾಯಿತು. ಈ ಬಾರಿ ಕಾಂಗ್ರೆಸ್ ರಾಷ್ಟ್ರೀಯರಂಗಕ್ಕೆ ಬೆಂಬಲ ನೀಡಲು ಮುಂದಾಯಿತು. ಜೊತೆಗೆ ಎಡಪಕ್ಷಗಳೂ ಬೆಂಬಲ ನೀಡುವುದಾಗಿ ಘೋಷಿಸಿದುವು. ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ ಸರಕಾರದಲ್ಲಿ ಪಾಲ್ಗೊಳ್ಳಲಾಗಲಿ, ರಚಿಸಲಾಗಲಿ ಮುಂದಾಗಲಿಲ್ಲ. ಈ ಸಂದರ್ಭದಲ್ಲಿ ನಡೆದ ವಿವಿಧ ಪಕ್ಷಗಳ ನಡುವಣ ಮಾತುಕತೆಗಳಲ್ಲಿ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಸಿಪಿಎಂನ ಹಿರಿಯ ನಾಯಕರಾದ ಜ್ಯೋತಿ ಬಸುರವರನ್ನು ಪ್ರಧಾನಿಯಾಗಿಸುವ ಸೂಚನೆ ಬಂದಿತು. ಇದಕ್ಕೆ ಕಾಂಗ್ರೆಸ್ಸು ಸೇರಿದಂತೆ ಹಲವು ಪಕ್ಷಗಳ ಬೆಂಬಲ ಇತ್ತು. ಅವರು ಪ್ರಧಾನಿಯಾಗಿ ಅಧಿಕಾರವಹಿಸಿ ಕೊಂಡಿದ್ದಲ್ಲಿ ದೇಶದಲ್ಲಿ ಬೇರೆಯೇ ಆದ ರಾಜಕೀಯ ಬೆಳವಣಿಗೆ ಆಗುತ್ತಿತ್ತೇನೋ. ಆದರೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ತೀರ್ಮಾನ ಬೇರೆಯದೇ ಆಗಿತ್ತು. ಆದರೆ ಮುಂದೆ ಅದು ಎಸಗಿದ ಭಾರಿ ತಪ್ಪು ಅರಿವಾಯಿತು. ಈ ಗೊಂದಲಗಳ ಪ್ರಯೋಜನ ಪಡೆದುಕೊಂಡದ್ದು ಭಾಜಪ ಮಾತ್ರ. ಅದು ಹೇಗೋ ಮಾಡಿ ಸರಕಾರ ರಚಿಸಲು ಹೊಂದಾಣಿಕೆಗಾಗಿ ಪ್ರಯತ್ನ ನಡೆಸುತ್ತಿತ್ತು. ಈ ಮಧ್ಯೆ ರಾಷ್ಟ್ರೀಯ ರಂಗದ ಹಿರಿಯ ಮುಖಂಡ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಹೆಚ್. ಡಿ. ದೇವೇಗೌಡ ಅವರನ್ನು ಪ್ರಧಾನಿಪಟ್ಟಕ್ಕೆ ತರಲು ತೀರ್ಮಾನವಾಯಿತು. ಅವರ ನೇತೃತ್ವದಲ್ಲಿ ಸ್ಥಾಪನೆಯಾದ ಸರಕಾರ ಅಧಿಕಾರ ದಲ್ಲಿದ್ದದ್ದು ಒಂಬತ್ತು ತಿಂಗಳು ಮಾತ್ರ. ೧೯೯೭ರ ಮಾರ್ಚ್ ೩೦ರಂದು ಕಾಂಗ್ರೆಸ್ ಬೆಂಬಲವನ್ನು ಹಿಂತೆಗೆದುಕೊಂಡದ್ದರಿಂದ ಸರಕಾರ ಪತನ ಗೊಂಡಿತು. ಈ ಸರಕಾರದ ವಿಶಿಷ್ಟತೆ ಎಂದರೆ ಕರ್ನಾಟಕದವರೊಬ್ಬರು ಮಾಜಿ ಪ್ರಧಾನಿಯಾದದ್ದು ಮತ್ತು ಮೊದಲ ಬಾರಿಗೆ ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕರಲ್ಲೊಬ್ಬರಾದ ಇಂದರ್‌ಜಿತ್ ಗುಪ್ತ ಅವರು ಗೃಹಸಚಿವರಾಗಿದ್ದದ್ದು. ಕಾಂಗ್ರೆಸ್ ಸರಕಾರ ರಚನೆ ಮಾಡಲು ಮುಂದಾಗದೆ ಐ. ಕೆ. ಗುಜರಾಲ್ ನಾಯಕತ್ವದಲ್ಲಿ ಸ್ಥಾಪನೆಗೊಂಡ ಸಂಯುಕ್ತ ರಂಗ ಸರಕಾರಕ್ಕೆ ಬೆಂಬಲ ನೀಡಿತು. ಈ ಸರಕಾರ ಅಸ್ತಿತ್ವದಲ್ಲಿದ್ದುದು ಕೇವಲ ಒಂದು ವರ್ಷ ಮಾತ್ರ ೨೧-೪-೧೯೯೭ರಿಂದ ೧೯-೩-೧೯೯೮ರವರೆಗೆ. ಈ ಅಸ್ಥಿರತೆಯನ್ನು ಕೊನೆಗಾಣಿಸಲು ೧೯೯೮ರ ಫೆಬ್ರವರಿ ತಿಂಗಳಲ್ಲಿ ಮತ್ತೆ ಲೋಕಸಭೆಗೆ ಚುನಾವಣೆಗಳನ್ನು ನಡೆಸಲಾಯಿತು.

ಈ ಚುನಾವಣೆಗಳಲ್ಲೂ ಕಾಂಗ್ರೆಸ್ಸಿಗೆ ದೊರೆತದ್ದು ೧೪೧ ಸ್ಥಾನಗಳು. ಭಾಜಪ ೧೮೨ ಸ್ಥಾನಗಳನ್ನು ಪಡೆದು ಅದರ ಮಿತ್ರ ಪಕ್ಷಗಳು ಹಾಗೂ ತೆಲುಗುದೇಶಂ ಪಾರ್ಟಿ, ಎಐಎಡಿಎಂಕೆ ಮತ್ತು ತೃಣಮೂಲ ಕಾಂಗ್ರೆಸ್ ಬೆಂಬಲದಿಂದ ಸರಕಾರ ರಚಿಸಿತು. ಅಟಲ್ ಬಿಹಾರಿ ವಾಜಪೇಯಿ ಮತ್ತೊಮ್ಮೆ ಪ್ರಧಾನಿಯಾದರು. ಈ ಬಾರಿಯೂ ಅವರದ್ದು ಅಲ್ಪಾವಧಿ ಸರಕಾರ. ಹದಿನೆಂಟು ತಿಂಗಳು (೧೯-೩-೧೯೯೮ರಿಂದ ೧೭-೪-೧೯೯೯ರವರೆಗೆ) ಅಧಿಕಾರ ನಡೆಸಿತು. ಜಯಲಲಿತ ನೇತೃತ್ವದ ಅಣ್ಣಾ ದ್ರಾವಿಡ ಮುನ್ನೇತ್ರ ಕಳಗಂ ಸರಕಾರಕ್ಕೆ ನೀಡಿದ್ದ ಬೆಂಬಲ ಹಿಂತೆಗೆದುಕೊಂಡದ್ದರಿಂದ



ಐ. ಕೆ. ಗುಜರಾಲ್

ಲೋಕಸಭೆಯಲ್ಲಿ ಬಹುಮತ ಕಳೆದುಕೊಂಡ ಸರಕಾರ ಪತನಗೊಂಡಿತು. ಸರಕಾರ ರಚಿಸಲು ಕಾಂಗ್ರೆಸ್ ನಡೆಸಿದ ಪ್ರಯತ್ನ ಸಫಲಗೊಳ್ಳದೇ ಹೋದ್ದರಿಂದ ೧೯೯೯ರ ಅಕ್ಟೋಬರ್‌ನಲ್ಲಿ ಮತ್ತೆ ಚುನಾವಣೆಗಳು ನಡೆದುವು. ಮೂರು ವರ್ಷಗಳಲ್ಲಿ ನಾಲ್ವರು ಪ್ರಧಾನಿಗಳನ್ನು ಕಂಡ ದೇಶ ಮುಂದೆ ಸ್ಥಿರತೆಯನ್ನು ಕಂಡಿತು. ಇಪ್ಪತ್ತೊಂದನೇ ಶತಮಾನ ಭಾರತದಲ್ಲಿ ಸಮ್ಮಿಶ್ರ ಸರಕಾರಗಳ ಆಡಳಿತಕ್ಕೆ ನಾಂದಿ ಹಾಕಿತು.

*(ಮುಂದುವರಿಯುವುದು)*

**ಸಿ. ಆರ್. ಕೃಷ್ಣರಾವ್**
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ವೈಜ್ಞಾನಿಕ ಮನೋಧರ್ಮ ಎಂದರೇನು?



ನಮ್ಮ ಜಗತ್ತು ಎಷ್ಟು ವೈಜ್ಞಾನಿಕವಾಗಿ ಮುಂದೆ ಹೋಗುತ್ತಿದೆಯೋ ನಾವಷ್ಟೇ ಕಂದಾಚಾರಿಗಳಾಗಿ ಹಿಂದುಳಿಯಲು ಬಯಸುತ್ತಿದ್ದೇವೆ. ಕಂದಾಚಾರ ಎನ್ನುವ ಪದವನ್ನು ಕೇವಲ ಅರ್ಥಹೀನ ಆಚರಣೆ ಎಂಬುದಕ್ಕಷ್ಟೇ ಸೀಮಿತ ಗೊಳಿಸದೆ, ಮೌಢ್ಯ (ಅಜ್ಞಾನ), ಮೂಢನಂಬಿಕೆಗಳ ಮೇಲೆ ಅಚಲ ವಿಶ್ವಾಸ ಮತ್ತು ಕುರುಡುಭಕ್ತಿ, ತನ್ನದಲ್ಲದ ಯಾವ ಚಿಂತನೆಯನ್ನೂ ಒಪ್ಪದೆ ನಿರಾಕರಿಸುವುದು, ಹಾಗೆ ನಿರಾಕರಿಸಲು ವಿತಂಡ ವಾದ ಒಡ್ಡುತ್ತ ತನ್ನ ಮೂಗಿನ ನೇರಕ್ಕೆ ಕಾರಣಗಳನ್ನು ಕೊಡುವುದು, ವಿಜ್ಞಾನದ ಆಳಜ್ಞಾನ ಇಲ್ಲದಿರುವುದು, ವಿಜ್ಞಾನ ಗೊತ್ತಿದ್ದರೂ ಅರ್ಧಸತ್ಯಗಳನ್ನಷ್ಟೇ ಹೇಳುವುದು, ಒಂದೇ ವಿಷಯದ ಬಗ್ಗೆ ಎರಡು ಮೂರು ಸಿದ್ಧಾಂತಗಳಿದ್ದಾಗ, ಅವುಗಳಲ್ಲಿ ಒಂದು ಮಾತ್ರ ನಿಜ ಎಂದು ಯಾವ ಪರೀಕ್ಷೆಗಳಿಲ್ಲದೆ ನಂಬುವುದು – ಇವೆಲ್ಲವೂ ಇರುವ ಒಂದು ಸಂಕೀರ್ಣ ಮನಃಸ್ಥಿತಿಗೆ ಸಮೀಕರಿಸಲು ಬಳಸಬಹುದಾದ ವಿಶಾಲಾರ್ಥದ ಪದವಾಗಿ ತೆಗೆದುಕೊಂಡಿದ್ದೇನೆ.

ಮೊದಲಿಗೆ 'ವೈಜ್ಞಾನಿಕ' ಎಂದರೆ ಏನೆಂದು ನೋಡೋಣ. ವಿಜ್ಞಾನದ ತಳಹದಿ ಇರುವಂಥದ್ದು ವೈಜ್ಞಾನಿಕ. ವ್ಯಕ್ತಿಗೆ ಅಥವಾ ಸಮಾಜಕ್ಕೆ ಕೇವಲ ವೈಜ್ಞಾನಿಕ ದೃಷ್ಟಿಯೊಂದೇ ಇರಬೇಕು ಎನ್ನುವ ಯಾವ ನಿಬಂಧನೆಯೂ ಇಲ್ಲ. ವೈಜ್ಞಾನಿಕವಲ್ಲದ ಎಷ್ಟೋ ಸಂಗತಿಗಳು ನಮ್ಮ ಸುತ್ತಮುತ್ತ ಮತ್ತು ಜೀವನದಲ್ಲಿ ಇರಬಹುದು. ಉದಾಹರಣೆಗೆ ಸಾಹಿತ್ಯ. ಒಂದು ಒಳ್ಳೆಯ ಸಾಹಿತ್ಯ (ಇದು ದ್ವಿರುಕ್ತಿ. 'ಸಾಹಿತ್ಯ' ಅಂದರೇನೇ 'ಹಿತವನ್ನುಂಟುಮಾಡುವಂಥದ್ದು'!) ನಮ್ಮ ಮನಸ್ಸಿಗೆ ನೆಮ್ಮದಿ ಕೊಡುತ್ತದೆ; ಕೆಟ್ಟ ಸಾಹಿತ್ಯ ವ್ಯಕ್ತಿತ್ವದ ಮೇಲೆ ಋಣಾತ್ಮಕ ಪರಿಣಾಮ ಉಂಟುಮಾಡುತ್ತದೆ ಎನ್ನುವುದನ್ನು ವೈಜ್ಞಾನಿಕವಾಗಿ ಪ್ರಯೋಗಗಳ ಮೂಲಕ ಸಾಧಿಸಬಹುದೇನೊ. ಆದರೆ, ಅದೆಲ್ಲವನ್ನು ಆಳವಾಗಿ ಅಭ್ಯಾಸ ಮಾಡಿ ಯಾರೂ ಸಾಹಿತ್ಯ ಬರೆಯುವುದಿಲ್ಲ. ಲೇಖಕ ಮತ್ತು ಓದುಗ – ವಿಜ್ಞಾನದ ಯಾವ ತಲೆಬಿಸಿ ಇಲ್ಲದೆ ಬರೆಯುವ ಮತ್ತು ಓದುವ ಕ್ರಿಯೆಯನ್ನು ಮಾಡಬಹುದು. ಹಾಗಾಗಿ, ಸಾಹಿತ್ಯ ವೈಜ್ಞಾನಿಕತೆಯ ಛತ್ರಿಯಡಿ ಬರಬೇಕಾಗಿಲ್ಲ. ಇನ್ನು, ನಂಬಿಕೆಗಳು – ಇವೂ ಅಷ್ಟೆ, ವೈಜ್ಞಾನಿಕವಾಗಿರ ಬೇಕಾಗಿಲ್ಲ. ಉದಾಹರಣೆಗೆ, ದೀಪಾವಳಿಗೆ ಪಟಾಕಿ ಹೊಡೆಯುತ್ತೇವೆ; ಯುಗಾದಿಗೆ ಬೇವುಬೆಲ್ಲ ತಿನ್ನುತ್ತೇವೆ; ರಂಜಾನ್ ತಿಂಗಳು ಉಪವಾಸವಿರುತ್ತೇವೆ; ಕ್ರಿಸ್‌ಮಸ್‌ಗೆ ಸಾಂತಾ ಕ್ಲಾಸ್‌ನ ಆಟ ಆಡುತ್ತೇವೆ. ಇವೆಲ್ಲ ಮನುಷ್ಯ ತನ್ನನ್ನು ಖುಷಿಯಾಗಿಟ್ಟುಕೊಳ್ಳಲು ಅಥವಾ ಹಬ್ಬಕ್ಕೆ ವಿಶೇಷತೆಯ ಮೆರುಗು ಕೊಡಲು ಅಳವಡಿಸಿಕೊಂಡಿರಬಹುದಾದ ಆಚರಣೆಗಳು. ಇವನ್ನು ವೈಜ್ಞಾನಿಕತೆಯ ವಿಜ್ಞಾನಕ್ಕೂ ವೈಜ್ಞಾನಿಕ ಮನೋಭಾವಕ್ಕೂ ತುಂಬ ಹತ್ತಿರದ ನಂಟು. 'ವಿಜ್ಞಾನಿ'ಗಳಲ್ಲಿ ಈ ಮನೋಭಾವ ಅಂತರ್ಗತ ವಾಗಿರುತ್ತದೆ. ಬೇರೆಯವರು ಕೂಡ ತುಸು ಪರಿಶ್ರಮಪಟ್ಟರೆ ಇದನ್ನು ಬೆಳೆಸಿಕೊಳ್ಳ ಬಹುದು. ವೈಜ್ಞಾನಿಕ ಮನೋಭಾವ ಎಂದರೆ 'ಏಕೆ' ಎಂಬ ಪ್ರಶ್ನೆಗಳನ್ನು ಕೇಳುತ್ತ, ತರ್ಕಬದ್ಧ ಉತ್ತರಗಳನ್ನು ಅನ್ವೇಷಿಸುತ್ತ ಹೋಗುವ ನಿರಂತರ ಪ್ರಕ್ರಿಯೆ. ಇಲ್ಲಿ ಸತ್ಯಕ್ಕಲ್ಲದೆ ಇನ್ನಾವುದಕ್ಕೂ ತಲೆಬಾಗುವ, ಶರಣಾಗತ ನಾಗುವ ಅಗತ್ಯವಿಲ್ಲ. ಆದ್ದರಿಂದಲೇ ವಿಜ್ಞಾನದಲ್ಲಿ 'ನಾನು ಹೇಳಿದ್ದಷ್ಟೇ ಸತ್ಯ' ಎಂದು ಹೇಳುವ ಪ್ರವಾದಿಗಳಿಲ್ಲ; ಹೀಗೇ ನಡೆಯಬೇಕು ಎಂದು ಕಟ್ಟುಪಾಡು ವಿಧಿಸುವ ಧರ್ಮಗ್ರಂಥಗಳಿಲ್ಲ. ತರ್ಕವಲ್ಲದೆ ಇನ್ನಾವ ಸಿದ್ಧಾಂತಕ್ಕೂ ಮನ್ನಣೆಯಿಲ್ಲ. ಹಾಗೆಂದು ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡವನು ಧಾಡಸಿತನದಿಂದ ವರ್ತಿಸಬೇಕೆಂದಿಲ್ಲ. ಎಷ್ಟೋ ಸಂಗತಿಗಳು ಗೊತ್ತಿಲ್ಲದ್ದನ್ನು ಒಪ್ಪಿಕೊಳ್ಳುವ ನಿಗರ್ವವೂ ಆತನಿಗೆ ಇರಬೇಕು. ಉದಾಹರಣೆಗೆ, ವಿಶ್ವದ ಬಹುಪಾಲನ್ನು ಆವರಿಸಿರುವ 'ಬ್ಲ್ಯಾಕ್ ಮ್ಯಾಟರ್' ಏನೆಂದೇ ಇದುವರೆಗೆ ವಿಜ್ಞಾನಿಗಳಿಗೆ ಗೊತ್ತಾಗಿಲ್ಲ. ಇಡೀ ಕಾಸ್ಮೋಸ್‌ನ ಕೇವಲ 5% ಮಾತ್ರ ಇದುವರೆಗೆ ಕಂಡಿದೆ. ಅದನ್ನು ಒಪ್ಪಿಕೊಳ್ಳಲು ಯಾವ ವಿಜ್ಞಾನಿಯೂ ನಾಚಿಕೆ ಪಡುವುದಿಲ್ಲ. ವೈಜ್ಞಾನಿಕ ಮನೋಭಾವ ಕೊಡುವ ಸಂಸ್ಕಾರ ಇದು.

ರೋಹಿತ್ ಚಕ್ರತೀರ್ಥ 

ನೆಲೆಯಲ್ಲಿ ನೋಡಬೇಕಾಗಿಲ್ಲ. ದೇವರು ಎಂಬ ಕಲ್ಪನೆ – ಇದೂ ಅಷ್ಟೆ. ಮನುಷ್ಯನಿಗೆ ಹಲವು ಸಹಸ್ರವರ್ಷಗಳಿಂದ ಸದಾ ಕಾಡುವ ಸಂಗತಿಯಾಗಿ ನಿಂತಿರುವ 'ದೇವರು' ಎಂಬ ಪರಿಕಲ್ಪನೆಯನ್ನು ಕೂಡ ವಿಜ್ಞಾನದಡಿ ತರಬೇಕಾಗಿಲ್ಲ. ದೇವರು ಇದ್ದಾನೆ ಅಥವಾ ಇಲ್ಲ ಎನ್ನುವುದನ್ನು ಪ್ರೂವ್ ಮಾಡುವುದು ವಿಜ್ಞಾನದ ಗುರಿ ಅಲ್ಲ. ಒಂದು ಸಂಗತಿ ವಿಜ್ಞಾನದ ಪರಿಧಿಗೆ ಬರುವುದಿಲ್ಲ ; ವೈಜ್ಞಾನಿಕ, ಅಲ್ಲ ಎನ್ನುವುದರಿಂದಲೇ ಅದರ ಮೌಲ್ಯನಿರ್ಣಯ ಆಗಿಹೋಗುವುದಿಲ್ಲ. ತುಂಬ ಸರಳವಾಗಿ ಹೇಳಬೇಕೆಂದರೆ ವೈಜ್ಞಾನಿಕ ಅಲ್ಲದ್ದು ಅವೈಜ್ಞಾನಿಕ ಸರಿ. ಆದರೆ ನಾವಿಂದು ಕೊಟ್ಟಿರುವ 'ಮೂಢ', ಅಥವಾ 'ಬುದ್ಧಿಯಿಲ್ಲದ' ಎಂಬರ್ಥದಲ್ಲಿ ಅಲ್ಲ. ಮ್ಯಾರಥಾನ್ ಓಡುವ ಹಿಂದಿನ ದಿನ ಏನೇನು ಆಹಾರ ತೆಗೆದುಕೊಳ್ಳಬೇಕೆಂಬ ವಿಷಯದಲ್ಲಿ ವೈಜ್ಞಾನಿಕನಾದ ನಾನು, ಹಬ್ಬಕ್ಕೆ ಒಬ್ಬಟ್ಟು ತಿನ್ನುವ ವಿಚಾರ ಬಂದಾಗ ವಿಜ್ಞಾನದ ಬಗ್ಗೆ ತಲೆಕೆಡಿಸಿಕೊಳ್ಳದ ಅವೈಜ್ಞಾನಿಕನಾಗುತ್ತೇನೆ.

ನಾನಿನ್ನು ಹೇಳಹೊರಟ ವಿಚಾರಕ್ಕೆ ತಳಹದಿಯಾಗಿ ಕೆಲಸ ಮಾಡುವುದರಿಂದ ಈ ಮೇಲೆ ಹೇಳಿದ ಮಾತುಗಳು ತುಂಬ ಮುಖ್ಯ. ಅಲ್ಲಿನ ಸಾರಾಂಶವನ್ನು ಸಂಕ್ಷಿಪ್ತವಾಗಿ ಹೀಗೆ ಹೇಳಬಹುದು : ನಮ್ಮ ಯೋಚನೆ, ಚಿಂತನೆಗಳಲ್ಲಿ ಮುಖ್ಯವಾಗಿ ಮೂರು ಶಾಖೆಗಳಿವೆ – ವೈಜ್ಞಾನಿಕ, ಅವೈಜ್ಞಾನಿಕ ಮತ್ತು ಮೂಢ. ವಿಜ್ಞಾನದ ಸೂತ್ರ, ಸಮೀಕರಣ, ಪ್ರಯೋಗಗಳಿಗೆ ಅಳವಡಿಸಬಹುದಾದ್ದು ವೈಜ್ಞಾನಿಕ. ಅಂತಹ ಯಾವ ಸೂತ್ರ, ಪ್ರಯೋಗಗಳ ಹಂಗಿಲ್ಲದೆಯೂ ಸ್ವತಂತ್ರವಾಗಿ ಅಸ್ತಿತ್ವದಲ್ಲಿರಬಹುದಾದ್ದು ಅವೈಜ್ಞಾನಿಕ. ವಿಜ್ಞಾನದ ಸೂತ್ರ ಪ್ರಯೋಗಗಳನ್ನು ಹಾಕಿದಾಗ ಸಂಪೂರ್ಣವಾಗಿ ತಪ್ಪೆಂದು ರುಜುವಾತುಪಡಿಸಬಹುದಾದ ಸಂಗತಿ ಮೌಢ್ಯ. ಇವಿಷ್ಟು ಸರಿಯಾಗಿ ಅರ್ಥವಾದರೆ ನಾವು ಅರ್ಧ ದಾರಿ ಕ್ರಮಿಸಿಬಿಟ್ಟಾಯಿತು ಎಂದು ತಿಳಿಯಬಹುದು !

ವಿಜ್ಞಾನಿ ಅಂದರೆ ಯಾರು ? ನಾವಿಂದು 'ಸೈಂಟಿಸ್ಟ್' ಎಂಬ ಪದಕ್ಕೆ ಬೇರಾವ ಪರ್ಯಾಯ ಶಬ್ದ ಸಿಕ್ಕದೆ 'ವಿಜ್ಞಾನಿ' ಎಂಬ ಪದವನ್ನು ಬಳಸುತ್ತಿದ್ದೇವೆ. ಆದರೆ, ನಿಜವಾಗಿ ನೋಡಿದರೆ, ವಿಜ್ಞಾನವನ್ನು ನಂಬಿ ನಡೆಯುವವನು, ಅದರಲ್ಲಿ ಹೆಚ್ಚು ಶ್ರಮ ಇರುವವನು, ವಿಜ್ಞಾನದ ಮಾರ್ಗವನ್ನು ಸತ್ಯಾನ್ವೇಷಣೆಗೆ ಆರಿಸಿಕೊಳ್ಳುವವನು, ಯಾರೇ ಇರಲಿ, ವಿಜ್ಞಾನಿಯೇ. ಚರ್ಮವನ್ನು ಎಷ್ಟು ಬಿಸಿಯಲ್ಲಿ ಕಾಯಿಸಿದರೆ ಚಪ್ಪಲಿಗೆ ಬೇಕಾದ ಹದ ಸಿಗುತ್ತದೆ ಎನ್ನುವುದನ್ನು ಅನುಭವದಿಂದ ಕಲಿತ ಚಮ್ಮಾರ, ಫಿಸಿಕ್ಸ್ ಕಲಿಯದೆ ಇದ್ದರೂ ಪಿಟೀಲಿಗೆ ತಂತಿ ಕೂಡಿಸಿ ಕೊಡಬಲ್ಲ ವಾದ್ಯ ತಯಾರಕ, ಯಾವ ವರ್ಷ ಕಾಡಿನ ಯಾವ ಮರದಲ್ಲಿ ಜೇನು ತೊನೆಯುತ್ತದೆ ಎನ್ನುವುದನ್ನು ಅಂದಾಜು ಮಾಡಬಲ್ಲ ಕಾಡುಸಿದ್ದ – ಇವರೆಲ್ಲರೂ ವಿಜ್ಞಾನಿಗಳೇ. ಯಾಕೆಂದರೆ, ಇವರೆಲ್ಲ ತಮ್ಮ ನಿರ್ಣಯಕ್ಕೆ ಯಾವುದೋ ಒಂದು ತರ್ಕವನ್ನು ಅವಲಂಬಿಸಿದ್ದಾರೆ. ಆ ತರ್ಕದ ವೈಜ್ಞಾನಿಕ ಹಿನ್ನೆಲೆ ಅವರಿಗೆ ಗೊತ್ತಿಲ್ಲದಿರಬಹುದು, ಆದರೆ ಒಬ್ಬ ನಿಜವಾದ ಸೈಂಟಿಸ್ಟ್ ಅವರ ಈ ತರ್ಕಕ್ಕೆ ಕಾರಣಗಳೇನು, ಯಾವುದು ಆಧಾರ ಎನ್ನುವುದನ್ನು ತರ್ಕಬದ್ಧವಾಗಿ, ವೈಜ್ಞಾನಿಕವಾಗಿ ವಿಶ್ಲೇಷಿಸಿ ಪರೀಕ್ಷಿಸಿ ನೋಡಬಹುದು. ಆ

## ಸಾದರ ಸ್ವೀಕಾರ

**ಭಾರತದ ಬೌದ್ಧಿಕ ದಾರಿದ್ರ್ಯ** *ವಿ. ಆರ್. ನಾರ್ಲಾ,*
*ಅನು : ಪ್ರೊ॥. ಬಿ. ಗಂಗಾಧರಮೂರ್ತಿ*
***ಪುಟ : xiv + ೮೦ = ೯೪ ಬೆಲೆ : ರೂ. ೬೦***

**ನಾಗವಂಶ : ದಲಿತ ಅಸ್ಮಿತೆ**
*ಮರಾಠಿ ಮೂಲ : ಶ್ರೀನಿವಾಸ ಭಾಲೇರಾವ್;*
*ಕನ್ನಡಕ್ಕೆ : ಡಾ॥ ಸಿದ್ರಾಮ ಕಾರಣಿಕ*
***ಪುಟ : ೫೪ + ೪ ಬೆಲೆ : ರೂ. ೪೦***

**ನೆನಪಿನ ಹಕ್ಕಿ – ಮರಾಠವಾಡಾದ ದಲಿತನ ಆತ್ಮಕಥನ**
*ಮರಾಠಿ ಮೂಲ : ಪ್ರ. ಈ. ಸೋನ ಕಾಂಬಳೆ;*
*ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*
***ಪುಟ : xxiv+೧೪೮ = ೧೭೨ ಬೆಲೆ : ರೂ. ೧೪೦***

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ – ೫೮೨ ೧೦೧

**ಕೃಷಿಯಿಂದ ಬದುಕು ಕಟ್ಟಿಕೊಂಡ ಶಂಕರ ಲಂಗಟಿ ಮತ್ತು ಗುಂಡೇನಟ್ಟಿ ಗ್ರಾಮ**
*ವಿನೋದ ಆರ್. ಪಾಟೀಲ*
***ಪುಟ : iv + ೨೮ = ೩೨ ಬೆಲೆ : ರೂ. ೩೦***
**ಕೃಷಿ ಮಾಧ್ಯಮ ಕೇಂದ್ರ,** ೩೨೭, ೧ನೇ ಮಹಡಿ, ರಾಯಚೂರು ಪ್ಲಾಟ್ಸ್, ನಾರಾಯಣಪುರ, ಧಾರವಾಡ – ೫೮೦ ೦೦೮

**ಪ್ರೊ॥ ಬಿ. ಕೃಷ್ಣಪ್ಪನವರ ಬರಹಗಳು ಮತ್ತು ಭಾಷಣಗಳು** (ಭಾಗ – 3) *ಸಂ. : ಇಂದಿರಾ ಕೃಷ್ಣಪ್ಪ*
***ಪುಟ : xii + ೧೩೨ ಬೆಲೆ : ರೂ. ೯೫***
**ಪ್ರೊ॥ ಬಿ. ಕೃಷ್ಣಪ್ಪ ಟ್ರಸ್ಟ್,** ಸಂ. ೨೫, ೩ನೇ ಮಹಡಿ, ೩ನೇ ತಿರುವು, ಸಂತೋಷ್‌ನಗರ, ಯಲಹಂಕ, ೪ನೇ ಹಂತ, ಅಟ್ಟೂರು, ಬೆಂಗಳೂರು – ೬೪

**ಡಾ॥ ರಾಮಧಾರಿ ಸಿಂಹ ದಿನಕರ ಕವಿತೆಗಳು**
*ಸಂ. ಹಾಗೂ ಅನು : ಪ್ರೊ॥ ಕಾಶೀನಾಥ ಅಂಬಲಗೆ*
***ಪುಟ : ೬೮ ಬೆಲೆ : ರೂ. ೫೦***
**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರಗಿ – ೫೮೫ ೧೦೫

**ಯುಗಧರ್ಮ ಮತ್ತು ಆಧುನಿಕ ಕನ್ನಡ ಮಹಾಕಾವ್ಯಗಳು**
*ಡಾ॥ ರಾಜೇಂದ್ರ ಬುರಡಿಕಟ್ಟಿ*
***ಪುಟ : xiv + ೫೩೦ = ೫೪೪ ಬೆಲೆ : ರೂ. ೩೫೦***
**ಪೂರ್ಣ ಪ್ರಕಾಶನ,** ಶಿವಮೊಗ್ಗ – ೫೭೭ ೨೦೩

**ಷಡ್ದರ್ಶನ ಸಮುಚ್ಚಯಃ** (ಪರಮ ಜೈನ ವಿದ್ವಾಂಸರಾದ ಹರಿಭದ್ರ ಸೂರಿಯಿಂದ ನೀಡಲ್ಪಟ್ಟ ಆರು ದರ್ಶನಗಳ ಸಂಗ್ರಹ) *ಅನು : ಆರ್ಯ ಆಚಾರ್ಯ*
***ಪುಟ : xii + ೪೪ = ೫೬ ಬೆಲೆ : ರೂ. ೪೦***

**ಮಸುಕು ಬೆಟ್ಟದ ದಾರಿ** *ಎಂ. ಆರ್. ದತ್ತಾತ್ರಿ*
***ಪುಟ : x + ೩೩೦ = ೩೪೦ ಬೆಲೆ : ರೂ. ೩೦೦***

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಮನೋಹರ ಗ್ರಂಥಮಾಲಾ,** ಲಕ್ಷ್ಮೀ ಭವನ್, ಸುಭಾಷ್ ರೋಡ್, ಧಾರವಾಡ – ೫೮೦ ೦೦೧

**ಕವಿತೆಗಷ್ಟೇ ಸಾಧ್ಯ** (ಕಿರುಗವಿತೆಗಳ ಸಂಕಲನ)
*ಡಾ॥ ಕೆ. ಬಿ. ರಂಗಸ್ವಾಮಿ*
***ಪುಟ : ೬೪ ಬೆಲೆ : ರೂ. ೫೦***
**ಸಮೃದ್ಧ ಪ್ರಕಾಶನ,** 'ನೆಮ್ಮದಿ' ೭ನೇ ಮುಖ್ಯರಸ್ತೆ, ಜಯನಗರ ಪೂರ್ವ, ತುಮಕೂರು – ೦೨

**ಶರಣ ಶ್ರಾವಣ** *ಸಂ. : ಡಾ॥ ಗುರುಲಿಂಗಪ್ಪ ಧಬಾಲೆ*
***ಪುಟ : ೨೦೨ + xxii = ೨೨೦ ಬೆಲೆ : ರೂ. ೧೬೦***
**ಸೊಲ್ಲಾಪುರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು,** ಕೊಕ್ಕಳಗಿ ನಗರ, ಬ್ಯಾಗೇಹಳ್ಳಿ ರಸ್ತೆ, ಅಕ್ಕಲಕೋಟ – ೪೧೩ ೨೧೬, ಸೊಲ್ಲಾಪುರ ಜಿಲ್ಲೆ, ಮಹಾರಾಷ್ಟ್ರ

**ಸುನಾಮಿಯ ಸುಳಿಯಲ್ಲಿ** (ಸಾಗರದ ನೀರಿನ ನಡುವೆ ಒಂಟಿ ಬಾಲಕನ ರೋಚಕ ಸಾಹಸ) *ಆರ್. ಕೆ. ಶಾನುಭೋಗ*
***ಪುಟ : x + ೬೮ = ೭೮ ಬೆಲೆ : ರೂ. ೬೦***
**ಜಡಭರತ ಪ್ರಕಾಶನ,** ಲಕ್ಷ್ಮೀ ಭವನ್, ಸುಭಾಷ್ ರೋಡ್, ಧಾರವಾಡ – ೫೮೦ ೦೦೧

**ಚಂದ್ರಗಿರಿ** (ಸಾಮಾಜಿಕ ಕಾದಂಬರಿ)
*ಬಿ. ಪಿ. ಶಿವಾನಂದರಾವ್*
***ಪುಟ : x + ೧೩೪ = ೧೪೪ ಬೆಲೆ : ರೂ. ೯೫***
**ಕಣ್ವ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** ನಂ. ೭೭೭, ನೆಲಮಹಡಿ, ೭ನೇ ಅಡ್ಡರಸ್ತೆ, ೫ನೇ ಮುಖ್ಯರಸ್ತೆ, ಎಂ. ಸಿ. ಬಡಾವಣೆ, ವಿಜಯನಗರ, ಬೆಂಗಳೂರು – ೪೦

**ಬಟ್ಟೆಯೆಂಬುದು ಬೆಂಕಿಯ ಹಾಗೆ** (ಬಸೂ ಕವಿತೆಗಳು)
*ಬಸೂ*
***ಪುಟ : ೧೫೪ ಬೆಲೆ : ರೂ. ೧೨೦***
**ಕವಿ ಪ್ರಕಾಶನ,** ಜಲಜ ಜನರಲ್ ಮತ್ತು ಮೆಟರ್ನಿಟಿ ಕ್ಲಿನಿಕ್, ಕವಲಕ್ಕಿ, ಹೊನ್ನಾವರ, ಉತ್ತರ ಕನ್ನಡ

**ಕಾವ್ಯ ಕುಸುಮಗಳು**
*ಕೀರಿಕ್ಕಾಡು, ಮಾಸ್ತರ್ ವಿಷ್ಣು ಭಟ್ಟ*
***ಪುಟ : viii + ೨೮ ಬೆಲೆ : ರೂ. ೫೦***
**ಬನಾರಿ ಶ್ರೀ ಗೋಪಾಲಕೃಷ್ಣ ಪ್ರಕಾಶನ,** ದೇಲಂಪಾಡಿ – ೬೭೧ ೫೪೩, ಕಾಸರಗೋಡು

ಗುಟ್ಟು ಗೊತ್ತಾದ ಮೇಲೆ, ಅದೇ ತರ್ಕವನ್ನು ಬಳಸಿ ಬೇರೆಯವರು ಕೂಡ ಇವರದೇ ದಾರಿಯಲ್ಲಿ ಸಾಗಿದರೆ, ಅವವೇ ಫಲಿತಾಂಶಗಳು ಸಿಗುತ್ತವೆ.

ಅಂದರೆ, ಅತ್ಯಂತ ನಿಖರವಾದ ಮತ್ತು ಪುನರಾವರ್ತಿಸಿ ನೋಡಬಹುದಾದ ತರ್ಕಶುದ್ಧ ವಿನ್ಯಾಸ ಇದೆ ಎನ್ನುವುದು ವಿಜ್ಞಾನದ ಒಂದು ಮೂಲಾಂಶ. ವಿಜ್ಞಾನ ಬೆಳೆದಿರುವುದು ಕೂಡ ಹೀಗೆಯೇ ಅಲ್ಲವೆ ? ನ್ಯೂಟನ್ ಸೇಬು ಬೀಳುವುದನ್ನು ನೋಡಿದ; ಹಾಗೆಯೇ ಯಾವುದೇ ವಸ್ತು ಮೇಲಿಂದ ಕೆಳಗೆ ಬೀಳುತ್ತದೆ ಎನ್ನುವುದನ್ನು ಗಮನಿಸಿದ. ಈ ಕ್ರಮವನ್ನು ತಪ್ಪದ ಯಾವೊಂದು ಸಂಗತಿಯೂ ಇಲ್ಲ ಎನ್ನುವುದನ್ನು ಖಚಿತ ಪಡಿಸಿಕೊಂಡ. ಮೇಲೆ ಚಿಮ್ಮಿದ ಯಾವುದೇ ವಸ್ತು ಕೆಳಗೆ ಬೀಳಲೇಬೇಕು ಎನ್ನುವುದನ್ನು ಪ್ರಯೋಗಗಳ ಮೂಲಕ ದೃಢಪಡಿಸಿಕೊಂಡ ಮೇಲೆ ಗುರುತ್ವಾಕರ್ಷಣ ನಿಯಮ ಕಂಡುಹಿಡಿದ. ಗಮನಿಸಿ : ಮೇಲಿಂದ ವಸ್ತು ಕೆಳಗೆ ಬೀಳುತ್ತದೆ ಎಂದರೆ ಅದು ವಿಜ್ಞಾನವಾಗಲಿಲ್ಲ. ಅದು ಕೇವಲ ಸಿದ್ಧಾಂತ ಆಗುತ್ತದೆ, ಅಷ್ಟೆ. ಆದರೆ, ಕಡಿಮೆ ದ್ರವ್ಯರಾಶಿ ಇರುವ ವಸ್ತುವನ್ನು ಹೆಚ್ಚು ದ್ರವ್ಯರಾಶಿ ಇರುವ ವಸ್ತು ಆಕರ್ಷಿಸುತ್ತದೆ. ದ್ರವ್ಯರಾಶಿಯೇ ಆಕರ್ಷಣೆ ಎಂಬ ಹೊಸ ಶಕ್ತಿ ಹುಟ್ಟಲು ಕಾರಣ. ಇದು ಎರಡು ವಸ್ತುಗಳ ನಡುವಿನ ಅಂತರದ ವರ್ಗಕ್ಕೆ ವಿಲೋಮವಾಗಿರುತ್ತದೆ. ಅಂದರೆ, ತುಂಬ ಹತ್ತಿರದಲ್ಲಿರುವ ವಸ್ತುಗಳ ಆಕರ್ಷಣೆ ಹೆಚ್ಚು ; ದೂರ ಹೋದಷ್ಟು ಈ ಸೆಳೆತ ಕಡಿಮೆ. ಚಂದ್ರ ಭೂಮಿಗೆ ಸುತ್ತು ಬರುವುದು, ಭೂಮಿ ಸೂರ್ಯನಿಗೆ ಪ್ರದಕ್ಷಿಣೆ ಹಾಕುವುದು – ಇವೆಲ್ಲ ಗುರುತ್ವದ ಆಟ ಎನ್ನುವುದನ್ನು ಯಾವ ಸಂಶಯಕ್ಕೂ ಎಡೆ ಇಲ್ಲದಂತೆ ತರ್ಕಬದ್ಧವಾಗಿ ಮಂಡಿಸುವುದು ವಿಜ್ಞಾನ. ನ್ಯೂಟನ್ ಕೊಟ್ಟ ಸೂತ್ರವನ್ನು ಬಳಸಿ ಯಾರು ಬೇಕಾದರೂ, ವಿಶ್ವದ ಯಾವ ಮೂಲೆಯಲ್ಲಿ ಬೇಕಾದರೂ ಪ್ರಯೋಗ ಮಾಡಿ ನೋಡಬಹುದು. ಅವರಿಗೆ ಸಿಗುವ ಉತ್ತರ ಒಂದೇ ಆಗಿರುತ್ತದೆ.

ವಿಜ್ಞಾನದ ಬಗ್ಗೆ ಹೇಳುತ್ತಲೇ ಅಲ್ಲಿ ಸಿದ್ಧಾಂತದ ಮಾತು ಬಂತು. ವಿಜ್ಞಾನದ ದಾರಿಯಲ್ಲಿ ಹೋಗುವಾಗ ನಮಗೆ ಪ್ರಯೋಗ ಮತ್ತು ಸಿದ್ಧಾಂತ ಎಂದು ದಾರಿ ಕವಲೊಡೆಯುತ್ತದೆ. "ನೋಡಿ, ನಾನು ಒಂದಷ್ಟು ಪ್ರಯೋಗ ಗಳನ್ನು ಮಾಡಿದ್ದೇನೆ. ಅವುಗಳ ಆಧಾರದಲ್ಲಿ ಒಂದಷ್ಟು ವಿಚಾರಗಳನ್ನು ಯೋಚಿಸಿದ್ದೇನೆ. ಅವು ಸತ್ಯ ಇದ್ದರೂ ಇರಬಹುದು" ಎಂದು ಹೇಳುವುದು ಸಿದ್ಧಾಂತ. ಉದಾಹರಣೆಗೆ, ವಿಶ್ವಸೃಷ್ಟಿ ಒಂದು ಮಹಾಸ್ಫೋಟದಿಂದ ಆಗಿರಬಹುದು ಎನ್ನುವ 'ಬಿಗ್ ಬ್ಯಾಂಗ್' ಒಂದು ಸಿದ್ಧಾಂತ. ವಿಶ್ವದಲ್ಲಿ ಪ್ರತಿಯೊಂದು ವಸ್ತುವಿನ ಚಲನೆಯೂ ಇನ್ನೊಂದಕ್ಕೆ ಸಾಪೇಕ್ಷ. ಕಾಲವನ್ನು ನಾಲ್ಕನೇ ಆಯಾಮವಾಗಿ ತೆಗೆದುಕೊಳ್ಳಬಹುದು; ಮಾತ್ರವಲ್ಲ, ಅದನ್ನು ಬೇಕಾದಂತೆ ಬಗ್ಗಿಸಬಹುದು, ತಿರುಚಬಹುದು ಎನ್ನುವ ಐನ್‌ಸ್ಟೈನರ 'ರಿಲೇಟಿವಿಟಿ' ವಾದವೂ ಒಂದು ಸಿದ್ಧಾಂತ. ಇವುಗಳನ್ನು ಬೆಂಬಲಿಸುವ ಸಾವಿರ ಪ್ರಯೋಗಗಳು ಇರಬಹುದು; ಆದರೆ, ಇನ್ನೂ ಮಾಡಿನೋಡ ಬೇಕಾದ ಅಸಂಖ್ಯ ಪ್ರಯೋಗಗಳು ಬಾಕಿ ಇರಬಹುದು. ಅಂತಹ ಎಲ್ಲಾ ಪ್ರಯೋಗಗಳಲ್ಲಿ ಗೆದ್ದುಬಂದ ನಂತರವಷ್ಟೇ ಅವನ್ನು ಪೂರ್ಣವಾಗಿ 'ವಿಜ್ಞಾನ' ಎಂದು ಒಪ್ಪಬಹುದು. ಮಾರ್ಗ ಮಧ್ಯೆ ಯಾವುದಾದರೂ ಪ್ರಯೋಗ ಈ ಸಿದ್ಧಾಂತವನ್ನು ತಪ್ಪು ಎಂದು ಸಾಬೀತುಪಡಿಸಿದರೆ, ಅದಕ್ಕೆ ವಿಜ್ಞಾನ ಎಂಬ ನೆಲೆಯಲ್ಲಿ ಸಿಕ್ಕಿದ ಮಾನ್ಯತೆಯೆಲ್ಲ ಬಿದ್ದುಹೋಗುತ್ತದೆ. ಒಂದಾನೊಂದು ಕಾಲದಲ್ಲಿ 'ವಿಜ್ಞಾನ' ಎಂದು ಗುರುತಿಸಲ್ಪಟ್ಟಿದ್ದ 'ಭೂಕೇಂದ್ರವಾದ' ಕಿತ್ತೊಗೆಯಲ್ಪಟ್ಟದ್ದು ಹೀಗೆ.

ಇನ್ನು, ಪ್ರಯೋಗಕ್ಕೆ ಅತೀತವಾದ ಸತ್ಯಗಳನ್ನು ಕಾಣಲು ನಾವು ತರ್ಕದ ಮೊರೆ ಹೋಗಬೇಕು. ತರ್ಕ ಎಂದರೇನು ? ನಾವು ಯಾವುದನ್ನು ತರ್ಕ ಎಂದು ಒಪ್ಪಬಹುದು ? ತರ್ಕಶಾಸ್ತ್ರ ಎನ್ನುವುದು ಗಣಿತದ ಒಂದು ಉಪಶಾಖೆ. ಇದನ್ನು ಗ್ರೀಕರು 'ಲಾಜಿಕ್' ಎಂದೂ ಭಾರತೀಯರು 'ನ್ಯಾಯ' ಎಂದೂ ಅಭಿವೃದ್ಧಿಪಡಿಸಿದರು. ಗ್ರೀಕರಲ್ಲಿ ಅರಿಸ್ಟಾಟಲ್, ಪ್ಲೇಟೋ, ಪೈಥಾಗೊರಸ್, ಟಾಲೆಮಿ ಮುಂತಾದವರು; ಭಾರತದಲ್ಲಿ ಆಪಸ್ತಂಬ, ಬೋಧಾಯನ, ಗೌತಮ, ನಾಗಾರ್ಜುನ ಮುಂತಾದವರು ಇದನ್ನು ಬೆಳೆಸಿದರು. ಸೂರ್ಯ ಪೂರ್ವದಲ್ಲಿ ಹುಟ್ಟುತ್ತಾನೆ. ಮೊನ್ನೆ, ನಿನ್ನೆ, ಇಂದು ಹುಟ್ಟಿದ್ದಾನೆ; ಹಾಗಾಗಿ ನಾಳೆಯೂ ಸೂರ್ಯ ಹುಟ್ಟುವುದು ಶತಸ್ಸಿದ್ಧ



೨೦೧೩ನೇ ಸಾಲಿನ 'ಬಸವಶ್ರೀ ಪ್ರಶಸ್ತಿ'ಯು ಸಾಹಿತಿ ಡಾ॥ ಎಂ. ಎಂ. ಕಲಬುರ್ಗಿ ಅವರಿಗೆ ದೊರಕಿದೆ. ಅವರಿಗೆ 'ನವಕರ್ನಾಟಕ ಪ್ರಕಾಶನ' ಹಾಗೂ 'ಹೊಸತು' ಬಳಗದಿಂದ ಅಭಿನಂದನೆಗಳು

ಎನ್ನುವುದು ಒಬ್ಬರ ಆಲೋಚನೆಯಾದರೆ, ಹಾಗೆ ಆಗಲೇಬೇಕೆಂದಿಲ್ಲವಲ್ಲ ! ನಿನ್ನೆ ಮೊನ್ನೆ ನಡೆದ ಘಟನೆ ನಿನ್ನೆ ಮೊನ್ನೆ ನಡೆದಿದೆ ಎನ್ನುವ ಕಾರಣಕ್ಕಾಗಿಯೇ ನಾಳೆಯೂ ನಡೆಯಬೇಕು ಎಂದು ಹೇಗೆ ಹೇಳುವುದು ? ಎನ್ನುವ ಚಿಂತನೆ ಇನ್ನೊಬ್ಬರದಿರಬಹುದು. ಈ ಇಬ್ಬರ ವಾದವನ್ನು ಪರಿಹರಿಸುವುದು ಹೇಗೆ ? ಯಾರ ವಾದ ಸತ್ಯಕ್ಕೆ ಹತ್ತಿರ ? ಇಷ್ಟಕ್ಕೂ 'ಸತ್ಯ' ಎಂದರೇನು ? ನಮ್ಮ 'ಕಣ್ಣಿಗೆ' ಕಾಣುವುದು ಮಾತ್ರ ಸತ್ಯವೋ ? ಇಂದ್ರಿಯಾನುಭವಕ್ಕೆ ಮೀರಿದ್ದನ್ನು ಸತ್ಯ ಎಂದು ಒಪ್ಪಿಕೊಳ್ಳುವಂತಿಲ್ಲವೆ ? – ಇಂತಹ ಪ್ರಶ್ನೆಗಳನ್ನು ಕೇಳುತ್ತ ಚಿಂತನೆಯ ಆಳಕ್ಕೆ ಇಳಿಯುತ್ತ ಹೋದವರು ಹಿಡಿದ ಮೀನು 'ತರ್ಕ'. ತರ್ಕವು ಎಷ್ಟು ಪರಿಶುದ್ಧಜ್ಞಾನವೆಂದರೆ ಅದನ್ನು ಯಾವುದೇ ವಿಜ್ಞಾನಕ್ಕೆ ಅಥವಾ ವಿಜ್ಞಾನವಲ್ಲದ ದಿನನಿತ್ಯದ ಸಂಗತಿಗಳಿಗೆ ಬಳಸಬಹುದು. ಗಣಿತಕ್ಕೆ ತಾಯಿಬೇರು ತರ್ಕ. 'ಯಾವುದೇ ಕಾರ್ಯ ನಡೆಯಬೇಕಾದರೂ ಅದಕ್ಕೊಂದು ಕಾರಣ ಇರಬೇಕು. ಕಾರಣ ಮುಂದೆ ನಡೆಯುವ ಕಾರ್ಯಕ್ಕೆ ತಕ್ಕ ವೇದಿಕೆ ಒದಗಿಸಿಕೊಡಬೇಕು' – ಇದು ವಿಜ್ಞಾನದಲ್ಲಿ ಬಳಸುವ ತರ್ಕದ ಸಾರಾಂಶ. ಇದನ್ನೇ ಸಂಕ್ಷಿಪ್ತವಾಗಿ 'ಕಾರ್ಯಕಾರಣ ಸಂಬಂಧ' ಎನ್ನುವುದು. ಚೆಂಡು ಬೌಂಡರಿಯಾಚೆ ಚಿಮ್ಮಲು ಕಾರಣ, ಅದು ಅಲ್ಲಿಗೆ ಹೋಗಲು ಬೇಕಾದಷ್ಟು ಚಲನಶಕ್ತಿಯನ್ನು ಗಳಿಸಿದ್ದು. ಅದು ಚಲನೆ ಗಳಿಸಲು ಕಾರಣ, ಬ್ಯಾಟು ಬೀಸಿ ಅದಕ್ಕೆ ಶಕ್ತಿಯನ್ನು ಹೂಡಿದ್ದು. ಬ್ಯಾಟನ್ನು ಮುಟ್ಟಿದೊಡನೆ ಚೆಂಡು ಚಿಮ್ಮಲು ಕಾರಣ, ಅದನ್ನು ಅಷ್ಟೇ ವೇಗದಿಂದ ಎಸೆದು ಬೌಲಿಂಗ್ ಮಾಡಿದ್ದು... ಹೀಗೆ ಯೋಚಿಸುತ್ತ ಹೋದರೆ ಪ್ರತಿ ಘಟನೆಗೂ ಹಿಂದೆ ಒಂದು ಕಾರಣದ ಬಲ ಇದೆ ಎನ್ನುವುದು ಗೊತ್ತಾಗುತ್ತದೆ. ಈ ತರ್ಕ ಅನೇಕ ಅನುಮಾನಗಳನ್ನು ಪರಿಹರಿಸಿ ನಮ್ಮ ಬುದ್ಧಿಯನ್ನು ಚುರುಕುಗೊಳಿಸುತ್ತದೆ. 'ಚೆಂಡು ಚಿಮ್ಮಿದ್ದಕ್ಕೆ ದೈವವೇ ಕಾರಣ' ಎನ್ನಹೋದರೆ, ನಾವು ಈ ಎಲ್ಲ ಕಾರ್ಯಕಾರಣ ಸಂಬಂಧವನ್ನು ನಿರಾಕರಿಸಿದಂತೆ.

ಶಾಸ್ತ್ರಕ್ಕೂ ವಿಜ್ಞಾನಕ್ಕೂ ಭೇದ ಬರುವುದು ಇಲ್ಲೇ. ಒಬ್ಬರು ಬರೆದಿಟ್ಟದ್ದನ್ನು ಅನುಕರಿಸುವುದು ಶಾಸ್ತ್ರ. ಉದಾಹರಣೆಗೆ, ಪತಂಜಲಿ ಬರೆದ ಯೋಗಶಾಸ್ತ್ರ. ಆತ ಬರೆದ ಆಸನಗಳನ್ನು ಚಾಚೂ ತಪ್ಪದೆ ಅದೇ ಕ್ರಮದಲ್ಲಿ, ವಿಧಾನದಲ್ಲಿ ಅನುಸರಿಸಬೇಕು. ಪಾಣಿನಿಯ ವ್ಯಾಕರಣ, ಪಿಂಗಳನ ಛಂದಶ್ಶಾಸ್ತ್ರಗಳೆಲ್ಲ ಈ ಬಗೆಯವು. ಯೂಕ್ಲಿಡನ ಜ್ಯಾಮಿತಿಯೂ ಆ ದೃಷ್ಟಿಯಲ್ಲಿ ಒಂದು ಶಾಸ್ತ್ರವೇ. ಅಲ್ಲಿ ಹಸ್ತಕ್ಷೇಪಕ್ಕೆ ಎಡೆಯಿಲ್ಲ. ಅಂದಮಾತ್ರಕ್ಕೆ ಶಾಸ್ತ್ರ ಗೊಡ್ಡು ಎನ್ನುವ ತೀರ್ಮಾನಕ್ಕೆ ಬರಬಾರದು ! ಬರೆದಿಟ್ಟು ಎರಡೂವರೆ ಸಾವಿರವರ್ಷಗಳೇ ಸಂದರೂ ಪಾಣಿನಿಯ ವ್ಯಾಕರಣದಲ್ಲಿ ಒಂದನ್ನಾದರೂ ಅತ್ತಿತ್ತ ಅಲುಗಿಸ ಬೇಕಾದ ಅಗತ್ಯ ಇದುವರೆಗೆ ಬಂದಿಲ್ಲ; ಯೋಗಶಾಸ್ತ್ರದ ವಿಚಾರದಲ್ಲೂ ಇದು ನಿಜವಿರಬಹುದು ಎಂದುಕೊಂಡಿದ್ದೇನೆ. ಯೂಕ್ಲಿಡನ 'ಎಲಿಮೆಂಟ್ಸ್'ಅನ್ನು ಅದೇ ಕ್ರಮದಲ್ಲಿ ಇಂದಿಗೂ ಓದಿ ಜ್ಯಾಮಿತಿಯಲ್ಲಿ ಪಾಂಡಿತ್ಯ ಪಡೆಯ ಬಹುದು. ಆದರೆ, ಈ ಶಾಸ್ತ್ರವನ್ನು ಆಧಾರವಾಗಿಟ್ಟುಕೊಂಡು ಇನ್ನಷ್ಟು ಬೆಳೆಯಲು ವಿಜ್ಞಾನ ಅವಕಾಶ ಮಾಡಿಕೊಡುತ್ತದೆ. ವಿಜ್ಞಾನದಲ್ಲಿ 'ಅಂತಿಮ ನಿರ್ಣಯ' ಎಂಬುದಕ್ಕೆ ಮಾನ್ಯತೆ ಇಲ್ಲ. ವೈದ್ಯಕೀಯದಲ್ಲಿ ನಡೆಯುತ್ತಿರುವ ನೂರಾರು ಸಂಶೋಧನೆಗಳನ್ನೇ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಯಾವುದೋ ಕಾಯಿಲೆಗೆ ಕಾರಣವಾದ ಅಂಶ 'ಇದೇ' ಎಂದು ಹೇಳಿದ ಐದು ವರ್ಷಗಳಲ್ಲಿ ನಮ್ಮ ತಂತ್ರಜ್ಞಾನ, ಪ್ರಯೋಗ ವಿಧಾನಗಳು ಬೆಳೆದು,

ಮಾಡಿದ ಹೊಸ ಪ್ರಯೋಗ ಇನ್ನಾವುದೋ ಕಾರಣವನ್ನು ತೋರಿಸಬಹುದು. ಇಲ್ಲಿ 'ಕಾರಣ' ಎಂದು ಗುರುತಿಸುವ ಅಂಶಗಳು ಎಷ್ಟೋ ಸಲ ನಮ್ಮ, ಅಂದರೆ ಮನುಷ್ಯನ ನಿಯಂತ್ರಣಕ್ಕೆ ಒಳಪಡದ ಸಂಗತಿ ಎನ್ನುವುದು ಗಮನೀಯ. ಜ್ವರ ಬಂದಿದೆ ಎಂದು ಮದ್ದು ಕೊಡುವ ವೈದ್ಯ ಸರಿಯಾದ ಪರೀಕ್ಷೆ ಮಾಡಿದರೆ ಮಾತ್ರ ಅದು ಚಳಿಜ್ವರವೋ ಹಂದಿಜ್ವರವೋ ಎಂದು ಗುರುತಿಸಬಲ್ಲ. ಕ್ಯಾನ್ಸರ್ ಬರಲು ನಮ್ಮೊಳಗಿನ ಜೀವಕೋಶಗಳು ಅನಿಯಂತ್ರಿತವಾಗಿ ಬೆಳೆಯುವುದು ಕಾರಣ ಎನ್ನುವುದು ನಮಗೆ ಗೊತ್ತಿದೆ. ಅನೇಕ ಪರೀಕ್ಷೆ – ಪ್ರಯೋಗಗಳಿಂದ ಸಾಬೀತಾದ ಸತ್ಯ ಇದು. ಆದರೆ, ಆ ಜೀವಕೋಶಗಳಿಗೆ ಹಾಗೆ ಬೆಳೆಯುವ ಹುಚ್ಚು ಹತ್ತಿಸುವ ಅಂಶ ಯಾವುದು? ವೈದ್ಯಕೀಯ ವಿಜ್ಞಾನದ ಎಲ್ಲ ಸಲಕರಣೆಗಳನ್ನು ಬೆನ್ನಮೇಲೆ ಹೊತ್ತುಕೊಂಡು ಪ್ರಯೋಗಕ್ಕಿಳಿದರೂ ಆ 'ಕಾರಣ' ಪತ್ತೆಯಾಗಿಲ್ಲ. ಅಲ್ಲಿಯವರೆಗೆ ನಾವು ಕೊಡುತ್ತ ಹೋಗುವ ಕಾರಣಗಳು ಪೂರ್ತಿ ಸತ್ಯವೋ ಅರ್ಧ ಸತ್ಯವೋ ಇರಬಹುದು. ಆದರೆ ಒಂದಂಶವನ್ನು ಇಲ್ಲಿ ಗಮನಿಸಬೇಕು: ವೈದ್ಯಕೀಯಕ್ಕೆ ಕಾರ್ಯಕಾರಣ ತರ್ಕವನ್ನು ಬೆನ್ನುಹತ್ತಿ ಹೋಗುವ ಛಲ ಇದೆ; ಆ ತರ್ಕದ ನಿರಾಕರಣೆ ಇಲ್ಲ.

ಶಾಸ್ತ್ರ ಸರಿಯಾದ ಸಂಶೋಧನೆಯ ಮೂಲಕ ಮೌಲ್ಯಯುತ ನಿರ್ಣಯಗಳನ್ನು ಕೊಟ್ಟರೆ ಅದನ್ನು ವಿಜ್ಞಾನ ಎಂದೂ ಮಾನ್ಯ ಮಾಡಬಹುದು. ಇನ್ನು ಕೆಲವೊಂದು ಜ್ಞಾನಶಾಖೆಗಳು ಶಾಸ್ತ್ರವಾಗಿ ಹುಟ್ಟಿ ಮುಂದೆ ವಿಜ್ಞಾನವಾಗಿ ಬೆಳೆಯುತ್ತವೆ. ಆಯುರ್ವೇದ ಒಂದು ಉದಾಹರಣೆ. ಅದಕ್ಕೆ ಶಾಸ್ತ್ರಗ್ರಂಥಗಳ ಬೆಂಬಲ ಇದೆ; ಆದರೆ ಅಷ್ಟಕ್ಕೇ ತನ್ನನ್ನು ಸೀಮಿತಗೊಳಿಸದೆ ಹೊಸ ಪದ್ಧತಿ, ಪ್ರಯೋಗಗಳ ಮೂಲಕ ಆಯುರ್ವೇದ ಬೆಳೆಯುತ್ತಿದೆ. ಜ್ಯೋತಿಶ್ಶಾಸ್ತ್ರ ಇನ್ನೊಂದು ಉದಾಹರಣೆ. ಅದು ಮೊದಲು ಶಾಸ್ತ್ರವಾಗಿ ಹುಟ್ಟಿದಾಗ, ಅದರಲ್ಲಿದ್ದ ಎಷ್ಟೋ ಕಲ್ಪನೆಗಳು ತಪ್ಪಾಗಿದ್ದವು. ಭೂಮಿಯೇ ವಿಶ್ವಕ್ಕೆ ಕೇಂದ್ರ ಎಂಬ ವಾದದ ಮೇಲೆಯೇ ಇಡೀ ಶಾಸ್ತ್ರ ನಿಂತಿತ್ತು ಎಂದಮೇಲೆ ಕೇಳಬೇಕೆ! ಆದರೆ, ಅದರಲ್ಲಿ ಆಳವಾದ ಕೆಲಸ ಮಾಡತೊಡಗಿದವರಿಗೆ ಈ ತೊಡಕುಗಳು ಗಮನಕ್ಕೆ ಬಂದು, ಹಳೆಯ ತತ್ವಗಳನ್ನು ಬದಲಿಸಿ ಹೊಸದನ್ನು ಅಳವಡಿಸಿ, ಒಟ್ಟಾರೆ ಇಡೀ ಶಾಸ್ತ್ರವನ್ನೇ ಥಿಸಿಯಸ್‌ನ ಹಡಗಿನಂತೆ ಮರುನಿರ್ಮಾಣ ಮಾಡಿದರು. ಅಲ್ಲದೆ, ತಮ್ಮ ಪ್ರತಿ ವೀಕ್ಷಣೆಗೂ ಕಾರ್ಯಕಾರಣದ ಬೆಂಬಲ ಇದೆಯೇ ಎನ್ನುವುದನ್ನು ಅವರು ಕೇಳುತ್ತ ಬಂದದ್ದರಿಂದ, ಆ ಕ್ಷೇತ್ರ ಹೆಚ್ಚು ವೈಜ್ಞಾನಿಕವಾಗಿ ಪರಿಪುಷ್ಟವಾಯಿತು. ಸೂರ್ಯಮಂಡಲಕ್ಕಷ್ಟೇ ಸೀಮಿತವಾಗಿದ್ದ ದೃಷ್ಟಿ ಗ್ಯಾಲಕ್ಸಿಗೆ, ಅದರಾಚೆ ವಿಶ್ವಕ್ಕೆ ಚಾಚಿತು. ಈಗಿನ ಜ್ಯೋತಿರ್ವಿಜ್ಞಾನ 'ಅನೇಕ ವಿಶ್ವಗಳ ಸಿದ್ಧಾಂತ'ದವರೆಗೆ ಹೋಗಿನಿಂತಿದೆ. ಆದರೆ, ವಿಜ್ಞಾನವನ್ನು ಆಶ್ರಯಿಸಿದ್ದರಿಂದ, ತಾನು ಹೇಳಿದ್ದನ್ನು 'ಸಿದ್ಧಾಂತ ಅಷ್ಟೇ. ಪರಮಸತ್ಯವಲ್ಲ' ಎಂದು ಹೇಳುವ ವಿವೇಚನೆ ಅದಕ್ಕೆ ಬಂದಿದೆ.

ಆಗಲೇ ಹೇಳಿದ ಹಾಗೆ, ಈ ನಿಟ್ಟಿನಲ್ಲಿ ನಾವು ಧರ್ಮವನ್ನು ಕೈಗೆತ್ತಿಕೊಂಡರೆ ಅದನ್ನು 'ಅವಿಜ್ಞಾನ'ದ ತಕ್ಕಡಿಗೆ ಹಾಕಬೇಕಾಗುತ್ತದೆ. ಯಾಕೆಂದರೆ ಧರ್ಮ ಎನ್ನುವುದು ಸತ್ಯದ ಹುಡುಕಾಟಕ್ಕಿಂತಲೂ ಹೆಚ್ಚಾಗಿ ಮನುಷ್ಯ ಈ ಭೂಮಿಯ ಮೇಲೆ ಹೇಗೆ ಬದುಕಬೇಕು ಎನ್ನುವುದಕ್ಕೆ ಬೇಕಾದ ಚೌಕಟ್ಟನ್ನು ಹಾಕುವ ವ್ಯವಸ್ಥೆ. ಹಾಗೆ ಹಾಕಿದ ಕಟ್ಟುಪಾಡುಗಳನ್ನು ಆಯಾ ಧರ್ಮಗಳು ತಮ್ಮ ಶಾಸ್ತ್ರಗಳ ಮೂಲಕ ಜನರಿಗೆ ಉಪದೇಶದ ರೂಪದಲ್ಲಿ ಹೇಳಿ ಅನುಸರಿಸುವಂತೆ ನೋಡಿಕೊಂಡವು. ಈ ಕಟ್ಟುಪಾಡುಗಳಲ್ಲಿ ಎಷ್ಟನ್ನು ಪ್ರಾಚೀನರು ಕಾರ್ಯಕಾರಣ ಸಂಬಂಧದ ಬೆಳಕಲ್ಲಿ ಪರೀಕ್ಷೆಗೊಳಪಡಿಸಿ ಬರೆದಿದ್ದಾರೆ ಎನ್ನುವುದು ಪ್ರಶ್ನಾರ್ಹ ವಿಚಾರ. ಆದರೆ, ಯಾವುದೋ ಕಾಲದಲ್ಲಿ ಜನರಿಗೆ ಈ ಸಂಪ್ರದಾಯಗಳಿಗೂ ವಿಜ್ಞಾನದ ಗಾಳಿ ಹಾಯಿಸಬೇಕು ಎಂಬ ಆಸೆಯಾಗಿರಬೇಕು. ತಮ್ಮ ಧರ್ಮಗ್ರಂಥಗಳು ಹೇಳುವ ಒಂದೊಂದು ಸಾಲನ್ನೂ ವೈಜ್ಞಾನಿಕ ಎಂದು ಬಿಂಬಿಸಲು ಹೆಣಗತೊಡಗಿದರು. ಬಾಗಿಲಿಗೆ ಮಾವಿನ ತೋರಣ ಕಟ್ಟುವುದು ಒಳ್ಳೆಯದು; ಅದರಿಂದ ಸೊಳ್ಳೆಪಳ್ಳೆಯನ್ನು ದೂರ ಇಡಬಹುದು ಅಂದರು. ಚಿಕ್ಕಮಕ್ಕಳಿಗೆ ಮುಂಜಿ ಮಾಡಿಸುವುದು ಒಳ್ಳೆಯದು; ಅದರಿಂದ ಯೌವನದಲ್ಲಿ ಹಲವು ರೋಗಗಳಿಂದ ದೂರ ಇರಬಹುದು ಎಂದರು. ಏಕಪ್ರಕಾರವಾಗಿ ಮಂತ್ರವನ್ನು ತಾರಕಸ್ಥಾಯಿಯಲ್ಲಿ ಹೇಳುತ್ತ ಹೋದಾಗ ಹುಟ್ಟುವ ತರಂಗಗಳಿಂದ ಮಾನಸಿಕ ಶಕ್ತಿ ಬೆಳೆಯುತ್ತದೆ ಎಂದರು. ವಿಗ್ರಹಾರಾಧನೆ ಮಾಡುವುದರಿಂದ ಏಕಾಗ್ರತೆ ಹುಟ್ಟುತ್ತದೆಂದರು. ಮುಟ್ಟಾದ ಹುಡುಗಿಯನ್ನು ದೂರ ಇಡುವುದರಿಂದ ಸೋಂಕುರೋಗಗಳನ್ನು ತಡೆದು ಆರೋಗ್ಯ ಕಾಪಾಡಬಹುದೆಂದರು. ವರ್ಷಕ್ಕೊಮ್ಮೆ ತಿಂಗಳು ಪೂರ್ತಿ ಉಪವಾಸ ಇರುವುದು ದೇಹಾರೋಗ್ಯದ ದೃಷ್ಟಿಯಿಂದ ಒಳ್ಳೆಯದು ಎಂದರು. ಹೀಗೆ ತಮ್ಮ ಗ್ರಂಥಗಳಲ್ಲಿ ಬಂದದ್ದನ್ನು, ಬಾರದ್ದನ್ನೂ ಸೇರಿಸಿ ವಿಜ್ಞಾನದ ಕೊರಳುಪಟ್ಟಿಗೆ ಬಿಗಿದರು. ಇದನ್ನು ಯಾಕೆ, ಯಾರು, ಯಾವಾಗ ಮಾಡಿದರೆನ್ನುವ ಸಂಶೋಧನೆ ಶುರುಮಾಡಿದವರು ಯಾರೂ ಕೊನೆ ಮುಟ್ಟಿಲ್ಲವಾದ್ದರಿಂದ, ನಾವು ಅದಕ್ಕೆ ಇಲ್ಲಿಂದಲೇ ಕೈಮುಗಿದು ಮುಂದೆ ಹೋಗುವುದು ಒಳ್ಳೆಯದು. ಮೇಲೆ ಹೇಳಿದ ಎಲ್ಲವನ್ನೂ 'ಸಂಪ್ರದಾಯ–ನಂಬಿಕೆ–ಶ್ರದ್ಧೆ' ಎಂಬ ನೆಲೆಗಟ್ಟಿನಲ್ಲಿ ನೋಡುವುದಕ್ಕೆ ಏನು ತೊಂದರೆ ಎನ್ನುವುದಕ್ಕೆ ಉತ್ತರವಿಲ್ಲ. ಬಹುಶಃ ಧಾರ್ಮಿಕರು, ತಮ್ಮ ಸಂಪ್ರದಾಯಗಳಿಗೆ ವಿಜ್ಞಾನದ ಮೊಹರು ಇದ್ದರೆ ಒಳ್ಳೆಯದು ಎಂದು ಭಾವಿಸಿದ್ದಾರೋ ಏನೋ. ವಿಜ್ಞಾನ ಎನ್ನುವುದು ಎಲ್ಲಕ್ಕಿಂತ ಶ್ರೇಷ್ಠ; ಅದರ ನಿಕಷಕ್ಕೆ ನಮ್ಮ ತತ್ವಗಳನ್ನೂ ಒಡ್ಡಿಕೊಂಡಿದ್ದೇವೆ ಎನ್ನುವುದು, ಕಂಪೆನಿಗಳು ಐಎಸ್‌ಐ ಮಾರ್ಕನ್ನು ಒತ್ತಿಸಿಕೊಂಡಂತೆ – ಎಂದು ಜನ ತಿಳಿದಿದ್ದಾರೆ ಎನ್ನುವುದಂತೂ ಸ್ಪಷ್ಟ. ಟಿ.ವಿ.ಯಲ್ಲಿ ಬರುವ ಕವಡೆಶಾಸ್ತ್ರಿಗಳು, ಜ್ಯೋತಿಷಿಗಳು, ನ್ಯೂಮರಾಲಜಿ ಪಂಡಿತರು – ಎಲ್ಲರೂ ತಮ್ಮ ಶಾಸ್ತ್ರ ವೈಜ್ಞಾನಿಕ ಎಂದು ಬಿಂಬಿಸಲು ಹೆಣಗುವುದನ್ನು ನೋಡಿದಾಗ, ಜನರಿಗೆ ವಿಜ್ಞಾನದ ಬಗ್ಗೆ ಗುಟ್ಟಿನ ಪ್ರೇಮವಿರುವುದು ಕಾಣುತ್ತದೆ.

## ಕಲ್ಲು ಹೊಡೆಯುತ್ತಾರೆ



ನಾಮಧಾರಿಯೊಬ್ಬನು
ಅವನ ಧರ್ಮದ ಕುರಿತು
ಪ್ರಶಂಸಿಸಿದರೆ
ನನ್ನನ್ನು
ನಮಸ್ಕರಿಸುತ್ತಾನೆ!

ಗಡ್ಡಧಾರಿಯೊಬ್ಬನು
ಅವನ ಧರ್ಮದ ಕುರಿತು
ಕೊಂಡಾಡಿದರೆ
ನನ್ನನ್ನು
ಸಲಾಂ ಮಾಡುತ್ತಾನೆ!

'ಧರ್ಮನಿರಪೇಕ್ಷತೆ'ಯ ಬಗ್ಗೆ
ಮಾತಾಡಿದರೆ ಮಾತ್ರ
ಇಬ್ಬರೂ
ನನ್ನ
ಕಲ್ಲು ಹೊಡೆಯುತ್ತಾರೆ!

**ಅಂಬಾದಾಸ ವಡೆ**
ಬಾಗಲಕೋಟೆ

ಇರಲಿ, ನಮ್ಮ ಚರ್ಚೆ ಧರ್ಮ ಮತ್ತು ವಿಜ್ಞಾನದ ಅಂತರ್‌ಸಂಬಂಧಗಳ ಕಡೆಗೆ ಹೊರಳಿತ್ತು. ಧರ್ಮದಲ್ಲಿ ಬರುವ ಎಷ್ಟೋ ಆಚರಣೆಗಳನ್ನು ಕೇವಲ 'ನಂಬಿಕೆ–ಶ್ರದ್ಧೆ' ಎಂಬ ನೆಲೆಗಟ್ಟಿನಲ್ಲಿ ನೋಡುವುದಕ್ಕೆ ಯಾವ ತೊಂದರೆಯೂ ಇಲ್ಲ. ಮತ್ತು ಹಾಗೆ ನೋಡುವುದೇ ಸಾಧು ಕೂಡ. ಧರ್ಮಾಚರಣೆಯನ್ನು ವಿಜ್ಞಾನದ ಕೊರಳಿಗೆ ತಗಲುಹಾಕಹೋದಾಗ ನಮಗೆ ಮುಖ್ಯವಾಗಿ ಎದುರಾಗುವುದು 'ಕಾರ್ಯಕಾರಣ ಸಂಬಂಧ'ದ ಪ್ರಶ್ನೆ. ಉದಾಹರಣೆಗೆ, ಸ್ನಾನ ಮಾಡಿ ಸಂಧ್ಯಾವಂದನೆಗೆ ಕೂತ ವಟು ಗೋಪಿಚಂದನ ಧಾರಣೆ ಮಾಡುವುದು ಸಂಪ್ರದಾಯ. ಇದನ್ನು ಕೇವಲ ಧಾರ್ಮಿಕ ನೆಲೆಗಟ್ಟಿನಲ್ಲಿ ನೋಡಿದರೆ ಏನೂ ತೊಂದರೆಯಿಲ್ಲ. ಆದರೆ, ಅದಕ್ಕೆ ವೈಜ್ಞಾನಿಕ ಕಾರಣಗಳನ್ನು ಹುಡುಕಿ ತೆಗೆಯುವುದು ಅನವಶ್ಯ ಮಾತ್ರವಲ್ಲ ಅನಾರೋಗ್ಯಕರ ಚರ್ಚೆಗೆ ನಾಂದಿ ಹಾಡಿದಂತೆ. 'ಅವಿಜ್ಞಾನ' ಎಂದ ಮಾತ್ರಕ್ಕೆ ಅದು ಕೆಟ್ಟದ್ದು ಎಂದು ನಾವೇ ಸ್ವಯಂ ಆರೋಪ ಮಾಡಿಕೊಂಡಿರುವುದರಿಂದ ಹೀಗಾಗಿದೆ ಎನ್ನಬಹುದೇನೋ. ಮಂಗಳ ಗ್ರಹಕ್ಕೆ ರಾಕೆಟ್ ಕಳಿಸುವ ವಿಜ್ಞಾನಿಗಳು ತಿರುಪತಿ ದೇವರಿಗೆ ಚಿನ್ನದ ರಾಕೆಟ್ ಸಮರ್ಪಿಸಿದ ಸುದ್ದಿಯನ್ನೂ ನಾವು ಇದೇ ನೆಲೆಯಲ್ಲಿ ನೋಡಬೇಕಾಗುತ್ತದೆ. ವಿಜ್ಞಾನಿ ತಿರುಪತಿ ದೇವಸ್ಥಾನಕ್ಕೆ ಹೋಗುವುದು, ಪೂಜೆ ಮಾಡಿಸುವುದು, ಮುಡಿ ಕೊಡುವುದು ಅವನ ಮನಸ್ಸಿನ ಸಮಾಧಾನಕ್ಕೆ ತಾನೆ? ವಿಜ್ಞಾನಿಯಾದ ಮಾತ್ರಕ್ಕೆ ಅವನು ತನ್ನ ನಂಬಿಕೆಗಳನ್ನು–ಶ್ರದ್ಧೆ, ಆಚರಣೆಗಳನ್ನು ಬಲಿ ಕೊಡಬೇಕೆಂದೇನೂ ಇಲ್ಲವಲ್ಲ. ಇಷ್ಟಕ್ಕೂ ದೇವರು ಎಂಬ ಕಲ್ಪನೆಯೇ ವಿಜ್ಞಾನಕ್ಕೆ ಅತೀತವಾದದ್ದು. ಈ ಲೇಖನದ ಪ್ರಾರಂಭದಲ್ಲಿ ಹೇಳಿದಂತೆ, ದೇವರ ಅಸ್ತಿತ್ವವನ್ನು ನಂಬುವುದು ಅಥವಾ ನಿರಾಕರಿಸುವುದು ವಿಜ್ಞಾನದ ಕರ್ತವ್ಯವೇನಲ್ಲ. ರಾಕೆಟ್ ಹಾರಿಸುವ ಮೊದಲು ಕಾಶಿವಿಶ್ವನಾಥನಿಗೆ ಕಾಯಿ ಒಡೆಸಿಕೊಂಡು ಬರುವುದು ಕೇವಲ ನಂಬಿಕೆಯ ಪ್ರಶ್ನೆ. ಆದರೆ, ರಾಕೆಟ್‌ನಲ್ಲಿ ಪೆಟ್ರೋಲ್ ಬದಲು ಗಂಗಾತೀರ್ಥ ತುಂಬಿಸಿ, ದೇವರೇ ಹಾರಿಸಿಯಾನು ಎಂದು ಕಾಯುವುದು ವಿಜ್ಞಾನದ ಅಪಹಾಸ್ಯ ಮತ್ತು ಮೂರ್ಖತನ.

ವಿಜ್ಞಾನ–ಅವಿಜ್ಞಾನಗಳನ್ನು ನೋಡಿದ ನಾವು ಮೌಢ್ಯ ಎಂದರೇನೆಂದು ನೋಡೋಣ. ಮಳೆಗಾಗಿ ಕಪ್ಪೆ ಮದುವೆ ಮಾಡುವುದು – ಮೌಢ್ಯ. ಯಾಕೆಂದರೆ ಅದು ವಿಜ್ಞಾನದ ಯಾವೊಂದು ಪರೀಕ್ಷೆಯನ್ನೂ ಪಾಸು ಮಾಡುವುದಿಲ್ಲ. ಮಳೆ ಬರುವುದಕ್ಕೂ ಕಪ್ಪೆಗೆ ಮದುವೆ ಮಾಡುವುದಕ್ಕೂ ಕಾರ್ಯಕಾರಣ ಸಂಬಂಧ ಎಲ್ಲಿದೆ–ಎನ್ನುವ ಮೊದಲ ಪ್ರಶ್ನೆಯಲ್ಲೇ ಈ ಪದ್ಧತಿ ನಿರುತ್ತರವಾಗುತ್ತದೆ, ಅಲ್ಲವೆ? ವಾಸ್ತು – ಇನ್ನೊಂದು ಮೌಢ್ಯ. ಒಂದು ಮನೆಯ ಕಿಟಕಿ, ಬಾಗಿಲು, ಗೋಡೆಗಳನ್ನು ವ್ಯವಸ್ಥಿತವಾಗಿ; ಗಾಳಿಬೆಳಕಿನ ದಿಕ್ಕುಗಳನ್ನು ನೋಡಿಕೊಂಡು ಕಟ್ಟಿದರೆ, ಮನೆಯಲ್ಲಿ ಹೆಚ್ಚು ಖುಷಿಯಿಂದ ಇರಬಹುದು ಎನ್ನುವುದು ಸರಿ; ಆದರೆ, ದಿಕ್ಕುಗಳು ಮನುಷ್ಯನ ಜೀವನದ ಪ್ರಮುಖ ಘಟ್ಟಗಳನ್ನು ನಿರ್ಧರಿಸುತ್ತವೆ, ಅವನ ಲಾಭ–ನಷ್ಟಕ್ಕೆ ಕಾರಣವಾಗುತ್ತವೆ ಎನ್ನುವುದಕ್ಕೆ ಕಾರ್ಯಕಾರಣ ಸಂಬಂಧ ಇಲ್ಲ. ಅಲ್ಲದೆ ವಾಸ್ತು ವಿಜ್ಞಾನವೇ ಆಗಿದ್ದ ಪಕ್ಷದಲ್ಲಿ, ಅದನ್ನು ಅನುಸರಿಸಿದ ನೂರಕ್ಕೆ ನೂರು ಮಂದಿಯೂ ಸುಖಸಂತೋಷದಿಂದ ಬಾಳ್ವೆ ಮಾಡಬೇಕಿತ್ತು. ತನ್ನ ಹೇಳಿಕೆಗಳಿಗೆ ವೈಜ್ಞಾನಿಕ ಆಧಾರ ಇದೆ ಎಂದು ಹೇಳಿಕೊಂಡಮೇಲೂ ಪ್ರಯೋಗದಲ್ಲಿ ತಪ್ಪು ಫಲಿತಾಂಶಗಳನ್ನು ಕೊಡುವ ಶಾಸ್ತ್ರವನ್ನು ಮೌಢ್ಯ ಎನ್ನಬೇಕಾಗುತ್ತದೆ. ಇಲ್ಲಿ ಇನ್ನೊಂದು ಸೂಕ್ಷ್ಮವನ್ನು ಗಮನಿಸಬಹುದು. ತಾನು ಹುಲುಸಾಗಿ ಬೆಳೆಯಲು ಬಂದಣಿಕೆಗೆ ಅರಳಿಯ ಆಸರೆ ಬೇಕಾಗುವಂತೆ, ಕೆಲವು ಮೌಢ್ಯಗಳು ಶುದ್ಧವಿಜ್ಞಾನವನ್ನು ಆಧರಿಸಿಕೊಂಡು ತಮ್ಮ ಬೇಳೆ ಬೇಯಿಸಲು ನೋಡುತ್ತವೆ. ಫಲಜ್ಯೋತಿಷ್ಯ, ವಾಸ್ತು, ಫೆಂಗ್‌ಶುಯಿ, ರೇಖಿ, ಕಾಸ್ಮಿಕ್ ಹೀಲಿಂಗ್, ಸಮ್ಮೋಹಿನಿ ಚಿಕಿತ್ಸೆ, ಯೋಗದ ಹಲವಾರು ಹೊಸ ರೂಪಾಂತರಗಳು – ಇವು ಈ ಪಟ್ಟಿಯಲ್ಲಿ ಬರುತ್ತವೆ. ಭೂಮಿಯಿಂದ ಲಕ್ಷಾಂತರ ಮೈಲಿ ದೂರದಲ್ಲಿರುವ ಗ್ರಹಗಳು, ತಾರೆಗಳು ಮನುಷ್ಯನ ದೈನಂದಿನ ಆಗುಹೋಗುಗಳ ಮೇಲೆ ಪರಿಣಾಮ ಬೀರುತ್ತವೆ ಎನ್ನುವುದು, ಮನೆಯಲ್ಲಿ ಅಲ್ಲಲ್ಲಿ ಕಟ್ಟುವ ಸಣ್ಣಪುಟ್ಟ ವಸ್ತುಗಳು ಜೀವನದ ಮಹತ್ತರ ಘಟನೆಗಳಿಗೆ ಕಾರಣವಾಗುತ್ತವೆ ಎನ್ನುವುದು, ಮೋಡಿ ಮಾಡಿ ವ್ಯಕ್ತಿಗೆ ಹಿಂದಿನ ಜನ್ಮದ ನೆನಪು ಹುಟ್ಟುವಂತೆ ಮಾಡಬಹುದು ಎನ್ನುವುದು, ಚಿಕಿತ್ಸೆ ಇಲ್ಲದೆ ಮಾರಣಾಂತಿಕ ರೋಗಗಳನ್ನು ಗುಣಪಡಿಸಬಹುದು ಎನ್ನುವುದು – ಇವೆಲ್ಲ ಕಾರ್ಯಕಾರಣ ಸಂಬಂಧಕ್ಕೆ ಪೂರ್ತಿ ವಿರುದ್ಧವಾದ ಚಿಂತನೆಗಳಾದ್ದರಿಂದ ಅವು 'ವೈಜ್ಞಾನಿಕ' ಎಂಬ ಪಟ್ಟಿಯಲ್ಲೂ ಬರುವುದಿಲ್ಲ, ನಾವು ಈ ಲೇಖನದಲ್ಲಿ ಬಳಸಿದ 'ಅವೈಜ್ಞಾನಿಕ' ಎಂಬ ಗುಂಪಲ್ಲೂ ಬರುವುದಿಲ್ಲ. ಅವನ್ನು ಮೌಢ್ಯ ಎಂದೇ ಕರೆಯಬೇಕಾಗುತ್ತದೆ.

ವಿಜ್ಞಾನಕ್ಕೂ ವೈಜ್ಞಾನಿಕ ಮನೋಭಾವಕ್ಕೂ ತುಂಬ ಹತ್ತಿರದ ನಂಟು. ನಾನು ಈ ಮೊದಲು ಹೇಳಿದ 'ವಿಜ್ಞಾನಿ'ಗಳಲ್ಲಿ ಈ ಮನೋಭಾವ ಅಂತರ್ಗತವಾಗಿರುತ್ತದೆ. ಬೇರೆಯವರು ಕೂಡ ತುಸು ಪರಿಶ್ರಮಪಟ್ಟರೆ ಇದನ್ನು ಬೆಳೆಸಿಕೊಳ್ಳಬಹುದು. ವೈಜ್ಞಾನಿಕ ಮನೋಭಾವ ಎಂದರೆ 'ಏಕೆ' ಎಂಬ ಪ್ರಶ್ನೆಗಳನ್ನು ಕೇಳುತ್ತ, ತರ್ಕಬದ್ಧ ಉತ್ತರಗಳನ್ನು ಅನ್ವೇಷಿಸುತ್ತ ಹೋಗುವ ನಿರಂತರ ಪ್ರಕ್ರಿಯೆ. ಇಲ್ಲಿ ಸತ್ಯಕ್ಕಲ್ಲದೆ ಇನ್ನಾವುದಕ್ಕೂ ತಲೆಬಾಗುವ, ಶರಣಾಗತರಾಗುವ ಅಗತ್ಯವಿಲ್ಲ. ಆದ್ದರಿಂದಲೇ ವಿಜ್ಞಾನದಲ್ಲಿ 'ನಾನು ಹೇಳಿದ್ದಷ್ಟೇ ಸತ್ಯ' ಎಂದು ಹೇಳುವ ಪ್ರವಾದಿಗಳಿಲ್ಲ; ಹೀಗೇ ನಡೆಯಬೇಕು ಎಂದು ಕಟ್ಟುಪಾಡು ವಿಧಿಸುವ ಧರ್ಮಗ್ರಂಥ ಗಳಿಲ್ಲ. ತರ್ಕವಲ್ಲದೆ ಇನ್ನಾವ ಸಿದ್ಧಾಂತಕ್ಕೂ ಮನ್ನಣೆಯಿಲ್ಲ. ಹಾಗೆಂದು ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡವನು ಧಾಡಸಿತನದಿಂದ ವರ್ತಿಸಬೇಕೆಂದಿಲ್ಲ. ಎಷ್ಟೋ ಸಂಗತಿಗಳು ಗೊತ್ತಿಲ್ಲದ್ದನ್ನು ಒಪ್ಪಿಕೊಳ್ಳುವ ನಿಗರ್ವವೂ ಆತನಿಗೆ ಇರಬೇಕು. ಉದಾಹರಣೆಗೆ, ವಿಶ್ವದ ಬಹುಪಾಲನ್ನು ಆವರಿಸಿರುವ 'ಬ್ಲ್ಯಾಕ್ ಮ್ಯಾಟರ್' ಏನೆಂದೇ ಇದುವರೆಗೆ ವಿಜ್ಞಾನಿಗಳಿಗೆ ಗೊತ್ತಾಗಿಲ್ಲ. ಇಡೀ ಕಾಸ್ಮೋಸ್‌ನ ಕೇವಲ ೫% ಮಾತ್ರ ಇದುವರೆಗೆ ಕಂಡಿದೆ. ಅದನ್ನು ಒಪ್ಪಿಕೊಳ್ಳಲು ಯಾವ ವಿಜ್ಞಾನಿಯೂ ನಾಚಿಕೆ ಪಡುವುದಿಲ್ಲ. ವೈಜ್ಞಾನಿಕ ಮನೋಭಾವ ಕೊಡುವ ಸಂಸ್ಕಾರ ಇದು.

ವೈಜ್ಞಾನಿಕ ದೃಷ್ಟಿಯನ್ನು ಯಾಕೆ ಬೆಳೆಸಿಕೊಳ್ಳಬೇಕು? ಅದಿಲ್ಲದೆ ಹೋದರೆ ಏನು ನಷ್ಟ? ಎಂದು ಕೇಳುವವರಿಗೆ ಫೈಯ್ನ್‌ಮನ್ ಎಂಬ ಅಮೆರಿಕನ್ ಭೌತವಿಜ್ಞಾನಿ ಒಂದು ಸುಂದರ ಉತ್ತರ ಕೊಟ್ಟಿದ್ದಾನೆ. ರಸಿಕನೊಬ್ಬ ಅವನೆದುರು ಒಂದು ಗುಲಾಬಿ ಹಿಡಿದು, 'ನೋಡಯ್ಯ, ಎಷ್ಟು ಚೆನ್ನಾಗಿದೆ ಈ ಹೂವು! ಅದರ ಸೌಂದರ್ಯ ಆಸ್ವಾದಿಸಲಿಕ್ಕೂ ಕವಿ ಹೃದಯ ಬೇಕು. ಆದರೆ ನೀವು ವಿಜ್ಞಾನಿಗಳೋ ಅದರ ಪಕಳೆಗಳನ್ನು ಕಿತ್ತು ಸೂಕ್ಷ್ಮದರ್ಶಕದಡಿ ಇಟ್ಟು ಬಗೆಬಗೆಯ ಪ್ರಯೋಗ ಮಾಡಿ ಕೊಂದೇಬಿಡುತ್ತೀರಿ! ಎಂಥ ಅರಸಿಕರಪ್ಪ ನೀವು!' ಎಂದನಂತೆ. ಆಗ ಫೈಯ್ನ್‌ಮನ್ ಹೇಳುತ್ತಾನೆ: 'ಗುಲಾಬಿ ಸುಂದರವಾಗಿದೆ ಎಂಬ ಅಂಶ ನನಗೂ ಗೊತ್ತಾಗುವಂಥದ್ದೇ. ಒಂದು ಗುಲಾಬಿಯ ಚೆಲುವನ್ನು ಮೆಚ್ಚುವಷ್ಟು ರಸಿಕತೆ ಪ್ರತಿಯೊಬ್ಬನಿಗೂ ಇದ್ದೇ ಇದೆ. ಆದರೆ, ವಿಜ್ಞಾನಿಯಾಗಿ ನಾನು ಕಾಣುವ ಸೌಂದರ್ಯ ಇನ್ನೂ ಹೆಚ್ಚಿನದು. ನಾನು ಆ ಪಕಳೆಗಳ ವಿನ್ಯಾಸ ನೋಡುತ್ತೇನೆ. ಪುಂಕೇಸರ ಹುಟ್ಟಿ ನಿಂತ ಬಗೆಯನ್ನು ಗಮನಿಸುತ್ತೇನೆ. ಪರಾಗಸ್ಪರ್ಶ ಎಂಬ ಸಂತಾನಕ್ರಿಯೆಗಾಗಿ ಪ್ರಕೃತಿ ಎಂಥ ಆಟಗಳನ್ನು ಆಡುತ್ತಲ್ಲ ಎಂದು ವಿಸ್ಮಯಗೊಳ್ಳುತ್ತೇನೆ. ನಿಜಕ್ಕಾದರೆ, ಗುಲಾಬಿಯ ಎಸಳ ಮೇಲೆ ಕೂರುವ ದುಂಬಿಗೆ ಹೂವಿನ ಕೆಂಪು ಗಮನಕ್ಕೆ ಬರುವುದಿಲ್ಲ. ಯಾಕೆಂದರೆ ಅದಕ್ಕೆ ಬಣ್ಣಗುರುಡು. ಆದರೂ ಈ ಗಿಡ ಇಷ್ಟೊಂದು ವರ್ಣಮಯ ಹೂ ಬಿಟ್ಟಿದ್ದು ಯಾಕೆ? ಗಿಡಕ್ಕೂ ಸೌಂದರ್ಯಾಪೇಕ್ಷೆ ಇರಬಹುದೆ? ಎಂದು ಚಕಿತನಾಗುತ್ತೇನೆ. ಇವೆಲ್ಲವೂ ಸೌಂದರ್ಯದ ವಿವಿಧ ಆಯಾಮಗಳೇ. ಇವನ್ನು ಯೋಚಿಸಲು ಕೇವಲ ರಸಿಕಹೃದಯ ಇದ್ದರೆ ಸಾಲದು, ವಿಜ್ಞಾನಿಯ ದೃಷ್ಟಿಯೂ ಇರಬೇಕು.' ವೈಜ್ಞಾನಿಕದೃಷ್ಟಿ ಮನುಷ್ಯನನ್ನು ಹೆಚ್ಚು ಮಾನವೀಯವಾಗಿ ಮಾಡುತ್ತದೆ ಎಂಬ ಕಾರಣಕ್ಕಾಗಿಯಾದರೂ ಅದನ್ನು ಬೆಳೆಸಿಕೊಳ್ಳಬೇಕು!

**ರೋಹಿತ್ ಚಕ್ರತೀರ್ಥ**
ಫ್ಲ್ಯಾಟ್ ನಂ. ೧೪೯, ಬ್ಲಾಕ್ ೧೯, ಜೀವನ್‌ಮಿತ್ರ ಅಪಾರ್ಟ್‌ಮೆಂಟ್
೯ನೇ ಅಡ್ಡರಸ್ತೆ, ೧ನೇ ಫೇಸ್, ಜೆ. ಪಿ. ನಗರ, ಬೆಂಗಳೂರು – ೫೬೦ ೦೭೮

## ಹೊಸ ಓದು



### ನಡೆದೂ ಮುಗಿಯದ ಹಾದಿ (ಕವನ ಸಂಕಲನ)

*ಮಾರುತಿ ದಾಸಣ್ಣವರ*

**ಪುಟ : ೮೮ ಬೆಲೆ : ರೂ. ೬೫**

**ವಿಘ್ನೇಶ್ವರ ಪ್ರಕಾಶನ,** ಇಲವಾಲ

*ಮಾರುತಿ ದಾಸಣ್ಣವರ ಅವರು ಹೊಸ ಬಗೆಯ ಆಲೋಚನಾ ಕ್ರಮವನ್ನು ಅಳವಡಿಸಿ ಕೊಂಡಿರುವ ಸೂಕ್ಷ್ಮ ಸಂವೇದನೆಯ ಕವಿ. ಸದಾ ತಮ್ಮೊಳಗೊಂದು ಏಕಾಂತ ವನ್ನು ಸೃಷ್ಟಿಸಿಕೊಂಡು; ಈ ಲೋಕದ ವಿದ್ಯಮಾನಗಳಿಗೆ ಮುಖಾಮುಖಿಯಾಗುತ್ತಲೇ ಧ್ಯಾನಸ್ಥ ಸ್ಥಿತಿ ತಲುಪಿ, ಆ ಮೂಲಕವೇ ಕವಿತೆಗಳನ್ನು ರಚಿಸುವ ಕಲೆ ಗೊತ್ತಿರು ವವರು. ಇವರು, ತಮ್ಮ 'ನಡೆದೂ ಮುಗಿಯದ ಹಾದಿ' ಕವನ ಸಂಕಲನದಲ್ಲಿನ ಕವಿತೆಗಳಲ್ಲಿ, ಇಂದಿನ ಆಧುನಿಕ ಜಗತ್ತಿನಲ್ಲಿ ನಮ್ಮ ನೆಲದ ಒಂದು ಕಾಲದ ಸಂಸ್ಕೃತಿ – ಸಂಪ್ರದಾಯಗಳು ಹೇಗೆ ಕಳೆದುಹೋಗುತ್ತಿವೆ ಎಂಬುದರ ಬಗ್ಗೆಯೂ, ಹಣ ಮತ್ತು ಅಧಿಕಾರಗಳೆರಡೇ ಈ ವಿಶ್ವವನ್ನು ಆಳುತ್ತಿರುವ ಈ ಹೊತ್ತಿನಲ್ಲಿ ಇಂಥ ಕ್ರಿಯೆಗಳ ಮೂಲಕವೂ ಸಹ ಮನುಷ್ಯ ಸಂಬಂಧಗಳು ಹೇಗೆ ಶಿಥಿಲ ಗೊಳ್ಳುತ್ತವೆ ಎಂಬುದನ್ನೂ ಅನಾವರಣ ಮಾಡುತ್ತಾರೆ. ಹಾಗೆಯೇ, ಶ್ರೇಣೀಕೃತ ವ್ಯವಸ್ಥೆಯಲ್ಲಿ, ಮನುಷ್ಯ ನಿರ್ವಹಿಸು ತ್ತಿರುವ ಕುಲವೃತ್ತಿಗಳ ದೆಸೆ ಯಿಂದಾಗಿಯೇ ಬದುಕಿನಲ್ಲಿ ಹಲವು ವೇಷಗಳನ್ನು ಧರಿಸಲೇಬೇಕಾದ ಅನಿವಾರ್ಯತೆ ಯನ್ನು ವಿವಿಧ ನೆಲೆಯಲ್ಲಿ ಅರ್ಥೈಸುತ್ತ ಹೋಗುತ್ತಾರೆ. ಈ ಮೂಲಕ ಜಾತಿರಹಿತ ವ್ಯವಸ್ಥೆಯ ಅನಿವಾರ್ಯತೆ ಈ ಹೊತ್ತಿನ ತುರ್ತು – ಎಂಬ ಆಶಯವನ್ನು ಈ ಸಂಕಲನದ ಕವಿತೆಯೊಂದರ ಮೂಲಕ ವ್ಯಕ್ತಪಡಿಸುತ್ತಾರೆ. ಹೀಗೆ, ಕಾವ್ಯವನ್ನು ತಮ್ಮ ಅನುಭವದ ಮೂಲಕವೇ ಅನಾವರಣ ಮಾಡುವ ಕವಿ ಮಾರುತಿಯವರು ಓದುಗನನ್ನು ಗಾಢವಾಗಿಯೂ, ಆರ್ದ್ರವಾಗಿಯೂ ತಟ್ಟುವಂಥ ಕವಿತೆಗಳನ್ನು ಈ ಸಂಕಲನದಲ್ಲಿ ಕಟ್ಟಿಕೊಟ್ಟಿದ್ದಾರೆ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ ಜಿಲ್ಲೆ*

### ವಿಮಾನ ವಿಜ್ಞಾನ

*ಜಿ. ಶ್ರೀನಿವಾಸಮೂರ್ತಿ*

**ಪುಟ : ೯೬** **ಬೆಲೆ : ರೂ. ೭೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಇದು ವಿಮಾನದ ತಂತ್ರಜ್ಞಾನವನ್ನು ಮಕ್ಕಳಿಗೆ – ಮುಖ್ಯವಾಗಿ ಪ್ರೌಢಶಾಲೆ ಮತ್ತು ಕಾಲೇಜುಗಳ ವಿದ್ಯಾರ್ಥಿಗಳಿಗೆ ಪರಿಚಯಿಸುವ ಸಚಿತ್ರ – ಸರಳ ಪುಸ್ತಕ. ಆಗಸದಲ್ಲಿ ಹಾರುವ ಹಕ್ಕಿಗಳನ್ನು ನೋಡಿ ಪುಳಕಿತನಾಗಿ ತನಗೆ ರೆಕ್ಕೆಗಳಿಲ್ಲವಲ್ಲಾ ಎಂದು ಪರಿತಪಿಸಿದರೂ ಮಾನವ ಸುಮ್ಮನೆ ಕೂರಲಿಲ್ಲ. ಭೂಮಿಯ ಗುರುತ್ವಾಕರ್ಷಣೆಯನ್ನು ಎದುರಿಸಿ ಹಗುರವಾಗಿ ಗಾಳಿಯಲ್ಲಿ ತೇಲುವುದು ಹೇಗೆಂದು ಯೋಚಿಸಿ ಪತ್ತೆ ಮಾಡಿದ. ಹಾರಲು ಪ್ರಾಥಮಿಕ ಪ್ರಕೃತಿಸಹಜ ಅಗತ್ಯಗಳೇನೆಂದು ಕಂಡುಹಿಡಿದು ಹಾರಾಟದ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಿದ. ಮುಂದೆ ರೈಟ್ ಸಹೋದರರು ಪ್ರಪ್ರಥಮ ಯಶಸ್ವಿ ಹಾರಾಟ ನಡೆಸಿದರು. ನಂತರ ಸಾಕಷ್ಟು ಪರಿಷ್ಕರಣೆಗಳೊಂದಿಗೆ ವಿಮಾನಗಳು ಮಾನವನ ಹಲವು ಅಗತ್ಯಗಳನ್ನು ಪೂರೈಸಿವೆ. ಹಾರಾಟದ ಹಲವು ತತ್ವಗಳನ್ನೊಳಗೊಂಡಂತೆ ವಿವಿಧ ವಿನ್ಯಾಸದ ಮಾದರಿಗಳು ಜಗತ್ತಿನಾದ್ಯಂತ ಇಂದು ಬಳಕೆಯಲ್ಲಿದ್ದು ಬಹೂಪಯೋಗಿಯಾಗಿ ಮಾನವನಿಗೆ ಉಪಕಾರಿಯಾಗಿವೆ. ವೈಮಾನಿಕ ಕ್ಷೇತ್ರ ವಿಸ್ತಾರವಾಗಿದ್ದು ಸುಖಪ್ರಯಾಣ – ಸರಕುಸಾಗಣೆ – ಯುದ್ಧವಿಮಾನಗಳೇ ಮುಂತಾಗಿ ಗೂಢಚರ್ಯೆಯನ್ನೂ ಒಳಗೊಂಡಂತೆ ಮಿಲಿಟರಿ ಕ್ಷೇತ್ರಗಳಲ್ಲೂ ಮಿಂಚಿವೆ. ಅವೆಲ್ಲವುಗಳ ಕಾರ್ಯವೈಖರಿ, ವಿನ್ಯಾಸ ಅದರ ವೈಜ್ಞಾನಿಕ ತಳಹದಿ ಹೇಗೆಂದು ಚಿತ್ರಗಳ ಸಹಿತ ವಿವರಣೆಯೊಂದಿಗೆ ಆಕರ್ಷಕ ಶೈಲಿಯಲ್ಲಿ ಈ ಪುಸ್ತಕ ರಚಿತವಾಗಿದೆ.*



### ವೈಜ್ಞಾನಿಕ ಮನೋವೃತ್ತಿ ಬೆಳೆಸಿಕೊಳ್ಳುವ ಬಗೆ

*ವಿವಿಧ ಲೇಖಕರು; ಸಂಪಾದಕರು : ಎಂ. ಅಬ್ದುಲ್ ರೆಹಮಾನ್ ಪಾಷ*

**ಪುಟ : ೭೬** **ಬೆಲೆ : ರೂ. ೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ದೇವರ – ಧರ್ಮದ ಹೆಸರಿನಲ್ಲಿ ಅವೈಜ್ಞಾನಿಕ ಮೂಢನಂಬಿಕೆಗಳನ್ನು ಜನರಲ್ಲಿ ಬಿತ್ತಿ ಸಮಾಜದ ಸ್ವಾಸ್ಥ್ಯ ಕೆಡಿಸುವ ಒಂದು ವರ್ಗ ಇಂದು ಮುಂಚೂಣಿಯಲ್ಲಿದೆ. ತನ್ಮೂಲಕ ತನ್ನ ಹಿತಾಸಕ್ತಿಯನ್ನೂ ಕಾಪಾಡಿಕೊಂಡಿದೆ. ಮೂಢನಂಬಿಕೆಗಳಿಗೇ ಇಷ್ಟೊಂದು ಪ್ರಚಾರ ಸಿಕ್ಕಿ ಜನರನ್ನು ಸೆಳೆದುಕೊಳ್ಳುವ ಶಕ್ತಿ ಇರುವುದಾದರೆ ಅದಕ್ಕೆ ಪ್ರಬಲ ಪ್ರತಿರೋಧ ನೀಡಿ ಜನರ ಮನಸ್ಸನ್ನು ವೈಜ್ಞಾನಿಕ ದೃಷ್ಟಿಕೋನದೆಡೆಗೆ ಸೆಳೆಯಲು ಅದೇಕೆ ಸಾಧ್ಯವಿಲ್ಲ ? ಖಂಡಿತ ಸಾಧ್ಯ. ವೈಜ್ಞಾನಿಕ ಮನೋವೃತ್ತಿ ಹೊಂದಲು ಜನರಿಗೆ ಮನವರಿಕೆಯಾಗುವಂತೆ ತಿಳಿಹೇಳುವುದು ಅತಿಮುಖ್ಯ. ಮಂತ್ರಕ್ಕೆ ಮಾವಿನಕಾಯಿ ಉದುರುವುದಿಲ್ಲವೆಂಬ ಸತ್ಯವನ್ನು ಸ್ಪಷ್ಟಪಡಿಸುತ್ತ ಜನರ ದೌರ್ಬಲ್ಯಗಳನ್ನು ದುರುಪಯೋಗಪಡಿಸಿಕೊಳ್ಳುವ ಶಕ್ತಿಗಳನ್ನು ಹಿಮ್ಮೆಟ್ಟಿಸುವಲ್ಲಿ ಕಾರ್ಯಪ್ರವೃತ್ತರಾಗಬೇಕು. ಆತ್ಮವಿಶ್ವಾಸದತ್ತ ಜನರನ್ನು ಪ್ರೇರೇಪಿಸಬೇಕು. ಇದು ಒಂದು ಆಂದೋಲನದ ರೂಪದಲ್ಲಿ ನಡೆದು ಪ್ರತಿಯೊಬ್ಬರೂ ಜವಾಬ್ದಾರಿಯಿಂದ ಕೈಜೋಡಿಸಿ ಮುಂದುವರಿದರೆ ಮಾತ್ರ ಇಲ್ಲಿ ಯಶಸ್ಸು. ಇಲ್ಲವಾದರೆ ಮುಗ್ಧ ಜನರು ಮೂಢ ಆಚಾರಗಳನ್ನೇ ನೆಚ್ಚಿಕೊಂಡು ಬಳಲುತ್ತಿರಬೇಕಾದೀತು. ಇಂಥ ಜಾಗೃತಿಯನ್ನು ಮೂಡಿಸುವ ಸಲುವಾಗಿ 'ಕರ್ನಾಟಕ ವೈಜ್ಞಾನಿಕ ಮನೋವೃತ್ತಿ ಆಂದೋಲನ' ಎಂಬ ಚಳವಳಿ ರೂಪದ ಕೆಲಸವೊಂದು ಪ್ರಾರಂಭವಾಗಿದೆ. ಅದಕ್ಕಾಗಿ ಇಲ್ಲಿನ ನಾಲ್ಕು ಲೇಖನಗಳನ್ನೊಳಗೊಂಡ ಈ ಕೃತಿಯಲ್ಲಿ ಜನರಿಗೆ ಮೂಢನಂಬಿಕೆ ಬದಲಿಗೆ ವೈಜ್ಞಾನಿಕ ದೃಷ್ಟಿಕೋನ ಬೆಳೆಸಿಕೊಳ್ಳಲು ಕರೆ ನೀಡಿದೆ.*

– ***ಇಂದಿರಾಕುಮಾರಿ,*** *ಯಶವಂತಪುರ, ಬೆಂಗಳೂರು – ೨೨*

### ಪರಿಸರಸ್ನೇಹಿ ಕೃಷಿ – ಕ್ಯೂಬಾ ಮಾದರಿ

*ಜೈಕುಮಾರ್*

**ಪುಟ : ೬೦ + ೪** **ಬೆಲೆ : ರೂ. ೨೦**

**ಚಿಂತನ ಪುಸ್ತಕ,** ನಂ. ೪೦೫, ೧೧ನೇ ಮುಖ್ಯರಸ್ತೆ, ೧ನೇ ಅಡ್ಡರಸ್ತೆ, ಡಾಲರ್ಸ್ ಕಾಲೋನಿ, ಜೆ. ಪಿ. ನಗರ ೪ನೇ ಫೇಸ್, ಬೆಂಗಳೂರು – ೫೬೦ ೦೭೮




*ಪ್ರತಿಕೂಲ ವಾತಾವರಣವನ್ನೂ ಅನುಕೂಲವಾಗಿಸಿಕೊಂಡು, ವಿಶ್ವಕ್ಕೆ ಕೃಷಿ ಅಭಿವೃದ್ಧಿಯ ಹೊಸ ಮಾದರಿಗಳನ್ನು ತೋರಿಸಿಕೊಟ್ಟ ಕೀರ್ತಿ ಕ್ಯೂಬಾ ದೇಶಕ್ಕೆ ಸಲ್ಲಬೇಕು. ಅಮೆರಿಕ ಎಂಬ ದೈತ್ಯ ದೇಶ ಕ್ಯೂಬಾ ಎಂಬ ಪುಟ್ಟ ಗುಬ್ಬಚ್ಚಿ ದೇಶದ ಮೇಲೆ ಆರ್ಥಿಕ ದಿಗ್ಬಂಧನ ಹೇರಿತ್ತು. ಮಿತ್ರ ದೇಶ ಸೋವಿಯತ್ ಒಕ್ಕೂಟ ಪತನವಾಗಿತ್ತು, ಆಮದು, ರಫ್ತು ವಹಿವಾಟನ್ನೇ ಕೈಬಿಡಬೇಕಾಯಿತು ಆ ಪುಟ್ಟ ದೇಶ. ಅಧ್ಯಕ್ಷ ಫಿಡೆಲ್ ಕ್ಯಾಸ್ಟ್ರೋ ನಾಯಕತ್ವದಲ್ಲಿ ಸ್ವಂತ ಕಾಲ ಮೇಲೆ ನಿಂತು ಸಾಧಿಸುವ ಛಲ ಹೊತ್ತರು ಆ ದೇಶದ ಜನ. ಕ್ಯೂಬಾ ಆರೋಗ್ಯ, ಕ್ರೀಡೆ, ಶಿಕ್ಷಣ ಕ್ಷೇತ್ರಗಳಲ್ಲಿ ವಿಶ್ವವೇ ಬೆರಗಾಗುವ ಸಾಧನೆಗಳನ್ನು ಮಾಡಿದೆ. ಆದರೆ ಕೃಷಿಕ್ಷೇತ್ರದಲ್ಲಿ ಅವರು ಮಾಡಿದ ಸಾಧನೆ ಬಹುತೇಕ ಜನರಿಗೆ ಗೊತ್ತಿಲ್ಲ. ಕೀಟನಾಶಕ, ರಾಸಾಯನಿಕ ಗೊಬ್ಬರಗಳ ಆಮದು ನಿಂತುಹೋದಾಗ ಸಾವಯವ ಕೃಷಿಗೆ ಒತ್ತುಕೊಟ್ಟು ಜೈವಿಕ ಗೊಬ್ಬರ ತಯಾರಿಸಿ, ಕೀಟಗಳ ನಿಯಂತ್ರಣಕ್ಕೆ ಇರುವೆಗಳನ್ನು ಬಳಸಿ, ಕೃಷಿ ಉತ್ಪಾದನೆಯ ಹೆಚ್ಚಳಕ್ಕೆ ತಮ್ಮ ಪಾರಂಪರಿಕ ಪದ್ಧತಿಗೆ ಹೊಸ ರೂಪ ಕೊಟ್ಟ ಅವರ ಪ್ರಯೋಗ ಅಧ್ಯಯನಯೋಗ್ಯವಾದ್ದು. ಭಾರತವನ್ನೂ ಒಳಗೊಂಡು ವಿಶ್ವದ ಬಹುತೇಕ ದೇಶಗಳು ಕಾರ್ಪೊರೇಟ್ ಕೃಷಿಗೆ, ರಾಸಾಯನಿಕ ಗೊಬ್ಬರ, ಕೀಟನಾಶಕಗಳ ಮಾರುಕಟ್ಟೆ ಕುತಂತ್ರಕ್ಕೆ ಬಲಿಯಾಗುತ್ತಿರುವ ಸಂದರ್ಭದಲ್ಲಿ, ಸಹಕಾರಿ ಕೃಷಿ ಹಾಗೂ ಜೈವಿಕ ತಂತ್ರಜ್ಞಾನದಿಂದ, ಪ್ರಭುತ್ವದ ಜನಪರ ನೀತಿಯಿಂದ ಕ್ಯೂಬಾ ಎಂಬ ಪುಟ್ಟ ದೇಶ ಜಾಗತೀಕರಣದ ರೋಗಗಳಿಂದ ಕೃಷಿಯನ್ನು ಮುಕ್ತಗೊಳಿಸುವ ದಾರಿ ತೋರಿಸಿದೆ. ಕೃಷಿ ಕ್ಷೇತ್ರದಲ್ಲಿ ಕ್ಯೂಬಾ ನಡೆಸಿದ ಪ್ರಯೋಗಗಳ ಮಾಹಿತಿಯನ್ನು 'ಪರಿಸರಸ್ನೇಹಿ ಕೃಷಿ – ಕ್ಯೂಬಾ ಮಾದರಿ' ಎಂಬ ಚಿಕ್ಕ ಪುಸ್ತಕದಲ್ಲಿ ಲೇಖಕ ಜೈಕುಮಾರ ಮಾಡಿಕೊಟ್ಟಿದ್ದಾರೆ. ಕೃಷಿ ಕುರಿತ ಕಾಳಜಿ ಇರುವವರು ಓದಲೇಬೇಕಾದ ಕೃತಿ ಇದು.*

– ***ಶ್ರೀಸುಮಿತ್ರಾಸುತ,*** *ಅಗಸಬಾಳ*

# ಅಜ್ಜಿಯ ಲಾಟೀನು

ಭೀತಿಯಿಂದ, ಅಲ್ಲಿಂದ ಓಡಿ ಬಂದೆ ನಾನು. ನನಗೆ ಹೋತನ ಸಾವು ಚುಂಕಿಯ ಸಾವಿನಷ್ಟೆ ಆಘಾತವನ್ನು ಉಂಟುಮಾಡಿತ್ತು. ತಲೆರಹಿತ ಹೋತ ಹೇಗೆ ಗಡಗಡ ನಡುಗುವುದೋ ಹಾಗೆ ಹೆಚ್ಚು ಕಡಿಮೆ, ಅದರಂತೆಯೇ, ನನಗೂ ಆಗಿ, ಭೀತಿಯಿಂದ ಅಜ್ಜಿಯ ತೊಡೆಯ ಮೇಲೆ ಅವುಚಿಕೊಂಡೆ. ಒಂದೇ ಸಮನೇ ಅಳುತ್ತಿದ್ದೆ. ಅಜ್ಜಿ ನನ್ನನ್ನು ಶಾಂತಗೊಳಿಸಲು ಸಾಹಸಪಟ್ಟಳಾದರೂ ನನ್ನಿಂದ ಅಳು ನಿಲ್ಲಿಸಲಾಗಲಿಲ್ಲ. ಆ ಭಯಾನಕ ಬಲಿಕೊಡುವ ದೃಶ್ಯವನ್ನು ನಾನು ಮರೆಯುವಂತೆ ಮಾಡಲು ಅವರೆಲ್ಲ ಪ್ರಯತ್ನಿಸಿದರು. ಪ್ರಾಯಶಃ ನಾನು ಚುಂಕಿಯನ್ನು ನೆನೆಸಿಕೊಂಡು ಅಳುತ್ತಿದ್ದೆನೇನೋ.




ನಾನಿ ಲಾಟೀನು. ಮಿಣುಕು ಹಳದಿ ಬೆಳಕಿನಲ್ಲಿ ನಾವು ಅಜ್ಜಿ ಹೇಳುವ ಕಥೆಗಳನ್ನು ಕೇಳುತ್ತಿದ್ದೆವು. ಹಾಸಿಗೆ ಬಳಿ ನೇತಾಡುತ್ತಿದ್ದ ಅದು, ಗೋಡೆಯ ಮೇಲೆ ನೆರಳಿನ ನಾಟ್ಯದ ಛಾಯೆಯನ್ನು ಚೆಲ್ಲಿತ್ತು. ಉದ್ದನೆಯ ಕಪ್ಪು ನೆರಳಿನ ನಾಟ್ಯದ ಆ ಛಾಯೆಗೆ ಹೆದರಿದ ನಾವು ಅಜ್ಜಿಯ ಮಗ್ಗುಲಲ್ಲಿ ಕವುಚಿಕೊಳ್ಳುತ್ತಾ ಕಥೆಯಲ್ಲಿ ಬರುವ ಕಥಾನಾಯಕನೊಂದಿಗೆ ಪೇರಿ ಕೀಳುತ್ತಿದ್ದೆವು. ರಾಕ್ಷಸನ ಆತ್ಮ ಗಿಳಿಯ ಕೊರಳಿನಲ್ಲಿದ್ದು ಅದು ಆಳ ಬಾವಿಯೊಂದರೊಳಗೆ ಹೋಗಿ ಸೇರಿಕೊಂಡಿತ್ತು. ಕಥೆ ಕೇಳಿದ ನಾವು ಚಿನ್ನದ ಪಂಜರದ ಬಾಗಿಲು ತೆರೆದು ಗಿಳಿಯ ಕೊರಳನ್ನು ನುಲುಚುತ್ತೇವೆಂದು ರಾಕ್ಷಸನಿಗೆ ಸವಾಲೆಸೆದೆವು. ಪ್ರತಿರಾತ್ರಿ ಇದೇ ಕಥೆಯನ್ನು ಅಜ್ಜಿ ನಮಗೆ ಹೇಳುತ್ತಿತ್ತು. ಲಾಟೀನು ಹಿಡಿದು ಮಿಣುಕುವ ಹಳದಿ ಬೆಳಕಲ್ಲಿ ಗಿಣಿ ಹುಡುಕುತ್ತಾ ಆ ಕಾರ್ಗತ್ತಲ ಆಳ ಬಾವಿಗೆ ನಾವು ಹೋದದ್ದೂ ಉಂಟು. ಅಜ್ಜಿಗೆ ಹಳೆ ಕಥೆ ಹೇಳಿ, ಹೇಳಿ ಬೇಸರವೂ ಆಗಿರಲಿಲ್ಲ. ಅಂತೆಯೇ ನಾವು ಗಿಣಿ ಕೊರಳನ್ನು ತಿರುಚಿ ನಿದ್ರೆಗೂ ಜಾರಿರಲಿಲ್ಲ ಈ ನಡುವೆ.

ಪ್ರತಿದಿನದ ಅರುಣೋದಯದೊಂದಿಗೆ ನಾವು ಹಿತ್ತಲಲ್ಲಿದ್ದ ಬಾವಿಯ ಕಡೆ ಓಡುತ್ತಿದ್ದೆವು. ಆ ಬಾವಿಯಿಂದ ಅಕ್ಕಪಕ್ಕದ ಬ್ರಾಹ್ಮಣರು ನೀರು ಸೇದುತ್ತಿದ್ದರು. ಆ ಆಳದ ಬಾವಿಯೊಳಗಿನ ರಾಕ್ಷಸನಿಗೆ ನಾವು ಶಾಪದ ಸುರಿಮಳೆ ಸುರಿಸಿದೆವು. ಅದರ ಕಿರು ಅಲೆಗಳು ನಮ್ಮ ಪ್ರತಿಬಿಂಬವನ್ನು ವಿರೂಪಗೊಳಿಸಿ ರಾಕ್ಷಸನ ಚಿತ್ರವನ್ನು ಮೂಡಿಸಿ ನಮ್ಮ ಧ್ವನಿಯನ್ನು ಮಾರ್ದನಿಸಿತು. ನಾವು ಬಾವಿಯೊಳಕ್ಕೆ ಕಪ್ಪೆಗಳನ್ನು ಹಿಡಿದೆಸೆಯುತ್ತಾ ರಾಕ್ಷಸನನ್ನು ನಿಂದಿಸುತ್ತಿದ್ದೆವು. ಇಡೀ ದಿನ ಬಾವಿ ಬಳಿ ಆಡುತ್ತ, ಕುಣಿಯುತ್ತ ಇದ್ದೆವು. ಕೆಲ ಸಮಯ ನಾವು ಗ್ರಾಮದೇವತೆಯ ಪ್ರತಿಮೆಗಳನ್ನು ಹಸಿಮಣ್ಣಿನಲ್ಲಿ ಮಾಡುತ್ತಿದ್ದೆವು. ಇನ್ನು ಕೆಲ ಸಮಯದಲ್ಲಿ ಚುಂಕಿ ಜೊತೆ ಸೇರಿ ಪೊದೆಗಳಲ್ಲಿ, ಮರಗಳಲ್ಲಿ ಇದ್ದ ಹಕ್ಕಿಗಳನ್ನು ಹಿಡಿಯುತ್ತಿದ್ದೆವು. ಚುಂಕಿಗೆ ಬಿದಿರಿನ ತುದಿಗೆ ಬೋನು ಸಿಕ್ಕಿಸಿ ಪಕ್ಷಿಗಳನ್ನು ಹಿಡಿದು ಅವುಗಳ ಕಾಲನ್ನು ಲಟ್ಟನೆ ಮುರಿವ ಕಲೆ ಚೆನ್ನಾಗಿ ಕರಗತವಾಗಿತ್ತು. ಹೀಗಾಗಿ ನಾವು ಪಕ್ಷಿಗಳನ್ನು ಸುಲಭವಾಗಿ ಹಿಡಿಯುತ್ತಿದ್ದೆವು. ನಾವೀರ್ವರು ಒಬ್ಬರಿಗೊಬ್ಬರು ಅನ್ಯೋನ್ಯವಾಗಿದ್ದೆವು. ಅಜ್ಜಿ ನಮ್ಮನ್ನು ಹುಡುಕಿಕೊಂಡು ಹಿತ್ತಲಿಗೆ ಬಂದಾಗ ನಾವು ಪೊದೆಗಳ ಮರೆಯಲ್ಲಿ ಬಚ್ಚಿಟ್ಟುಕೊಳ್ಳುತ್ತಿದ್ದೆವು. ಚುಂಕಿಯೊಂದಿಗೆ ಸೇರಿ ಆಟವಾಡುತ್ತಿದ್ದುದಕ್ಕೆ ಅಜ್ಜಿ ನನ್ನನ್ನು ಬಯ್ಯುತ್ತಿತ್ತು. ಚುಂಕಿ ಚಮ್ಮಾರ ಜಾತಿಗೆ ಸೇರಿದವಳು; ಅಂತ್ಯಜಳು. ಮೋಚಿಗಳ (ಚಮ್ಮಾರ) ಗುಡಿಸಲುಗಳು ನಾಲೆಯ ಪಕ್ಕ ಇದ್ದವು. ಅಜ್ಜಿ ಅಂತ್ಯಜರು ತಗ್ಗಿನ ಪ್ರದೇಶದಲ್ಲಿ ವಾಸಿಸುವವರೆಂದು ಹೇಳುತ್ತಿತ್ತು. ಇದು ಅವಳ ನಂಬಿಕೆ. ನಾವು ಸೂರ್ಯದೇವನಿಗೆ ಆಜ್ಯ ಅರ್ಪಿಸುವಾಗ ಅವರ ಹೊಲಸು ಮುಖ ನಮಗೆ ಎದುರಾಗಬಾರದೆಂದು ಅಜ್ಜಿ ಹೇಳುತ್ತಿತ್ತು. ನಾವು ನಿತ್ಯ ಮುಂಜಾನೆ ಚುಂಕಿಯೊಂದಿಗೆ ಬಾವಿ ಬಳಿಗೆ ಹೋಗುತ್ತಿದ್ದೆವು. ಒಂದು ದಿನ ಹೀಗೆ ಬಾವಿ ಬಳಿ ಆಟ ಆಡುತ್ತಿರಬೇಕಾದರೆ ಚುಂಕಿ ಬಾವಿಯೊಳಗೆ ಮುಳುಗಿಬಿಟ್ಟಳು. ಅದು ಹೇಗಾಯಿತೆಂದು ನನಗೆ ಸ್ಪಷ್ಟವಾಗಿ ನೆನಪಿಲ್ಲ. ಹಲವು



ಮೂಲ: **ನರೇಶ್ ಪಂಡಿತ್** (ಪಹರಿ ಭಾಷೆ)
ಕನ್ನಡಕ್ಕೆ : **ಸೊಂದಲಗೆರೆ ಲಕ್ಷ್ಮೀಪತಿ**

ವರುಷಗಳು ಉರುಳಿದವು. ಅಲ್ಲಿಂದೀಚೆಗೆ ಲಾಟೀನು ಅದೃಶ್ಯಗೊಂಡು ವಿದ್ಯುತ್ ದೀಪಕ್ಕೆ ಅದು ಜಾಗ ಬಿಟ್ಟುಕೊಟ್ಟಿದೆ. ನಮ್ಮ ಪರ್ವತ ಪ್ರದೇಶದ ಭೂದೃಶ್ಯವನ್ನು ವಿದ್ಯುತ್ ತಂತಿಗಳ ಜಾಲ ಅಡ್ಡಾದಿಡ್ಡಿಯಾಗಿ ಆವರಿಸಿದೆ. ಈಗಲೂ ಸಹ, ಮತ್ತೆ ಮತ್ತೆ ನನ್ನನ್ನೇ ನಾನು ಪ್ರಶ್ನಿಸಿಕೊಳ್ಳುವುದಿದೆ, ಅಂದಿನ ದುರ್ಘಟನೆ ಹೇಗಾಯ್ತೆಂದು.

ಅದರ ಒಂದು ಸಾಧ್ಯತೆ ಏನೆಂದರೆ ಬಾವಿಯೊಳಗಿನ ಆ ದುಷ್ಟ ರಾಕ್ಷಸನಿಗೆ ನಾವು ಕಲ್ಲು ಬೀರುತ್ತಿದ್ದೆವು. ಬಾವಿಯೊಳಗಿನ ನೀರಿನಲ್ಲಿ ಆಗೆಲ್ಲ ನಮ್ಮ ಪ್ರತಿಬಿಂಬ ಹೆಚ್ಚು ಹೆಚ್ಚಾಗಿ ಅಲ್ಲಾಡಿದಷ್ಟೂ ನಾವು ರಾಕ್ಷಸನಿಗೆ ಕೊಡುವ ಪೆಟ್ಟು ಅರ್ಧಂಬರ್ಧ ಸಫಲವಾಗಿದೆ ಎಂದು ಭಾವಿಸಿ ಮತ್ತಷ್ಟು ನಿಖರವಾದ ಗುರಿ ಇಟ್ಟು ಕಲ್ಲು ಬೀಸಿದರೆ ರಾಕ್ಷಸ ಸಾಯಬಹುದೆಂಬ ಭ್ರಮೆಯಲ್ಲಿ ಬಾವಿಯೊಳಕ್ಕೆ ತುಸು ಹೆಚ್ಚಾಗಿಯೇ ನಮ್ಮ ಶರೀರವನ್ನು ಬಾಗಿಸುತ್ತಿದ್ದೆವು ಕಲ್ಲು ಬೀಸಲು. ಈ ಬಗೆಯಲ್ಲಿ, ಪ್ರಾಯಶಃ ಚುಂಕಿ ಬಾವಿಯೊಳಕ್ಕೆ ಅವಶ್ಯಕತೆಗಿಂತ ತುಸು ಹೆಚ್ಚು ಬಾಗಿ ಜಾರಿರಬಹುದು! ಭಯಭೀತಳಾದ ನಾನು, ಅಜ್ಜಿ ಬಳಿಗೆ ಓಡಿದೆ. ತೀವ್ರ ಭಯಗ್ರಸ್ತಳಾದ ನಾನು ಅಜ್ಜಿಗೆ ಈ ಘಟನೆ ಬಾಯ್ಬಿಡಲಿಲ್ಲ. ಅಪರಾಹ್ನದ ವೇಳೆಗೆ ನನ್ನ ಚಿಕ್ಕಮ್ಮ ನೀರು ಸೇದಲು ಬಾವಿಗೆ ಹೋದಾಗ, ಚುಂಕಿ ಬಾವಿಯೊಳಗೆ ಮುಳುಗಿರುವುದನ್ನು ನೋಡಿದ್ದಾರೆ, ಕಿರುಚುತ್ತಾ ಓಡಿ ಬಂದಿದ್ದಾರೆ ಹಿಂದಕ್ಕೆ.

ಆದರೆ ಇಂದು ಕೂಡ, ಬೇರೊಂದು ಸಾಧ್ಯತೆ ಸಂಭವಿಸಿರಬಹುದೆಂಬ ಶಂಕೆ ನನ್ನನ್ನು ಕಾಡುತ್ತಿದೆ. ಅದೇ, ಬಹುಶಃ ನಾನೇ ಚುಂಕಿಯನ್ನು ಬಾವಿಗೆ ತಳ್ಳಿರಬಹುದೇ, ನನ್ನ ಆತ್ಮೀಯ ಜೊತೆಗಾತಿಯನ್ನು ನಾನೇಕೆ ಬಾವಿಗೆ ತಳ್ಳಿದೆ ಎಂಬುದು ನನಗೆ ಅಚ್ಚರಿಯನ್ನುಂಟುಮಾಡುತ್ತಿದೆ! ಅವಳನ್ನು ತಳ್ಳುವಂತ ಉದ್ದೇಶವಾದರೂ ನನ್ನ ಮನಸ್ಸಿಗೆ ಹೇಗೆ ಬಂದೀತು? ಪ್ರಾಯಶಃ ಅಜ್ಜಿ ಒಂದೇ ಸಮನೆ ಅಂತ್ಯಜರ ವಿರುದ್ಧ ನಕ್ಷತ್ರಿಕನಂತೆ ಪೀಡಿಸುತ್ತಿದ್ದ ಧರ್ಮೋಪದೇಶದ ಪ್ರಭಾವ ಆ ಕ್ಷಣದಲ್ಲಿ ನನ್ನ ಮೆದುಳು ಹೊಕ್ಕಿ ಅವಳ ಮೇಲೆ ಹಗೆತನ ತುಂಬಿತ್ತೇನೋ ಅಥವಾ ನಾನು ಅವಳೊಂದಿಗೆ ಯಾವುದೂ ಒಂದೆರಡರ ಬಗ್ಗೆ ಕಿತ್ತಾಟವಾಡಿರಬಹುದು: ಅದು ಅಂಗಿಯ ಗುಂಡಿಯಿಂದ ಹಿಡಿದು ಪಕ್ಷಿಯವರೆವಿಗೂ ಆ ಮುನಿಸು ಹರಿದಿರಬಹುದು. ಅವೆಲ್ಲ ಏನೇ ಇರಲಿ, ಬಾವಿಯೊಳಗೆ ಚುಂಕಿ ಮುಳುಗಿದ್ದಾಳೆ. ನನ್ನ ಚಿಕ್ಕಮ್ಮ ಮೊದಲಿಗೆ ಹೆಣ ನೋಡಿದ್ದಾಳೆ.

ಇಡೀ ಊರಿಗೆ ಊರೇ ಬಾವಿಯ ಬಳಿ ನೆರೆಯಿತು. ಕಾಡ್ಗಿಚ್ಚಿನಂತೆ ಸುದ್ದಿ ಹಬ್ಬಿತು, ಮೋಚಿ ಮಂದಿ ಬಾವಿಯಿಂದ ತುಸು ದೂರದಲ್ಲಿ ಬಂದು ಕುಳಿತರು ಪ್ರತ್ಯೇಕವಾಗಿ. ಬಾವಿ ಬ್ರಾಹ್ಮಣರದು, ಹೆಣ ಮೋಚಿಗಳದು, ಅಂತ್ಯಜರು ಬಾವಿ ಮುಟ್ಟುವುದು ಕೂಡ ಪಾಪ! ಬಾವಿಯೊಳಗಿನ ಹೆಣ ಎತ್ತಲು ಬ್ರಾಹ್ಮಣರಿಗೆ ಧೈರ್ಯವಿಲ್ಲ. ಅವರನ್ನು ಬಹಳಷ್ಟು ಪುಸಲಾಯಿಸಿ ಧೈರ್ಯ ತುಂಬಿದ ಮೇಲೆ ನನ್ನ ಚಿಕ್ಕಪ್ಪನ ಭಾವ ದಟ್ಟಿ ಸುತ್ತಿಕೊಂಡರು ಬಾವಿಗಿಳಿಯಲು. ಒಂದು ಹಗ್ಗ ಅವರ ಸೊಂಟಕ್ಕೆ ಗಂಟು ಹಾಕಲಾಯಿತು. ಐದು ಮಂದಿ ಬ್ರಾಹ್ಮಣರು ಹಗ್ಗದ ಮತ್ತೊಂದು ತುದಿ ಹಿಡಿದರು. ಬಹಳಷ್ಟು ಬೊಬ್ಬೆಯ ಬಳಿಕ ನನ್ನ ಚಿಕ್ಕಪ್ಪನ ಭಾವ ಬಾವಿಗಿಳಿದರು. ಬಾವಿಯಿಂದ ಚುಂಕಿ ದೇಹ ಹೊರಬಂದಿತ್ತು. ದೀರ್ಘ ಹೊತ್ತು ನೀರಿನಲ್ಲಿ ಅವಳ ದೇಹವಿದ್ದ ಕಾರಣ ಊದಿತ್ತು. ಅವಳ ಅಮ್ಮ ಭಾರಿ ಆಕ್ರಂದನದೊಂದಿಗೆ ತನ್ನ ಮುದ್ದು ಮಗಳ ದೇಹವನ್ನು ಅಪ್ಪಿಕೊಂಡಳು. ನನ್ನ ಚಿಕ್ಕಪ್ಪನ ಭಾವ ಬಳಿಕ ಪವಿತ್ರ ಗಂಗೆಯಲ್ಲಿ ಮುಳುಗಿದ ಪಾವಿತ್ರ್ಯತೆಯ ಪುಣ್ಯ ಸಂಪಾದಿಸಲು. ದೇವಿಯ ಗರ್ಭಗುಡಿಗೆ ಹೋಗಿ ಗಂಧದ ಕಡ್ಡಿ ಹಚ್ಚಿದ. ಜಿಗುಪ್ಸೆಯಿಂದ ನಾನು ಚುಂಕಿಯ ಮೃತದೇಹದೊಂದಿಗೆ ಅವರ ಹಟ್ಟಿಯವರೆಗೂ ಹೆಜ್ಜೆ ಹಾಕಿದೆ. ಕಳೇಬರವನ್ನು ಹೊಸ ಬಣ್ಣದ ಬಟ್ಟೆಯೊಂದರಲ್ಲಿ ಸುತ್ತಿದ್ದರು. ಅವಳ ಅಪ್ಪನ ತೋಳ್ತೆಕ್ಕೆಯಲ್ಲಿ ಕಳೇಬರವನ್ನು ಕಾಲುವೆ ದಾಟಿ ತಗ್ಗಿನ ಪ್ರದೇಶಕ್ಕೆ ಒಯ್ದರು. ಅವರ ಸಮುದಾಯದ ಮಂದಿ ಗುಂಡಿ ತೆಗೆದು ಆ ಪುಟ್ಟ ದೇಹವನ್ನು ಚಿರಶಾಂತಿಗೆ ಸಾಗಹಾಕಿದರು. ಅಜ್ಜಿ ನನಗೆ ನಂತರ ಸತ್ತ ಪುಟ್ಟ ಮಕ್ಕಳನ್ನು ದಹಿಸದೆ ಏಕೆ ಹೂಳುವರೆಂದು ಕೇಳಿದ ನನ್ನ ಪ್ರಶ್ನೆಗೆ ವಸಂತ ಮಾಸದ ಚಿಗುರುವ ಪುಷ್ಪದಂತೆ ಮಕ್ಕಳು ಮಣ್ಣಿನಿಂದ ಪುನಃ ಚಿಗುರೊಡೆಯುವವರೆಂದು, ಆ ಕಾರಣ ದಹಿಸರೆಂದು ಹೇಳಿತು.

ಗುಡಿಸಲು ವಾಸಿಗಳು ಸಂತಾಪದೊಂದಿಗೆ ಮಂಕು ಕವಿದವರಂತೆ ಕಾಣಿಸಿದರೆ ಇನ್ನೊಂದು ಕಡೆಯಲ್ಲಿ, ಭಾರಿ ಅಶ್ವತ್ಥ ವೃಕ್ಷದ ಕೆಳಗೆ ಬ್ರಾಹ್ಮಣ ಸಮುದಾಯ ಗದ್ದಕ್ಕೆ ಕೈ ಕೊಟ್ಟುಕೊಂಡು ಮುದುಡಿ ಕುಳಿತಿತ್ತು. ಬ್ರಾಹ್ಮಣ ಸ್ತ್ರೀಯರು ಅವರ ಮನೆ ಹೊಸ್ತಿಲಿನಲ್ಲಿ ನಿಂತೋ ಅಥವಾ ಕಿಟಕಿಗಳ ಮೂಲಕವೋ ಅಶ್ವತ್ಥ ವೃಕ್ಷದ ಕಡೆ ಎವೆಯಿಕ್ಕದೆ ನೋಡುತ್ತಿದ್ದರು. ಏನೋ ಸಂಭವಿಸಲಿದೆ ಎಂದು ತೋಚಿತು. ಅಜ್ಜಿಯನ್ನು ಕೇಳಲು ಇಚ್ಛಿಸಿದೆ ಆದರೆ ಆಕೆ ನನ್ನ ಬಾಯಿ ಮುಚ್ಚಿಸಿದಳು. ನಾನು ದಿಗಿಲುಗೊಂಡೆ. ಈ ಮಂದಿ ಪ್ರಾಯಶಃ ಚುಂಕಿ ನೀರಿನಲ್ಲಿ ಮುಳುಗಿದ ಕಾರಣಕ್ಕೆ ನನಗೇ ಬಾರಿಸಬಹುದೆಂದೆಲ್ಲ ಯೋಚಿಸಿದೆ ನಾನು.

> **ನಂಬಿಕೆ ಸತ್ಯ**
>
> ಸಂಜೆ ಹೊತ್ತು ಮುಂಬಾಗಿಲು
> ತೆಗೆದಿರಬೇಕು
> ಅದು 'ಲಕ್ಷ್ಮೀ ಒಳ ಬರೂ ಹೊತ್ತು'
> ಎಂದಳು ಅಜ್ಜಿ
>
> ಸಂಜೆ ಹೊತ್ತು ಮುಂಬಾಗಿಲು
> ಮುಚ್ಚಿರಬೇಕು
> ಅದು 'ಸೊಳ್ಳೆಗಳು ಬಂದು ಒಳ ಸೇರೂ
> ಹೊತ್ತು' ಎಂದ ಮೊಮ್ಮಗ
>
> ಡಾ॥ ಗಿರಿಧರರಾವ್ ಹವಾಲ್ದಾರ್
> ಬಳ್ಳಾರಿ

ಚುಂಕಿಯ ಸಾವಿನಿಂದ ಸಂಪೂರ್ಣವಾಗಿ ಪ್ರಭಾವಕ್ಕೊಳಗಾದ ಎಲ್ಲ ಬ್ರಾಹ್ಮಣ ಮಂದಿಗಿದ್ದ ಚಿಂತೆ ಎಂದರೆ ಬಾವಿಯೊಳಗಿನ ನೀರು ಅಪವಿತ್ರಗೊಂಡಿದೆ ಈ ಸಾವಿನಿಂದ ಎಂಬುದು. ಊರಿನಲ್ಲಿ ಬ್ರಾಹ್ಮಣರಿಗೆ ತಮ್ಮದೆಂದು ಹೇಳುವ ಬಾವಿ ಇದೊಂದೆ. ಪ್ರತಿ ಬ್ರಾಹ್ಮಣ ಕುಟುಂಬ ಅದರಿಂದಲೇ ನೀರು ಸೇದುತ್ತಿದ್ದರು, ಅದೀಗ ಅಪವಿತ್ರಗೊಂಡಿದೆ ಏಕೆಂದರೆ ಮೋಚಿಯೋರ್ವನ ಮಗಳು ಅದರಲ್ಲಿ ಮುಳುಗಿದ್ದಾಳೆ. ಯಾವಾಗ ನೀರಿನ ಪ್ರಶ್ನೆ ಏಳುತ್ತದೊ, ಆಗ ಮತ, ಧರ್ಮ ಪಣಕ್ಕೊಡ್ಡುತ್ತವೆ.

ಬ್ರಾಹ್ಮಣರ ಒಕ್ಕೂಟದಲ್ಲಿ, ನಮ್ಮ ಕಡೆಯ ಹಿರಿಯ ಪ್ರಾಜ್ಞರೊಬ್ಬರು ಮೊದಲು ಮಾತು ಶುರು ಮಾಡಿದರು. ಅವರು ಪವಿತ್ರ ಗಂಗೆ ಕುರಿತಂತೆ ತಮ್ಮ ಮಾತನ್ನು ಸಂಸ್ಕೃತದ ದ್ವಿಪದಿಯೊಂದನ್ನು ಉದ್ಗರಿಸುತ್ತ ಪ್ರಾರಂಭಿಸಿದರು. ಪವಿತ್ರ ಶುದ್ಧೀಕರಿಸಿದ ನೀರಿನ ಮಹಿಮೆ ಹಾಗೂ ಬ್ರಾಹ್ಮಣರು ಈ ಕುರಿತು ಹೇಳಿದರು. ನಮ್ಮ ಧರ್ಮದ ಮೂಲ ತಳಪಾಯವೇ ಶುದ್ಧ ಹಾಗೂ ಪವಿತ್ರಗೊಂಡ ಗಂಗೆ. ಬ್ರಾಹ್ಮಣ ನೆನಿಸಿಕೊಂಡವನಿಗೆ ಪಾವಿತ್ರ್ಯಗೊಂಡ ಶುದ್ಧ ಗಂಗೆಯೇ ಅಮೃತ, ದೇವಲೋಕದ ಮಧು, ಅಮರತ್ವದ ದಾತ ಅದು. ಅವರ ಭಾಷಣ ಕೇಳಿದ ಮೇಲಂತೂ ಬ್ರಾಹ್ಮಣ ಯುವಕರು ಸಿಟ್ಟಾದರು. ಅವರೆಲ್ಲ ಒಕ್ಕೊರಲಿನಿಂದ ಚಮ್ಮಾರ ಸಮುದಾಯವನ್ನು ಹಳ್ಳಿಯಿಂದ ಹೊರದಬ್ಬಬೇಕೆಂದು ತೀರ್ಮಾನಿಸಿದರು. ಅವರಿಂದಾಗಿ ಬ್ರಾಹ್ಮಣರು ತಮ್ಮ ಧರ್ಮ ಪಾವಿತ್ರ್ಯತೆಯನ್ನು ಕಳೆದುಕೊಳ್ಳಬೇಕಾಯಿತೆಂದರು. ಇದರ ಜೊತೆಗೆ ಈ ಧರ್ಮನಿಂದನೆಗೆ ಪ್ರಾಯಶ್ಚಿತ್ತವಾಗಿ ಅರವತ್ತನಾಲ್ಕು ದಿನಗಳವರೆಗೆ ಒಂದೇ ಸಮನೆ ಪವಿತ್ರ ಗ್ರಂಥದ ಪಾರಾಯಣ ಮಾಡಬೇಕೆಂತಲೂ ತೀರ್ಮಾನಿಸಿದರು. ಆದರೆ ಮತ್ತೊಂದು ಅಂಶ ಎದುರಾದುದ್ದೆಂದರೆ ಅವರನ್ನು ಊರಿನಿಂದ ಗಡೀಪಾರು ಮಾಡಿದರೆ ಜಮೀನಿಗೆ ನೀರು ಹಾಯಿಸುವವರು ಯಾರು, ಕಾಡಿನಿಂದ ಉರವಲು ತರುವವರು ಯಾರು, ಹೊಲ, ಗದ್ದೆ ಉತ್ತು ಬಿತ್ತುವವರು ಯಾರು. ಅಲ್ಲದೆ ಇನ್ನಿತರ ಸಣ್ಣಪುಟ್ಟ ಕೆಲಸ–ಕಾರ್ಯಗಳನ್ನು ಮಾಡುವವರು ಯಾರು? ಈ ಚಾಕರಿಗಳನ್ನು ಹೇಗೆ ನಿಭಾಯಿಸುವುದು – ಮೊದಲಿಗೆ, ಇಂತಹವನ್ನೆಲ್ಲ ಅವರು ಒಂದೆರಡು ಚೂರು ರೊಟ್ಟಿಗೊ, ಕವಳಕ್ಕೋ ಮಾಡುತ್ತಿದ್ದರಲ್ವಾ? ಈ ಅಂಶ ಕೂಡ ಅವರ ಚರ್ಚೆಯಲ್ಲಿ ಮಹತ್ವ ಪಡೆದುಕೊಂಡಿತು, ತತ್ಫಲ, ಮತ್ತೊಂದು ತೀರ್ಮಾನ ಕೈಗೊಂಡರು. ಅದೇ, ಚುಂಕಿ ಮನೆಯೊಂದನ್ನು ಬಿಟ್ಟು ಉಳಿದ ಆ ಸಮುದಾಯದ ಇತರರಿಗೆ ಸದರಿ ಶಿಕ್ಷೆಯಿಂದ ವಿನಾಯಿತಿ ನೀಡಲು ತೀರ್ಮಾನಿಸಿದರು. ಕಡೆಗೂ ಬಾವಿಯೊಳಗಿನ ನೀರು ಅಪವಿತ್ರಗೊಂಡಿದೆ. ಏಕೆಂದರೆ ಚುಂಕಿ ಅದರೊಳಗೆ ಮುಳುಗಿ ಪಾಪ

ಎಸಗಿದ್ದಾಳೆ. ಅವಳ ಈ ದುಷ್ಕೃತ್ಯಕ್ಕೆ ಅವಳ ಪೋಷಕರನ್ನು ಹಳ್ಳಿಯಿಂದ ಹೊರದಬ್ಬಬೇಕು, ಈ ತೀರ್ಪನ್ನು – ಪ್ರತಿಯೋರ್ವ ಬ್ರಾಹ್ಮಣನಿಗೂ ನಿವೇದಿಸಿಕೊಂಡರು, ಆದರೆ ದೇವಿಮಾತೆಯ ಮುಖ್ಯ ಪುರೋಹಿತ ಮಾತ್ರ ಇನ್ನೂ ಜೋಲು ಮೋರೆ ಹಾಕಿಕೊಂಡೇ ಕೂತಿದ್ದ. ಈ ವಿಚಾರದ ಬಗೆಗೆ ಕೂಲಂಕಷವಾಗಿ ಅಳೆದು ಸುರಿದ ಮುಖ್ಯ ಪುರೋಹಿತ ಬಳಿಕ, 'ದೇವಿಮಾತೆ'ಗೆ ಕೋಪ ಬಂದಿದೆ ಏಕೆಂದರೆ ಬಾವಿಯಲ್ಲಿನ ನೀರು ಪಾವಿತ್ರ್ಯತೆಯನ್ನು ಕಳೆದುಕೊಂಡಿದೆ. ಆದ್ದರಿಂದ ಅವಳನ್ನು ಸುಪ್ರೀತಗೊಳಿಸುವುದು ಅನಿವಾರ್ಯ. ಚುಂಕಿಯ ಪೋಷಕರನ್ನು ಬಹಿಷ್ಕರಿಸುವುದೊಂದೇ ಅವಳಿಗೆ ತೃಪ್ತಿ ತಾರದು. ಚುಂಕಿಯ ಪೋಷಕರು ಅವಳಿಗೆ ಬಲಿಯನ್ನು ನೈವೇದ್ಯವನ್ನಾಗಿ ಅರ್ಪಿಸಬೇಕು. ಅಲ್ಲದೆ 'ದೇವಿಮಾತೆ'ಗೆ ಬಾವಿ ಬಳಿ 'ಯಜ್ಞ' ಮಾಡಬೇಕು, ಬಲಿ ಕೊಟ್ಟ ಹೋತದ ರಕ್ತವನ್ನು ಬಾವಿಗೆ ಅರ್ಪಿಸಬೇಕು. ಆಮೇಲಷ್ಟೆ ಆ ಬಾವಿ ತನ್ನ ಪಾವಿತ್ರ್ಯತೆಯನ್ನು ಮರುಪಡೆಯಲು ಸಾಧ್ಯ ಎಂದ. ಮಾಂಸ ಮತ್ತು ಅನ್ನದ ಹೆಸರೆತ್ತಿದೊಡನೆ ಬ್ರಾಹ್ಮಣರ ಬಾಯಲ್ಲಿ ಜೊಲ್ಲು ಸುರಿಯಲಾರಂಭಿಸಿತು. ದಿಢೀರನೇ ಮತ್ತೊಂದು ಪ್ರಮುಖ ತೀರ್ಮಾನವನ್ನು ಸಹ ತೆಗೆದುಕೊಂಡರು, ಅದೂ ಬಹುಸಂಖ್ಯಾತ ಬ್ರಾಹ್ಮಣರ ಹಿತವನ್ನು ಗಮನದಲ್ಲಿ ಇಟ್ಟುಕೊಂಡು : ಬಲಿ ಕೊಡಲಿರುವ ಹೋತವನ್ನು ಒಂದರಿಂದ ಎರಡಕ್ಕೇರಿಸಿದರು. ಇದು ಭಾರಿ ತೀರ್ಮಾನವಾಗಿತ್ತು. ಮುಖ್ಯ ಪುರೋಹಿತನ ಆ ಬುದ್ಧಿಮತ್ತೆಯನ್ನು ಎಲ್ಲರೂ ಪ್ರಶಂಸಿಸಿದರು. ಒಡನೆಯೇ ಪಂಚಾಂಗ ನೋಡಿ ಬಲಿ ಕೊಡಲು ಭೋಜನದ ಸಿದ್ಧತೆಗೆ ಶುಭದಿನ ನಿಗದಿಪಡಿಸಿದರು. ನನ್ನ ಚಿಕ್ಕಪ್ಪನ ಭಾವನನ್ನು ಮೋಚಿಗಳ ಹಟ್ಟಿಗೆ ಈ ವಾರ್ತೆ ತಲುಪಿಸಲು ನಿಯೋಜಿಸಿದರು. ಮೋಚಿಗಳಿಗೆ ಈ ವಾರ್ತೆ ವಜ್ರಾಘಾತವಾದಂತಾಯಿತು. ಸಂತಾಪದಲ್ಲಿ ಇರುವ ಚುಂಕಿಯ ಪೋಷಕರಿಗೆ ಸಾವಿನ ಶಿಕ್ಷೆಗಿಂತಲೂ ಘೋರ ಶಿಕ್ಷೆ ಇದಾಗಿತ್ತು. ಅಂತಹ ಭಾರಿ ಎನಿಸುವಂತಹ ಮಾಂಸ ಮತ್ತು ಅನ್ನದ ಭೋಜನವನ್ನು ಚುಂಕಿಯ ಅಪ್ಪ ತನ್ನ ಮದುವೆಯ ಸಂಭ್ರಮದಲ್ಲೂ ಕಂಡಿರಲಿಲ್ಲ. ಈ ಸುದ್ದಿ ಇಡೀ ಸಮುದಾಯವನ್ನೇ ಬೆಚ್ಚಿಬೀಳಿಸಿತು. ಅವರ ಸಮುದಾಯದ ಹಿರಿಯರ‍್ಯಾರು ಇಂತಹ ಶಿಕ್ಷೆಯನ್ನು ಈ ಹಿಂದೆ ಎಂದೂ ಕೇಳಿರಲಿಲ್ಲ. ಅವರು ತಲೆತಲಾಂತರಗಳಿಂದ ಬ್ರಾಹ್ಮಣರ ಸೇವೆಯಲ್ಲಿ ಇದ್ದರೂ ಹಿಂದೆಂದೂ ಇಂತಹ ಆವೇಶದ ಕಟ್ಟು ಕಳಚಿರಲಿಲ್ಲ ಅವರ ಮೇಲೆ. ಪಾಪ ! ಅವರೇನೂ, ಅವರಾಗೆ ಬ್ರಾಹ್ಮಣರ ಬಾವಿಗೆ ತಮ್ಮ ಹುಡುಗಿಯನ್ನು ನೂಕಿರಲಿಲ್ಲ. ಈಗ ಇಡೀ ಸಮುದಾಯ, ಒಗ್ಗಟ್ಟಾಗಿ, ಬ್ರಾಹ್ಮಣರ ತೀರ್ಪಿಗೆ ಮಣೆ ಹಾಕದಿರಲು ತೀರ್ಮಾನಿಸಿತು.

ನನ್ನ ಚಿಕ್ಕಪ್ಪನ ಭಾವ ಭಾರಿ ನಿರೀಕ್ಷೆಯೊಂದಿಗೆ ಹೋಗಿದ್ದರು. ಮೋಚಿಗಳು ಅಷ್ಟೊಂದು ಹಠಮಾರಿಗಳಾಗಿ ಬ್ರಾಹ್ಮಣರ ತೀರ್ಮಾನವನ್ನೂ ಧಿಕ್ಕರಿಸುತ್ತಾರೆ ಎಂದು ಅವರೆಂದೂ ಶಂಕಿಸಿರಲಿಲ್ಲ. ನಾನು ಚುಂಕಿಯ ಮೃತದೇಹವನ್ನು ಬಾವಿಯಿಂದ ಹೊರ ತೆಗೆದದ್ದಕ್ಕೆ ಅವರು ತನಗೆ ಕೃತಘ್ನರಾಗಿರುವರೆಂದೆಲ್ಲಾ ಭಾವಿಸಿಕೊಂಡಿದ್ದರು ನನ್ನ ಚಿಕ್ಕಪ್ಪನ ಭಾವ.

ಅವರು ಕಟ್ಟಕಡೆಗೆ ತಮ್ಮ ಕಹಳೆ ಊದಿದರು. ಸಮುದಾಯದ ಹಿರಿಯರನ್ನುದ್ದೇಶಿಸಿ, 'ದೇವಿ ಮಾತಾ' ಬಹು ಅಸಂತುಷ್ಟಳಾಗಿದ್ದಾಳೆ. ಏಕೆಂದರೆ ಪವಿತ್ರ ಗಂಗೆ ಅಪವಿತ್ರಗೊಂಡಿದೆ ಚುಂಕಿ ಮುಳುಗಿದ ಕಾರಣದಿಂದ, ಎಂದೆಲ್ಲ ಹೇಳಿ ಅವರನ್ನು ಒಪ್ಪಿಸಲು ಇನ್ನಿಲ್ಲದ ಸಾಹಸ ಮಾಡಿದರು. ಅವಳ ಕೋಪಕ್ಕೆ ಮೋಚಿ ಸಮುದಾಯವೊಂದೇ ಜವಾಬುದಾರಿ. ಅವಳನ್ನು ಸಂತೃಪ್ತಿಗೊಳಿಸಲು ಬಲಿ ಕೊಡುವುದು ಅತ್ಯಂತ ಅನಿವಾರ್ಯ. ಬ್ರಾಹ್ಮಣರಿಗೆ ಭೋಜನಕೂಟ ವೇರ್ಪಡಿಸಿದರೆ ಮೋಚಿಗಳು ಕೂಡ ವಿಮೋಚನೆಗೆ ಒಳಗಾಗುವರು. ಅಂತೂ ಹೇಗೋ ಧರ್ಮದ ಹೆಸರಿನಲ್ಲಿ, ಮೋಚಿಗಳನ್ನು ಈ ತೀರ್ಪಿನ ಶೃಂಖಲೆಗೆ ಸಿಲುಕಿಸಲು ಬಲವಂತಪಡಿಸಲಾಯಿತು.

ಶುಭ ದಿನ ಬಂದಿತು. ಹಳ್ಳಿಯಲ್ಲಿ ವಾತಾವರಣ ಹಬ್ಬದ ಕಳೆ ಹೊತ್ತಿತ್ತು. ಬಾವಿಯ ಸುತ್ತ ಬಾಳೆಕಂಬ ಕಟ್ಟಿ ಶೃಂಗಾರಗೊಳಿಸಿದರು. ಹಸಿರು ಮಾವು ಮತ್ತು ಅರಳಿ ಎಲೆಗಳ ತೋರಣವನ್ನು ಕೆಂಪು ದಾರದ ಮೇಲೆ ತೂಗಿಬಿಟ್ಟರು. ನಾಲ್ವರು ಪಂಡಿತರು ಹವನ ಸಾಮಗ್ರಿಗಳನ್ನು ಅಗ್ನಿಗೆ ಅರ್ಪಿಸುತ್ತ ಶ್ಲೋಕಗಳ ಪಠಣದಲ್ಲಿ ತಲ್ಲೀನರಾಗಿದ್ದರು. ಬಾವಿಯಿಂದ ತುಸು ದೂರದಲ್ಲಿ ಮೋಚಿಗಳು ಮ್ಲಾನತೆಯ ಕಂಬಳಿ ಹೊದ್ದು ಕುಳಿತಿದ್ದರು ಚುಂಕಿಯ ತಿಥಿ ಅಂದು ಎಂಬಂತೆ. ಸಮೀಪದ ಅಶ್ವತ್ಥ ಮರದಡಿಯಲ್ಲಿ ಬಲಿ ಕೊಡಲು ಹೋತಗಳನ್ನು ಕಟ್ಟಿ ಹಾಕಿದ್ದರು. ಇಡೀ ಊರೇ ಬಾವಿ ಬಳಿ ನೆರೆಯಿತು. ಒಬ್ಬೊಬ್ಬರೇ ಬಂದು ಕಹಳೆ, ನಗಾರಿಗಳನ್ನು ಬಾರಿಸುವ ಆರ್ಭಟದೊಂದಿಗೆ ದೇವಿಯ ಮೆರವಣಿಗೆ ಬಂದಿತು. ಎಲ್ಲರೂ ಎದ್ದು ನಿಂತರು ಕರಜೋಡಿಸಿ, ಕೈ ಮುಗಿಯುತ್ತ. ಮುಖ್ಯ ಪುರೋಹಿತ, ಅರ್ಚನೆಯ ತಟ್ಟೆ ಹಿಡಿದು ದೇವಿಯ ಮುಂದಿದ್ದರೆ, ದೇವಿ ಹಿಂದೆ ಹಿಂಬಾಲಿಸುತ್ತಿದ್ದಳು. ಹಿಂದೆ ಮುಂದೆ ನಾಲ್ವರು ಬ್ರಾಹ್ಮಣರು ದೇವಿಯನ್ನು ಹೊತ್ತಿದ್ದರು. ಪಳಪಳ ಹೊಳೆಯುವ ಬೆಳ್ಳಿ ಮತ್ತು ಚಿನ್ನದ ಮುಖವಾಡಗಳು ದೇವಿಯ ಮೈಮೇಲೆ ಮುಗುಳ್ನಗೆ ಸೂಸುತ್ತಿದ್ದವು. ಕರ ಜೋಡಿಸಿ ನಿಂತ ಮೋಚಿಗಳು ದೇವಿಗೆ ದೂರದಿಂದಲೇ ನಿಂತು ಜಯಕಾರ ಹಾಕಿದರು.

ದೇವಿಯ ಮುಂದೆ ಚುಂಕಿಯ ಅಪ್ಪ ಹೋತನ ಹಗ್ಗ ಕಳಚಿಬಿಟ್ಟ. ಮುಖ್ಯ ಪುರೋಹಿತ ಅದನ್ನು ಬಲು ಚಮತ್ಕಾರದಿಂದ ಒಮ್ಮೆಗೆ ಹಿಡಿದುಕೊಂಡ. ಇತರೆ ಅರ್ಚಕರು ಬಾವಿಯ ನೀರಿನಿಂದ ಅದಕ್ಕೆ ಸ್ನಾನ ಮಾಡಿಸಿದರು. ಪಾಪ ! ಬಡಪಾಯಿ ಹೋತ ನಡುಗುತ್ತ ಅರಚಿತು, ಅಂತಿಮ ಹಂತದ ಬಲಿ ನೀಡಲು ನಡೆಸುವ ತಯಾರಿಗಳು ಬಹು ವಿಜೃಂಭಣೆಯಿಂದ ನಡೆಯುತ್ತಿದ್ದಂತೆ. ಹೋತದ ತಲೆಯ ಮೇಲೆ ಅರಿಶಿಣ, ಕುಂಕುಮವನ್ನು ಹಚ್ಚಿದರು, ಅರ್ಚಕರು ಅದರ ಮೇಲೆ ಪುಷ್ಪ ಹಾಗೂ ಅನ್ನ ಎಸೆದರು. ನನ್ನ ಚಿಕ್ಕಪ್ಪ ಮೊನಚಾದ ಭಾರಿ ಕುಡುಗೋಲನ್ನು ಎಲ್ಲಿಂದಲೋ ತಂದರು. ಅವರ ಭಾವ ಆ ಬಡಪಾಯಿ ಹೋತದ ಹಿಂಗಾಲುಗಳನ್ನು ಭದ್ರವಾಗಿ ಹಿಡಿದು ತುಸು ಮೇಲೆತ್ತಿದರು. ದೇವಿಯ ಎದುರು ಹೋತದ ಕತ್ತನ್ನು ತುಸು ಕೆಳಗಡೆಗೆ ಬಾಗಿಸಿದರು. ನನ್ನ ಚಿಕ್ಕಮ್ಮ ಸರಕ್ಕನೆ ತನ್ನ ಕೈಗಳಿಂದ ನನ್ನ ಕಣ್ಣನ್ನು ಮುಚ್ಚಿಬಿಟ್ಟರು. ಬಳಿಕ ಅದರ ಕಥೆ... 'ದೇವಿ'ಗೆ ಪ್ರಣಾಮದ, ಜೈಕಾರದ ಮೊಳಗು ದಿಗಂತ ಮುಟ್ಟಿತು, ಜನಜಂಗುಳಿಯಿಂದ ! ದೇವಿಯ ಪಾದಗಳ ಬಳಿ ಹೋತನ ಕತ್ತು ಉರುಳಿ ಬಿದ್ದಿತ್ತು, ಜಂಗುಳಿ ಸಮಾಧಾನದ ನಿಟ್ಟುಸಿರು ಬಿಟ್ಟರು. ಮುಖ್ಯ ಪುರೋಹಿತನ ಕಂಗಳಲ್ಲಿ ಆಶ್ಚರ್ಯಕರ ಹೊಳಪು ಇತ್ತು. ತಕತಕನೆ ಎಗರೆಗರಿ ಬೀಳುವ ಹೋತದ ಮುಂಡದಿಂದ ರಕ್ತದ ಚಿಲುಮೆ ಧಾರಾಕಾರವಾಗಿ ಹರಿಯುತ್ತಿತ್ತು. ಹೋತದ ರಕ್ತಸಿಕ್ತ ತಲೆಯನ್ನು ಮುಖ್ಯ ಪುರೋಹಿತ ತೆಗೆದಿಟ್ಟುಕೊಂಡು ಬಾವಿಯ ಸುತ್ತ ಪ್ರದಕ್ಷಿಣೆ ಹಾಕಿದ. ಬಳಿಕ ಬಲಿ ನಿಮಿತ್ತ ಅದರ ರಕ್ತವನ್ನು ನಾಲ್ಕು ದಿಕ್ಕುಗಳಿಗೂ ಎರಚಿದ. ಈಗ ಬ್ರಾಹ್ಮಣರ ಬಾವಿ ಸಂಪೂರ್ಣವಾಗಿ ಹಾಗೂ ಸತ್ಯವಾಗಿ ಪರಿಶುದ್ಧವಾಯಿತು.

ಭೀತಿಯಿಂದ, ಅಲ್ಲಿಂದ ಓಡಿ ಬಂದೆ ನಾನು. ನನಗೆ ಹೋತನ ಸಾವು ಚುಂಕಿಯ ಸಾವಿನಷ್ಟೆ ಆಘಾತವನ್ನುಂಟುಮಾಡಿತ್ತು. ತಲೆರಹಿತ ಹೋತ ಹೇಗೆ ಗಡಗಡ ನಡುಗುವುದೋ ಹಾಗೆ ಹೆಚ್ಚು ಕಡಿಮೆ, ಅದರಂತೆಯೇ, ನನಗೂ ಆಗಿ, ಭೀತಿಯಿಂದ ಅಜ್ಜಿಯ ತೊಡೆಯ ಮೇಲೆ ಅವುಚಿಕೊಂಡೆ. ಒಂದೇ ಸಮನೇ ಅಳುತ್ತಿದ್ದೆ. ಅಜ್ಜಿ ನನ್ನನ್ನು ಶಾಂತಗೊಳಿಸಲು ಸಾಹಸಪಟ್ಟಳಾದರೂ ನನ್ನಿಂದ ಅಳು ನಿಲ್ಲಿಸಲಾಗಲಿಲ್ಲ. ಆ ಭಯಾನಕ ಬಲಿಕೊಡುವ ದೃಶ್ಯವನ್ನು ನಾನು ಮರೆಯುವಂತೆ ಮಾಡಲು ಅವರೆಲ್ಲ ಪ್ರಯತ್ನಿಸಿದರು. ಪ್ರಾಯಶಃ ನಾನು ಚುಂಕಿಯನ್ನು ನೆನೆಸಿಕೊಂಡು ಅಳುತ್ತಿದ್ದೇನೋ.

ಬಾವಿ ಬಳಿ ಮಾಂಸದೂಟ ತಯಾರಾಯಿತು, ಇಡೀ ಊರೇ ಹೊಟ್ಟೆ ತುಂಬ ಉಂಡಿತು. ಆದರೆ ನನ್ನಿಂದ ಆಗಲಿಲ್ಲ. ಅಜ್ಜಿ ಮಾಂಸ ಎಂದೂ ಮುಟ್ಟಿದವಳಲ್ಲ. ಆ ಇಡೀ ರಾತ್ರಿ ಅವಳ ಮೇಲೆ ನನ್ನ ಕಣ್ಣನ್ನು ನೆಟ್ಟಿದ್ದೆ. ಇಡೀ ರಾತ್ರಿ ಆ ಘಟನೆ ನನ್ನ ಕಣ್ಮುಂದೆ ನಾಟ್ಯವಾಡುತ್ತಿತ್ತು ಲಾಟೀನಿನ ನೃತ್ಯದ ಛಾಯೆಯಂತೆ. ನಾನೀಗ ಅಜ್ಜಿಯ ಕಥೆ ಕೇಳಲು ಇಚ್ಛಿಸೆನು. ಏಕೆಂದರೆ ಚಿನ್ನದ ಪಂಜರದಲ್ಲಿರುವ ಗಿಳಿ ಆ ಕಾರ್ಗತ್ತಲ ಆಳದ ಬಾವಿಯೊಳಗಡೆ ಇಲ್ಲ ಅಂತ ನನಗೆ ಗೊತ್ತಿದೆ. ಬದಲಿಗೆ ಅದು ನಮ್ಮ ಮನೆಯ ಗೋಡೆಗಳಲ್ಲೆಲ್ಲೋ ಗುಪ್ತವಾಗಿ ಅಡಗಿದೆ ಹಾಗೂ ರಾಕ್ಷಸನ ದೆವ್ವ ಸಹ ನಮ್ಮೊಂದಿಗೆ ಎಲ್ಲೋ ಒಂದೆಡೆ ಇನ್ನೂ ಬದುಕಿದೆ.


ಮೂಲ: **ನರೇಶ್ ಪಂಡಿತ್** (ಪಹರಿ ಭಾಷೆ)
ಕನ್ನಡಕ್ಕೆ : **ಸೊಂದಲಗೆರೆ ಲಕ್ಷ್ಮೀಪತಿ**
ನಂ. ೧೨೩, ೭ನೇ ಕ್ರಾಸ್, ಚಂದ್ರಾ ಬಡಾವಣೆ
ವಿಜಯನಗರ, ಬೆಂಗಳೂರು – ೫೬೦ ೦೪೦

# ಮಹಿಳೆ ಮತ್ತು ವಿಜ್ಞಾನ

**ಕ್ರಿ.** ಶ. ೧೭ ಮತ್ತು ೧೮ನೇ ಶತಮಾನದಲ್ಲಿ ಆದ ವಿಜ್ಞಾನದ ಪ್ರಗತಿಯು ನಾಗಾಲೋಟದಲ್ಲಿ ಎಂಬಂತೆ ೧೯ನೇ ಶತಮಾನದಲ್ಲಿ ಮುಂದುವರಿದು ೨೦ನೇ ಶತಮಾನದಲ್ಲಿ ಮುಗಿಲನ್ನೇ ಮುಟ್ಟಿಬಿಟ್ಟಿತು. ವಿಜ್ಞಾನದ ಹೊಸ ತಿಳಿವಳಿಕೆಗಳು, ಅನ್ವೇಷಣೆಗಳು, ಆವಿಷ್ಕಾರಗಳು ಜಗತ್ತಿನ ಆಗುಹೋಗುಗಳ ಮೇಲೆ ಪ್ರಭಾವ ಬೀರಿದವು. ಕೈಗಾರಿಕಾ ಕ್ರಾಂತಿ ಎಂದು ಗುರುತಿಸಲಾಗುವ ಬೆಳವಣಿಗೆ ಮಾತ್ರವಲ್ಲದೆ, ಸದ್ದಿಲ್ಲದೇ ಪ್ರಪಂಚದಾದ್ಯಂತ, ಆರ್ಥಿಕ, ಸಾಮಾಜಿಕ, ರಾಜಕೀಯ ಬದಲಾವಣೆಗಳು ನಡೆದು ಹೋದವು. ವಿಜ್ಞಾನದ ಮುನ್ನಡೆ, ತಂತ್ರಜ್ಞಾನಕ್ಕೆ ದಾರಿ ತೆರೆಯಿತು. ದಿನಕ್ಕೆ, ಕ್ಷಣಕ್ಕೆ ಎಂಬಂತೆ ಹೊಸ, ಹೊಸ ವಸ್ತುಗಳು ಎಲ್ಲಾ ಕ್ಷೇತ್ರಗಳಲ್ಲಿಯೂ ಉದ್ಭವಿಸಿದವು. ಇವು ನಿತ್ಯಜೀವನದಲ್ಲಿ ಬಳಕೆಗೆ ಬಂದು, ಜನರ ಜೀವನಶೈಲಿಯೇ ಬದಲಾಯಿಸಿಬಿಟ್ಟಿದೆ.

ಇಷ್ಟು ಪ್ರಭಾವಶಾಲಿಯಾದ ವಿಜ್ಞಾನ ಮತ್ತು ತಂತ್ರಜ್ಞಾನದ ಪರಿಣಾಮ, ಸ್ವಾಭಾವಿಕ ವಾಗಿಯೇ ಮಹಿಳೆಯ ಮೇಲೆಯೂ ಆಯಿತು, ಆಗಿದೆ, ಆಗುತ್ತಲೇ ಇದೆ. ಬಹುಮುಖ್ಯವಾಗಿ, ಗುರುತಿಸಬಹುದಾದ ಪರಿಣಾಮಗಳೆಂದರೆ, ಮಹಿಳೆಯ ಶ್ರಮ ಮತ್ತು ಕಾಲದ ಉಳಿತಾಯ. ಬೆಳಗಿನ ಜಾವವೇ ಎದ್ದು, ನೀರೊಲೆಯ ಬೂದಿ ತೆಗೆದು, ಕಟ್ಟಿಗೆಯ ಉರಿ ಹಚ್ಚಿ, ಬೆಳಗಿನಿಂದ ಸಂಜೆಯವರೆಗೂ ಅಡುಗೆ ಒಲೆಯ ಮುಂದೆ ಕುಳಿತು ಹಸಿ ಸೌದೆಯ ಒಲೆ ಊದುತ್ತಾ, ಇದ್ದಲಿನ ಮಸಿ ಮುಖ, ಮೈಕೈಗಳಿಗೆ ಮೆತ್ತಿಕೊಂಡಿರುತ್ತಿದ್ದ, ಧಾನ್ಯ ಬೀಸುತ್ತ, ಕೇರುತ್ತಾ, ಒರಳಲ್ಲಿ ಪದಾರ್ಥಗಳನ್ನು ಕುಟ್ಟುತ್ತ, ರುಬ್ಬುತ್ತ, ಬಾವಿಯಿಂದ ನೀರು ಸೇದುತ್ತಾ, ಕಲ್ಲುಬಂಡೆಯ ಮೇಲೆ ಬಟ್ಟೆ ಬಡಿಯುತ್ತಿದ್ದ, ಆರೆಂಟು ಮಕ್ಕಳ ತಾಯಿಯಾಗಿ ಐವತ್ತು ವರ್ಷಗಳಿಗೇ, ಬೆನ್ನು, ಸೊಂಟ ಬಾಗಿ, ಮುಪ್ಪಿನೆಡೆಗೆ ಸಾಗುತ್ತಿದ್ದ ಹಿಂದಿನ ಕಾಲದ

ಮಹಿಳೆಯ ಶ್ರಮ ಮತ್ತು ಕಾಲದ ಉಳಿತಾಯ. ಬೆಳಗಿನ ಜಾವವೇ ಎದ್ದು, ನೀರೊಲೆಯ ಬೂದಿ ತೆಗೆದು, ಕಟ್ಟಿಗೆಯ ಉರಿ ಹಚ್ಚಿ, ಬೆಳಗಿನಿಂದ ಸಂಜೆಯವರೆಗೂ ಅಡುಗೆ ಒಲೆಯ ಮುಂದೆ ಕುಳಿತು ಹಸಿ ಸೌದೆಯ ಒಲೆ ಊದುತ್ತಾ, ಇದ್ದಲಿನ ಮಸಿ ಮುಖ, ಮೈಕೈಗಳಿಗೆ ಮೆತ್ತಿಕೊಂಡಿರುತ್ತಿದ್ದ, ಧಾನ್ಯ ಬೀಸುತ್ತ, ಕೇರುತ್ತಾ, ಒರಳಲ್ಲಿ ಪದಾರ್ಥಗಳನ್ನು ಕುಟ್ಟುತ್ತ, ರುಬ್ಬುತ್ತ, ಬಾವಿಯಿಂದ ನೀರು ಸೇದುತ್ತಾ, ಕಲ್ಲುಬಂಡೆಯ ಮೇಲೆ ಬಟ್ಟೆ ಬಡಿಯುತ್ತಿದ್ದ, ಆರೆಂಟು ಮಕ್ಕಳ ತಾಯಿಯಾಗಿ ಐವತ್ತು ವರ್ಷಗಳಿಗೇ, ಬೆನ್ನು, ಸೊಂಟ ಬಾಗಿ, ಮುಪ್ಪಿನೆಡೆಗೆ ಸಾಗುತ್ತಿದ್ದ ಹಿಂದಿನ ಕಾಲದ ಮಹಿಳೆಯ ಚಿತ್ರಣವೇ ಇಂದು ಬದಲಾಯಿಸಿಹೋಗಿದೆ.

**ಬಿ. ಜಿ. ಕುಸುಮಾ**



ಮಹಿಳೆಯ ಚಿತ್ರಣವೇ ಇಂದು ಬದಲಾಯಿಸಿಹೋಗಿದೆ. ಒಂದು ಸ್ವಿಚ್ ಒತ್ತಿದರೆ ಸಾಕು, ಗೀಸರ್‌ನಲ್ಲಿ ನೀರು ಕಾಯುತ್ತದೆ. ಅಡುಗೆಮನೆಯಲ್ಲಿ ಸ್ವಿಚ್ ಒತ್ತಿ, ಕುಟ್ಟುವ, ರುಬ್ಬುವ ಕೆಲಸವನ್ನೆಲ್ಲಾ ಮಿಕ್ಸರ್ ಗ್ರೈಂಡರ್‌ಗಳಿಂದ ಮಾಡಿ ಮುಗಿಸಬಹುದು. ಮತ್ತೊಂದೆಡೆ ಸ್ವಿಚ್ ಒತ್ತಿ ಬಟ್ಟೆ ಒಗೆದುಬಿಡಬಹುದು. ಬಿರಡೆ ತಿರುಗಿಸಿದರೇ ಸಾಕು ಒಲೆ ಹೊತ್ತಿಕೊಂಡು, ಅದರಲ್ಲಿ ಹೊಗೆಯಿಲ್ಲದ, ಮಸಿಯಾಗದ ಗ್ಯಾಸ್ ಉರಿಯುತ್ತದೆ, ಅಡುಗೆಗಾಗಿ. ಮೈಕ್ರೊಓವೆನ್‌ನಲ್ಲಿ ಇಟ್ಟರೆ ನಿಮಿಷಗಳಲ್ಲಿಯೇ ಪದಾರ್ಥಗಳು ಬಿಸಿಯಾಗುತ್ತವೆ. ಮೈ, ಕೈ ನೋವಿಲ್ಲ, ಶ್ರಮವಿಲ್ಲ. ಹೀಗೆಯೇ ಮನೆ ಗುಡಿಸಿ, ಶುಚಿಮಾಡಲು, ಪಾತ್ರೆ ತೊಳೆಯಲೂ ಯಂತ್ರಗಳಿವೆ. ಹೀಗೆ ಶ್ರಮವನ್ನೂ ಕಾಲವನ್ನೂ ಉಳಿಸಿ, ಆ ಉಳಿಕೆಯ ಬಳಕೆಗಾಗಿ, ಮನೋಲ್ಲಾಸಕ್ಕೂ ಮನೋವಿಕಾಸಕ್ಕೂ ನೆರವಾಗಲು ರೇಡಿಯೋ, ಟಿ.ವಿ. ಬಂದಿವೆ. ಮನೆಯಲ್ಲೇ ಇದ್ದಾಗ, ಹೊರಗೆ ಸಂಚಾರದಲ್ಲಿ ಇದ್ದಾಗ ತಮಗೆ ಬೇಕಾದಾಗ, ಬೇಕಾದವರ ಸಂಪರ್ಕದಲ್ಲಿರಲು ದೂರವಾಣಿ, ಮೊಬೈಲ್ ಇವೆ. ಜಂಗಮದೂರವಾಣಿ ಎನಿಸಿರುವ ಮೊಬೈಲ್ ಅಂತೂ ಮನೆಗೆಲಸದವಳು, ಹೂ ಮಾರುವ ಹುಡುಗಿ, ಕಟ್ಟಡದ ಕಾರ್ಮಿಕಳು, ತರಕಾರಿ ಮಾರುವಾಕೆ ಹೀಗೆ ಎಲ್ಲರ ಕೈಯಲ್ಲೂ ರಾರಾಜಿಸುತ್ತಿವೆ.

ಇದಿಷ್ಟೇ ಅಲ್ಲದೆ, ಮಹಿಳೆ ತನ್ನ ಮುಟ್ಟಿನ ದಿನಗಳಲ್ಲಿ ಬಳಸಲು, ಆರೋಗ್ಯಕರವಾದ, ಆರಾಮದಾಯಕವಾದ ಒಳ ಉಡುಪುಗಳಿವೆ. ತನಗೆ ಬೇಡದ ಬಸಿರನ್ನು ತಡೆಯುವ, ಮುಂದೂಡುವ, ಅಥವಾ ಒಡಲಿಂದ ಬಸಿರನ್ನು ಹೊರದೂಡುವ ಅವಕಾಶವೂ ವೈದ್ಯಕೀಯರಂಗದಲ್ಲಾದ ಪ್ರಗತಿಯಿಂದ ದೊರಕಿದೆ. ಒಬ್ಬಳೇ ಮನೆಯಿಂದಾಚೆ ಹೋಗಲು ಅಂಜುತ್ತಿದ್ದ ಮಹಿಳೆ, ಇಂದು, ತಾನೇ ವಾಹನ ಚಲಾಯಿಸುತ್ತ ಒಬ್ಬಳೇ ಓಡಾಡಬಲ್ಲಳು; ಅವಳ ಅನುಕೂಲಕ್ಕೆ ತಕ್ಕಂತೆ ರಚಿಸಿರುವ ವಾಹನಗಳು ಈಗ ಲಭ್ಯ. ವಿಜ್ಞಾನದ ಮುನ್ನಡೆಯಿಂದ ಸಾಮಾಜಿಕ ಬದಲಾವಣೆಗಳೂ ಆಗಿವೆ; ಅದರಿಂದಾಗಿ, ಮೊದಲು ಪುರುಷರಿಗೆ ಮಾತ್ರವೇ ಸೀಮಿತವಾಗಿದ್ದ ಉದ್ಯೋಗ ಕ್ಷೇತ್ರಗಳನ್ನೂ ಮಹಿಳೆ ಪ್ರವೇಶಿಸಿದ್ದಾಳೆ; ಅಲ್ಲಿ ಅತ್ಯುನ್ನತ ಪದವಿಗಳಿಗೂ ಏರಿದ್ದಾಳೆ. ಈಗ ಅವಳ ಕಾರ್ಯಕ್ಷೇತ್ರ ವಿಸ್ತರಿಸಿದೆ; ಅನುಭವದ ಅಗಲ, ಆಳಗಳು ಹಿಗ್ಗಿವೆ. ಹಾಗಾಗಿ, ಮಹಿಳೆಗೆ ಅದರಲ್ಲೂ ಮಧ್ಯಮ ಹಾಗೂ ಕೆಳ ಮಧ್ಯಮ ವರ್ಗದ ಮಹಿಳೆಗೆ ತಕ್ಕಮಟ್ಟಿನ ಆರ್ಥಿಕ ಸ್ವಾತಂತ್ರ್ಯವೂ ದೊರೆತಿದೆ.

ಈ ಎಲ್ಲಾ ಭೌತಿಕ ಅನುಕೂಲಗಳೊಡನೆ, ಮಹಿಳಾ ಲೋಕದಲ್ಲಿ ಮತ್ತೊಂದು ಗಮನಾರ್ಹ ಪರಿವರ್ತನೆಯೂ ಆಗಿದೆ. ಅದು ಏಕೆ, ಹೇಗೆ ಎಂದು ಪ್ರಶ್ನಿಸುವ ಮನೋಭಾವ ಮಹಿಳೆಯಲ್ಲಿ ಮೂಡಿದೆ, ಮೂಡಿ ಅರಳ ತೊಡಗಿದೆ. ನಮ್ಮ ದೇಶದಲ್ಲಂತೂ ಪತಿಯೇ ಪರದೈವ ಎಂದು ಭಾವಿಸಿ, ಗಂಡ ಹೇಳಿದ್ದನ್ನೆಲ್ಲ, ಬೇರೆ ಆಲೋಚನೆಗಳನ್ನೇ ಮಾಡದೆ, ಚಾಚೂ ತಪ್ಪದೆ ಅನುಸರಿಸುತ್ತಿದ್ದ, (ಈಗಲೂ ಹಾಗೆಯೇ ನಂಬಿರುವವರಿದ್ದಾರೆ; ನಂಬ ಬೇಕಾದ್ದೇ ಎಂಬ ಒತ್ತಾಯ ಇದ್ದೇ ಇದೆ) ಮಹಿಳೆಯರು, ನಿಧಾನವಾಗಿ ಮೆಲ್ಲಮೆಲ್ಲಗೆ ಸ್ವತಂತ್ರವಾಗಿ ಆಲೋಚನೆ ಮಾಡಲು ಆರಂಭಿಸಿದ್ದಾರೆ. ಇದರ ಫಲವಾಗಿಯೇ, ಸ್ತ್ರೀ ವಿದ್ಯಾಭ್ಯಾಸ, ಸ್ತ್ರೀ ಉದ್ಯೋಗ, ಮದುವೆಯಲ್ಲಿ ಹುಡುಗಿಯ ಅಭಿಪ್ರಾಯವನ್ನೂ ಕೇಳುವುದು ಇವೆಲ್ಲ ಕ್ರಮೇಣ ನಗರಗಳಲ್ಲಿ ಮಾತ್ರವಲ್ಲ, ಹಳ್ಳಿಗಳಲ್ಲೂ ಕಾಣತೊಡಗಿದೆ. ಮಹಿಳಾ ಜಾಗೃತಿ ಎಂದು ಯಾವುದನ್ನು ಹೇಳಲಾಗುತ್ತದೆಯೋ ಅದಕ್ಕೆ ವಿಜ್ಞಾನದ ಮುನ್ನಡೆಯು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಬಹುಮಟ್ಟಿಗೆ ಕಾರಣವಾಗಿದೆ.

ಒಂದು ನಾಣ್ಯಕ್ಕೆ ಎರಡು ಮುಖಗಳಿರುವಂತೆ, ವಿಜ್ಞಾನದ ಮುನ್ನಡೆಯಿಂದ ಮಹಿಳೆಯ ಮೇಲಾಗಿರುವ ಪರಿಣಾಮವೂ ಎರಡು ವೈರುಧ್ಯಗಳಿಂದ ಕೂಡಿದೆ. (ಈ ಮಾತುಗಳನ್ನು ನಾನು ನಮ್ಮ ದೇಶದ ಮಹಿಳೆಯರನ್ನು ಮಾತ್ರವೇ ಗಮನ ದಲ್ಲಿಟ್ಟುಕೊಂಡು ಹೇಳುತ್ತಿದ್ದೇನೆ) ವಿಜ್ಞಾನ ಹಾಗೂ ತಂತ್ರಜ್ಞಾನದ ಬೆಳವಣಿಗೆ ಯಿಂದ ಮಹಿಳೆಯ ಕಾರ್ಯಕ್ಷೇತ್ರದಲ್ಲಿ ಗಮನಾರ್ಹ ಬದಲಾವಣೆಗಳು (ಅನುಕೂಲಕರವಾದವು) ಆಗಿರುವುದು ನಿಜ. ಅಡುಗೆಮನೆಯಲ್ಲೂ, ಇತರ ಮನೆಗೆಲಸಗಳಲ್ಲೂ ಅವಳಿಗೆ ಒದಗಿರುವ ಯಾಂತ್ರಿಕ ಸಲಕರಣೆಗಳು ಅವಳ ಶ್ರಮವನ್ನು ಬಹುಪಾಲು ಕಡಿಮೆ ಮಾಡಿವೆ ಎಂಬುದು ಕೂಡ ಅಷ್ಟೇ ನಿಜ. ಆದರೆ ಮನೆಗೆಲಸಗಳಲ್ಲಿ ಹಲವು – ಉದಾಹರಣೆಗೆ, ನೆಲ ಗುಡಿಸಿ ಸಾರಿಸುವ,

ಬಟ್ಟೆ ಒಗೆಯುವ, ರುಬ್ಬುವ, ಬೀಸುವಂತಹ ಕೆಲಸಗಳು – ದೈಹಿಕಶ್ರಮದ ಕೆಲಸಗಳಾದುದರಿಂದ, ಮಹಿಳೆಗೆ ಅಗತ್ಯವಾದ ಶಾರೀರಿಕ ವ್ಯಾಯಾಮವನ್ನೂ ಪರೋಕ್ಷವಾಗಿ ಒದಗಿಸುತ್ತಿದ್ದವು. ಈಗ ಅವು ತಪ್ಪಿಹೋಗಿವೆ. ಪರ್ಯಾಯವಾಗಿ, ಎಲ್ಲಾ ಮಹಿಳೆಯರೂ, ಬೇರೆ ಬೆವರಿಳಿಸುವ ವ್ಯಾಯಾಮವನ್ನೇನೂ ಮಾಡುತ್ತಿಲ್ಲ. ಹೀಗಾಗಿ, ನಿಧಾನವಾಗಿ ಮಹಿಳೆಯ ತೂಕ ಹೆಚ್ಚುತ್ತ, ಬೊಜ್ಜು ಬೆಳೆಯುತ್ತಿದೆ. ಬೊಜ್ಜು, ಅದೇ ಒಂದು ಕಾಯಿಲೆ ಏನಲ್ಲ. ಆದರೆ ಅದು ಹಲವಾರು ಗಂಭೀರ ಕಾಯಿಲೆಗಳಿಗೆ ಕರೆಯೋಲೆ.

ಜೊತೆಗೆ, ಹಳೆಯ ಕಾಲದ ಇದ್ದಿಲು, ಸೌದೆ ಒಲೆಗಳು ನೆಲದ ಮಟ್ಟದಲ್ಲಿ ಇರುತ್ತಿದ್ದವು. ಆಗ ಮಹಿಳೆ ಕುಳಿತು ಅಡುಗೆ ಮಾಡುತ್ತ, ಮಧ್ಯೆ ಮಧ್ಯೆ ನಿಲ್ಲುತ್ತ, ಓಡಾಡುತ್ತ ಇರಬೇಕಾಗುತ್ತಿತ್ತು. ಈಗಲಾದರೊ ಗ್ಯಾಸ್ ಒಲೆಗಳು ಎತ್ತರದ ಜಗಲಿಯ ಮೇಲೆಯೇ ಇರಬೇಕು. ಹಾಗಾಗಿ ಮಹಿಳೆ ನಿಂತೇ, ಹಲವಾರು ಗಂಟೆಗಳು, ಕಾರ್ಯನಿರ್ವಹಿಸಬೇಕು. ಮಿಕ್ಸರ್, ಗ್ರೈಂಡರ್ ಬಳಸುವಾಗಲೂ ನಿರಂತರ ನಿಂತೇ ಇರಬೇಕು. ಈ ರೀತಿಯ ಸತತ ನಿಲ್ಲುವಿಕೆ, ದೇಹದ ರಕ್ತ ಸಂಚಾರದ ಮೇಲೆ ಪರಿಣಾಮ ಬೀರುತ್ತದೆ. ಉತ್ಫಲವಾಗಿ ವೆರಿಕೋಸ್ ವೇಯ್ನ್ಸ್, ಮೂಳೆ ಸವೆತದಿಂದ ಮಂಡಿನೋವು ಉಂಟಾಗಿ ನಡೆದಾಡುವುದೇ ಕಷ್ಟವಾಗುತ್ತದೆ.

ನಗರಗಳಲ್ಲಿ ಏರುತ್ತಿರುವ ಜೀವನ ವೆಚ್ಚ ಹಾಗೂ ಮಹಿಳೆಗೆ ಉಳಿಕೆಯಾಗುವ ಕಾಲ ಇವನ್ನು ಸರಿದೂಗಿಸಲು, ಗಳಿಕೆಗಾಗಿ ಮನೆ ಹೊರಗಿನ ದುಡಿಮೆಗೂ ಮಹಿಳೆ ಕಾಲಿಟ್ಟಿದ್ದಾಳೆ, ಕಾಲಿಡಬೇಕಾಗಿದೆ. ಮನೆಯ ಒಳಗೆ ಹಾಗೂ ಹೊರಗೆ ಎರಡೂ ಕಡೆಯ ನಿರಂತರ, ವರ್ಷಗಟ್ಟಲೆ ಕಾಲದ ದುಡಿಮೆ ಅವಳನ್ನು ದೈಹಿಕವಾಗಿ, ಅದಕ್ಕಿಂತ ಹೆಚ್ಚಾಗಿ ಮಾನಸಿಕವಾಗಿ ದಣಿಸುತ್ತಿದೆ. ಮಕ್ಕಳು ಚಿಕ್ಕವರಾಗಿದ್ದರಂತೂ ಅವರನ್ನು ಸಂಭಾಳಿಸಿ, ಹೊರಗೂ ದುಡಿಯುವುದು ಒಂದು ಸವಾಲೇ ಸರಿ. ಹೀಗಾಗಿ ಇಂದು ಮಹಿಳೆ ಒತ್ತಡದ ಬೇನೆಗಳಿಗೆ ಬಲಿಯಾಗುತ್ತಿದ್ದಾಳೆ.

ಮಹಿಳೆಯನ್ನು ಇದಕ್ಕಿಂತಲೂ ಗಂಭೀರವಾದ ಸಮಸ್ಯೆಗಳಿಗೆ, ಸಂಕಟಗಳಿಗೆ ಸಿಲುಕಿಸಿದೆ, ವಿಜ್ಞಾನ, ತಂತ್ರಜ್ಞಾನದಿಂದ ವಿವಿಧ ಕ್ಷೇತ್ರಗಳಲ್ಲಾಗಿರುವ ಅಗಾಧ, ಅನೂಹ್ಯ ಬೆಳವಣಿಗೆ. ಈ ಬೆಳವಣಿಗೆ ಮಹಿಳೆಗೆ ಬೇಡದ ಬಸಿರನ್ನು ಹೊರುವ, ಬೇಕಿಲ್ಲದಾಗ ಮಕ್ಕಳನ್ನು ಹೆರುವ, ಕಷ್ಟ ತಪ್ಪಿಸಿದೆ, ನಿಜ; ಎಷ್ಟು ಬೇಕೋ ಅಷ್ಟು ಮಕ್ಕಳನ್ನು ಮಾತ್ರವೇ ಪಡೆಯುವ ಅವಕಾಶವನ್ನೂ ಒದಗಿಸಿದೆ. ಆದರೆ ಇದೇ ಸಾಧನಗಳೇ ಎರಡಲಗಿನ ಕತ್ತಿಯಂತೆ ಆಗಿವೆ. ಅದಕ್ಕೆ ವಿಜ್ಞಾನ, ತಂತ್ರಜ್ಞಾನ ಕಾರಣವಲ್ಲ, ನಿಜ. ವಿಜ್ಞಾನದ ಕೊಡುಗೆಯನ್ನು ಹೇಗೆ ಬಳಸಬೇಕು ಎಂಬುದು ಮಾನವನ ವಿವೇಚನೆಗೆ ಬಿಟ್ಟ ವಿಷಯವಾದರೂ, ಯಾವುದಕ್ಕೆ ಬೇಕಾದರೂ ಬಳಸಬಹುದು ಎನ್ನುವಂತಹುದನ್ನು ತನ್ನ ಅನುಕೂಲಕ್ಕೆ, ಸ್ವಾರ್ಥಕ್ಕೆ ಮನಸ್ವೀ ಬಳಸುವುದು ಮಾನವ ಸಹಜವಲ್ಲವೇ ?

ಇಂದಿನ ವೈದ್ಯಕೀಯರಂಗದಲ್ಲಿ, ತಂತ್ರಜ್ಞಾನದ ಬೆಳವಣಿಗೆಯಿಂದಾಗಿ, ಶಿಶು ತಾಯಿಯ ಗರ್ಭದಲ್ಲಿರುವಾಗಲೇ ಅದರ ಅಂಗರಚನೆ (ವೈಕಲ್ಯಗಳಿದ್ದರೆ ಅವನ್ನೂ) ತಿಳಿಯುವಂತಾಗಿದೆ. ಅಂಗರಚನೆ ತಿಳಿಯುವಾಗ ಮಗುವಿನ ಲಿಂಗವೂ ತಾನಾಗಿಯೇ ತಿಳಿದುಬರುತ್ತದೆ. ಈ ಅಂಶ ಗೊತ್ತಾದೊಡನೆಯೇ ವೈದ್ಯರ ಮುಂದೆ ಲಕ್ಷ್ಮೀ ಭಂಡಾರವೇ ಬಾಗಿಲು ತೆಗೆದಂತಾಯಿತು. ಇದರಿಂದ ಶಿಶುವಿನ ತಾಯ್ತಂದೆಯರಿಗೆ ತಮಗೆ ಬೇಕಾದಂಥ ಮಗುವನ್ನು ಮಾತ್ರವೇ ಪಡೆಯಲು ಸಾಧ್ಯ ಎಂಬ ಸಂತೋಷ ಉಂಟಾಯಿತು. ಪರಿಣಾಮವಾಗಿ, ನಮ್ಮ ದೇಶದಲ್ಲಿ ಬಹುತೇಕ ದಂಪತಿಗಳಿಗೆ ಬೇಡವಾಗಿರುವ ಹೆಣ್ಣು ಮಗು ಗರ್ಭದಲ್ಲಿರುವುದು ಗೊತ್ತಾದೊಡನೆಯೇ ಅದನ್ನು ಅಲ್ಲಿಯೇ, ಹುಟ್ಟುವ ಮೊದಲೇ ಹೊಸಕಿ ಹಾಕಿಬಿಡುವುದು ಆರಂಭವಾಯಿತು. ಮೊದಮೊದಲು ಗುಟ್ಟಿನಲ್ಲಿ ನಡೆಯುತ್ತಿದ್ದುದು ಅನಂತರ ರಾಜಾರೋಷವಾಗಿ "ಭ್ರೂಣ ಲಿಂಗ ಪತ್ತೆ ಕೇಂದ್ರ"ಗಳೇ ಆರಂಭವಾದವು. "ಈಗ ಮೂರು ಸಾವಿರ ರೂ. ಖರ್ಚು ಮಾಡಿ, ಮುಂದೆ ಮೂವತ್ತು ಲಕ್ಷ ರೂಪಾಯಿಗಳನ್ನು ಉಳಿಸಿ" ಎಂದು ಘೋಷಿಸುವ ಜಾಹೀರಾತುಗಳು ಎಲ್ಲೆಲ್ಲೂ ನಿರ್ಲಜ್ಜೆಯಿಂದ ರಾರಾಜಿಸಿದವು. ಹೀಗೆ ಹೆಣ್ಣು ಭ್ರೂಣದ ಹುಟ್ಟಡಗಿಸುವಾಗ ಅನೇಕ ವೇಳೆ, ಆ ತಾಯಿಯ ಇಚ್ಛೆ–ಅನಿಚ್ಛೆಗಳನ್ನು ಗಮನಿಸುವವರೇ ಇಲ್ಲ; ಜೊತೆಗೆ ಅವಳ ದೇಹಾರೋಗ್ಯದ ಮೇಲಾಗುವ ಪರಿಣಾಮವಂತೂ ಸಂಬಂಧಿಸಿಯೇ ಇಲ್ಲವೆಂಬಂತಿರುತ್ತಾರೆ ಸಂಬಂಧಪಟ್ಟವರು ! ಒಂದಾದಮೇಲೊಂದು, ಹೆಣ್ಣು ಶಿಶುವೇ ಪ್ರತಿಸಲವೂ ಯಾವ ಮಹಿಳೆಯ ಗರ್ಭದಲ್ಲಾದರೂ ರೂಪುಗೊಳ್ಳುತ್ತಿದ್ದರೆ, ಆಕೆ ಸತತವಾಗಿ ಗರ್ಭಪಾತಕ್ಕೆ ಒಳಗಾಗುತ್ತಿರಲೇಬೇಕು. (ನಮ್ಮ ಮನೆಯ, ಮನೆಗೆಲಸಕ್ಕೆ ಬರುತ್ತಿದ್ದ ಹದಿನೆಂಟೇ ವರ್ಷದ ಹುಡುಗಿ ಹೀಗೆ ಮೂರು ಸಲ ಗರ್ಭಪಾತಕ್ಕೆ ಒಳಗಾಗಿ, ಜೀವದಿಂದ ಉಳಿದಿದ್ದೇ ಒಂದು ಪವಾಡವೆನಿಸಿಬಿಟ್ಟಿತು). ಆ ಮಹಿಳೆಯ ದೈಹಿಕ, ಮಾನಸಿಕ ಸ್ಥಿತಿ ಯಾವುದಕ್ಕೂ ಯಾವ ಬೆಲೆಯೂ ಇಲ್ಲ. ಮಾನವನ ಕ್ರೌರ್ಯದಿಂದ ಆಗುವ ವಿಜ್ಞಾನದ ದುರ್ಬಳಕೆಗೆ ಒಂದು ಉದಾಹರಣೆಯಾದ ಇದು ಮಹಿಳಾ ಶೋಷಣೆಯ ನಿದರ್ಶನವೂ ಹೌದು.

ಮತ್ತೊಂದು ಇಂತಹ ಉದಾಹರಣೆ ಎಂದರೆ ಮೊಬೈಲ್‌ನ ದುರ್ಬಳಕೆ. ಹುಡುಗಿಯರಿಗೂ ವಯಸ್ಕ ಮಹಿಳೆಯರಿಗೂ ಅಶ್ಲೀಲ ಸಂದೇಶಗಳನ್ನೂ, ಚಿತ್ರಗಳನ್ನೂ ಕಳಿಸಿ ಹಿಂಸಿಸುವುದು, ಆ ಮೂಲಕ "ಬ್ಲಾಕ್‌ಮೇಲ್" ಮಾಡುವುದು ಇವೆಲ್ಲ ಅನೇಕರ ವಿಕೃತ ಚಟ. ಇದರಿಂದಾಗಿ ಎಷ್ಟೋ ಮರ್ಯಾದಸ್ಥ ಗೃಹಿಣಿಯರ ಮದುವೆಗಳೇ ಮುರಿದುಬಿದ್ದು, ದಾಂಪತ್ಯ ವಿಚ್ಛೇದನಕ್ಕೆ ದಾರಿಮಾಡಿ ಕೊಟ್ಟಿವೆ ? ಇವುಗಳ ಜೊತೆ, ಈಗ ಹೊಸದಾಗಿ ಎದ್ದಿರುವ ಬಾಡಿಗೆ ತಾಯ್ತನ ಎಂಬ ಅಲೆ ಎಲ್ಲಿಗೆ ಕರೆದೊಯ್ಯುವುದೋ ತಿಳಿಯದು. ಮಗುವೊಂದನ್ನು ರೂಪಿಸಿ, ಒಂಬತ್ತು ತಿಂಗಳು ತನ್ನೊಳಗೇ ಪೋಷಿಸಿ ನಂತರ ಈ ಜಗತ್ತಿಗೆ ಅದನ್ನು ತರುವುದು ಮಹಿಳೆಗೆ ಮಾತ್ರವೇ ಸಾಧ್ಯವಾಗುವ ಒಂದು ಮಹತ್ಕಾರ್ಯ. ಆದರೆ, ದುರದೃಷ್ಟವಶಾತ್, ಕೆಲವು ಮಹಿಳೆಯರಿಗೆ ಇದು ಸಾಧ್ಯವಾಗುವುದಿಲ್ಲ. ಅವರು ಜೀವವೊಂದನ್ನು ಸೃಷ್ಟಿಸಬಲ್ಲರಾದರೂ, ರೂಪಿಸಿ, ತನ್ನದೇ ಒಡಲಲ್ಲಿ ಪೋಷಿಸಿ, ಬೆಳೆಸಿ, ಹೊರಜಗತ್ತಿಗೆ ತರಲು ಅವರಿಗೆ ಸಾಧ್ಯವಾಗುವುದಿಲ್ಲ; ಇದು ಅವರ ಒಳಾಂಗದ ರಚನೆಯಲ್ಲೇ ಇರುವ ನ್ಯೂನತೆಯ ಪರಿಣಾಮ. ಹಾಗಾಗಿ ಅವರ ದಾಂಪತ್ಯ ಫಲವನ್ನು, ಅವರು ಬೇರೊಬ್ಬ ಮಹಿಳೆಯ ಒಡಲಲ್ಲಿ ಬೆಳೆಸಿಯೇ ಬಾಹ್ಯಜಗತ್ತಿಗೆ ತಂದುಕೊಳ್ಳಬೇಕು. ವಿಜ್ಞಾನ, ತಂತ್ರಜ್ಞಾನದ ಮುನ್ನಡೆಯಿಂದಾಗಿ ಇದು ಸಾಧ್ಯವಾಗಿದೆ. ಯಾವ ಮಹಿಳೆಯು ಈ ರೀತಿ, ತನ್ನ ಹಾಗೂ ತನ್ನ ಪತಿಯದಲ್ಲದ, ಒಂದು ಜೀವವನ್ನು ತನ್ನ ಒಡಲಲ್ಲಿ ಇರಿಸಿಕೊಂಡು, ಬೆಳೆಸಿ, ಪೋಷಿಸಿ ಹೊರಜಗತ್ತಿಗೆ ತರುತ್ತಾಳೋ ಅವಳು ಬಾಡಿಗೆ ತಾಯಿ ಎನಿಸಿಕೊಳ್ಳುತ್ತಾಳೆ. ಈ ರೀತಿ, ಬೇರೆ ಹೆಣ್ಣೊಬ್ಬಳ ದೇಹವನ್ನು ತಮ್ಮ ಮಗುವು ರೂಪುಗೊಳ್ಳುವ, ಕೆಲ ತಿಂಗಳುಗಳ ಕಾಲ ವಾಸಿಸಲು ಪಡೆಯುವುದರಿಂದ ಆ ಹೆಣ್ಣಿಗೆ ಬಾಡಿಗೆ ತಾಯಿ ಎನ್ನುತ್ತಾರೆ. ಬಾಡಿಗೆ ತಾಯಿ ಎಂದಮೇಲೆ ಬಾಡಿಗೆ ಕೊಡಬೇಕಲ್ಲವೇ ? ಅದರಂತೆ, ತನ್ನೊಳಗೆ ಆ ಭ್ರೂಣಕ್ಕೆ ಸ್ಥಳ ಕೊಟ್ಟು ಬೆಳೆಸಿ, ಹೊರತರುವವರೆಗೂ, ಆ ತಾಯಿಯ ಆರೈಕೆಗಾಗಿ, ಹೆರಿಗೆ ಸಮಯದ ವೆಚ್ಚಗಳಿಗಾಗಿ, ಹಣವನ್ನೂ ಕೊಡುತ್ತಾರೆ, ಆ ಭ್ರೂಣದ ಜೀವಕ್ಕೆ ಕಾರಣರಾದ ದಂಪತಿಗಳು. ಈ ರೀತಿ ಮನೆಯೊಂದನ್ನು ಬಾಡಿಗೆಗೆ ಪಡೆಯುವಂತೇ ಷರತ್ತುಬದ್ಧವಾಗಿ ಬಾಡಿಗೆಗೆ ಹೆಣ್ಣಿನ ಗರ್ಭವನ್ನು ಪಡೆಯುವ ಪದ್ಧತಿ ತಲೆ ಎತ್ತಿ ನಿಧಾನವಾಗಿ ಪ್ರಸಾರವಾಗುತ್ತಿದೆ. ಕ್ರಮೇಣ ಇದು ದಂಧೆಯ ರೂಪ ತಾಳಿದರೂ ಆಶ್ಚರ್ಯವಿಲ್ಲ.

ಈ ವ್ಯವಹಾರದಲ್ಲಿ ಹೆಣ್ಣಿನ ಇಷ್ಟ–ಕಷ್ಟಗಳನ್ನು, ಬಾಡಿಗೆಗೆ ಬಸಿರನ್ನು ಹೊರುವಾಗ, ತನ್ನದಲ್ಲದ ಆ ಮಗುವನ್ನು ಹೆರುವಾಗ, ಆ ತಾಯಿಗೆ ಆಗಬಹುದಾದ ದೈಹಿಕ, ಮಾನಸಿಕ ತೊಂದರೆಗಳಿಗಾಗಲೀ, ಹೆರಿಗೆ ಸಮಯದ ರಿಸ್ಕ್‌ಗಳಿಗಾಗಲೀ ಗಮನಕೊಡದೇ, ಹೆಣ್ಣೊಬ್ಬಳಿಂದ ತಮಗೆ ದೊರೆಯ ಬಹುದಾದ ಲಾಭಕ್ಕೆ ಅವಳಿಗೆ ಸಂಬಂಧಪಟ್ಟವರು ಹೆಚ್ಚು ಆಸೆಪಡುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ ! ಈಗಾಗಲೇ, ಗುಟ್ಟು ಗುಟ್ಟಾಗಿ ಹಾಗೆ ನಡೆಯುತ್ತಲೂ ಇರಬಹುದು. ಅಂತೂ ವಿಜ್ಞಾನದ ಮುನ್ನಡೆಯಿಂದ ಇಲ್ಲಿಯೂ ಮತ್ತೆ ಮಹಿಳೆಯ ಮೈಮನಗಳಿಗೇ ಹೊಡೆತ, ಆಘಾತ !

ಅನೇಕರ ಕಠಿಣ ಪರಿಶ್ರಮದ ಫಲವಾಗಿ ರೂಪುಗೊಂಡ ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದ ಅಮೂಲ್ಯ ಕೊಡುಗೆಗಳು, ನೈತಿಕ ಮೌಲ್ಯಗಳೇ ಇಲ್ಲದ ಕೇವಲ ಹಣದಾಹಿಗಳ ಕೈಗೆ ಸಿಕ್ಕಿ ಹೀಗೆ ದುರ್ಬಳಕೆಯಾಗುತ್ತಿದೆ. ಈ ದುರ್ಬಳಕೆಗೆ ಬಲಿಯಾಗುತ್ತಿರುವುದು ಮಹಿಳೆಯೇ ಎಂಬುದು ಅತೀವ ನೋವಿನ ಹಾಗೂ ಅತ್ಯಂತ ಅಪಮಾನದ ಸಂಗತಿ.

**ಬಿ. ಜಿ. ಕುಸುಮಾ**
ನಂ. ೧೯೪, ೫ನೇ ಮುಖ್ಯರಸ್ತೆ, ೪ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ ೩ನೇ ಹಂತ
ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಕರೆಯೋ ಪದಗಳು

ಹೆಣ್ಣು ಗಂಡನನ್ನು ಪ್ರೀತಿಯಿಂದ ಏಕವಚನದಲ್ಲೂ ಕರೀತಾಳೆ. ನಮ್ಮ ನೆರೆಮನೆಯ ಹೆಣ್ಣೊಬ್ಬಳು ಗಂಡನನ್ನು "ಪ್ರಭಾಕರ್... ಊಟಕ್ಕೆ ಬಾರೋ" ಎಂದು ಏಕವಚನದಲ್ಲಿ ಕರೀತಿದ್ದಾಳೆ. ನಮ್ಮ ಅತ್ತೆ ಕುಪ್ಪಕ್ಕ ಒಂಭತ್ತು ವರ್ಷದಲ್ಲೇ ಮದುವೆಯಾಗಿ ಹನ್ನೊಂದನೇ ಪ್ರಾಯಕ್ಕೆ ಕಾಲಿರಿಸಿದಾಗ ಗಂಡನ ಕಡೆಯವರು ಅವರ ತಲೆ ಬೋಳಿಸಿ ಕೆಂಪು ಸೀರೆ ಉಡಿಸಿ ಅಂಗಾರಕ ಹಚ್ಚಿ ಕಳಿಸಿದ್ದರು. ಅವರೊಡನೆ ಯಾರಾದರೂ 'ನಿಮ್ಮ ಗಂಡನ ಹೆಸರೇನಮ್ಮಾ' ಎಂದು ಕೇಳಿದರೆ ಹೆಸರು ಹೇಳಲಾಗದೆ ಪ್ರಹಲ್ಲಾದನ ತಂದೆಯನ್ನು ಕೊಂದರಲ್ಲಾ ಆ ದೇವರ ಹೆಸರು ಎಂದು ಹೇಳುತ್ತಿದ್ದರು.

ನಮ್ಮ ಕನ್ನಡದಲ್ಲಿ ಸಿಗದ ಕನ್ನಡ ಪದಗಳೇ ಇಲ್ಲ. ಅದಕ್ಕಾಗಿಯೇ ಸರಕಾರ "ಕನ್ನಡವನ್ನೇ ಬಳಸಿ, ಕನ್ನಡವನ್ನು ಉಳಿಸಿ" ಅಂತಿದ್ದಾರೆ. ನಾಮಪದ, ಕರ್ಮಪದ, ಕ್ರಿಯಾಪದ ವಿಶೇಷಣಗಳಲ್ಲಿ ಯಾವುದರ ವಾಕ್ಯದಲ್ಲೂ ಬಳಸಲು ಶಬ್ದಗಳು ಸಾಕಷ್ಟಿವೆ. ಗೌರವಯುಕ್ತವಾಗಿ ಕರೀಬೇಕಾಗಿದ್ರೆ ಸ್ವಾಮಿ, ಸಾರೂ, ಅಯ್ಯಾ ಎಂಬ ಕೆಲವಾರು ಪದಗಳಿವೆ. ಸಮವಯಸ್ಕರನ್ನು ಕರೆಯಲು "ನೋಡಿ, ಮಿಸ್ಟರ್, ಸಿಸ್ಟರ್" ಎಂಬ ಅನೇಕ ಶಬ್ದಗಳಿವೆ. ಸ್ವಲ್ಪ ಪ್ರಾಯ ಜಾಸ್ತಿಯಾದವರನ್ನು ಕರೆಯಲು ಇಂಗ್ಲಿಷ್ ಬಳವಳಿಯ "ಅಂಕಲ್, ಆಂಟಿ" ಶಬ್ದಗಳಿವೆ. ತಲೆಗೂದಲು ಬಿಳಿಯಾದವರನ್ನು ಕರೆಯಲು "ಅಜ್ಜಾ , ಅಜ್ಜಿ" ಪದಗಳಿವೆ. ಚಿಕ್ಕ ಮಕ್ಕಳನ್ನು ಕರೆಯಲು "ಮರಿs, ಪುಟ್ಟಾ , ಚಿನ್ನೂ" ಶಬ್ದಗಳಿವೆ. ಯೌವನದ ಅಣ್ಣಾ, ಅತ್ತಿಗೆ ಮರೆಯಾಗಿ 'ಅಂಕಲ್, ಆಂಟಿ', ಶಬ್ದಗಳು ಬಂದಾಗಿವೆ. ನಾನು ಕನ್ನಡಿ ನೋಡಿ ನನ್ನ ಮುಖ, ಎದೆ, ತೋಳುಗಳನ್ನು ನೋಡಿಕೊಂಡಿದ್ದೆ. 'ಅಣ್ಣಾ' ಹೋಗಿ ಅಂಕಲ್ ಆದಾಗಲೇ ಸ್ವಲ್ಪ ಬೇಸರವಾಗಿತ್ತು. ಆದರೆ 'ಅಂಕಲ್' ಮೊನ್ನೆ ಹಲ್ಲು ಫಿಲ್ ಮಾಡಿಸಿಕೊಳ್ಳಲು ಆಸ್ಪತ್ರೆಗೆ ಹೋದಾಗ ಜ್ಯೂನಿಯರ್ ಡಾಕ್ಟರ್ ಒಬ್ಬ ಹೇಳಿದ, "ಸರಿಯಾಗಿ ಬಾಯಿ ಬಿಡಿಸಿ ಅಜ್ಜಾ" ಅಂತ. ಹಾಗಾದರೆ ನಾನು 'ಮಿಸ್ಟರ್' ಹೋಗಿ, 'ಅಣ್ಣಾ' ಹೋಗಿ 'ಅಂಕಲ್' ಹೋಗಿ ಈಗ ಅಜ್ಜನಾದೆನೇ ? ಪ್ರಾಯ ಐವತ್ತೈದು ಆದಾಗಲೇ ನಾನು ಅಜ್ಜನಾದರೆ ಇನ್ನು ಎಪ್ಪತ್ತೈದು ಆದಾಗ ಬದುಕಿದ್ದರೆ ಏನಾಗುತ್ತಿದ್ದೆ ?

ನಾನೀಗ ಹೇಳಹೊರಟದ್ದು ಕೆಲವು ಕರೆಯೋ ಪದಗಳನ್ನು ಗುರುತಿಸಲಿಕ್ಕಾಗಿ. ಗಂಡನಾದವನು ಹೆಂಡತಿಯನ್ನು ಮೊದಲ ವರ್ಷ ಡಾರ್ಲಿಂಗ್ ಎನ್ನಬಹುದು. ಮದುವೆಯ ಮೊದಲೂ ಆ ಶಬ್ದ ಸಾಮಾನ್ಯ. ಆದರೆ ಬರಬರುತ್ತಾ ಆ ಶಬ್ದಗಳು ಬದಲಾಗುತ್ತವೆ. "ಹೌದಾ"... "ಕೇಳಿತಾ"... "ಲೇ..." ... "ಇಗಾ..." ಇತ್ಯಾದಿ ಪದಗಳು ಹೆಂಡತಿಯನ್ನು ಗಂಡ ಕರೆಯೋ ಶಬ್ದಗಳು. ಹಾಗೆಯೇ "ರೀ..." "ಏನೂಂದ್ರೆ", "ಕೇಳಿತಾ ?" "ಏನ್ರೀs..." "ಓಯ್..." "ನೋಡಿ" ಎಂಬ ಶಬ್ದಗಳಿವೆ. ಇವೆಲ್ಲಾ ವಿಶೇಷಣಗಳಂತೆ ಕಂಡರೂ ಇವು ಶುದ್ಧ ನಾಮಪದಗಳೆಂದು ಯಾವ ವ್ಯಾಕರಣಕಾರರೂ ಹೇಳಬಹುದು. ಬೆಂಗಳೂರು ಕಡೆ "ಏನಪ್ಪಾ" "ಲೋ..." "ಕೇಳೋದಿಲ್ಲೇನು" ಎಂಬ ಪದಗಳಿದ್ದರೆ ಬಿಜಾಪುರದ ಕಡೆ "ಯಜಮಾನ್ರಿಲ್ಲೇ" ಎಂದರೆ ಅವರು ಆತ "ಕೂಲಿಗೆ ಹೋಗವ್ನೆ. 'ನೀವು' ಬಂದು ವದರಿದ್ರೀ ಅಂತ ಬೈಸರಿಗೆ ಹೇಳ್ತೇನೆ" ಅಂತಾಳೆ. ಅಥವಾ "ಹಿಂದಾಗಡೆಯಿಂದ ಬನ್ನಿ" (ಅಂದರೆ 'ಮತ್ತೆ ಬನ್ನಿ' ಎಂಬ ಶಬ್ದ) ಅಂತಾಳೆ.

ಹೀಗೆ 'ಗಂಡ' ಎಂಬ ಶಬ್ದಕ್ಕೆ ಗಂಡಾಂತರ ಕಾಲೀ ಶಬ್ದಗಳಾದ "ಏನ್ರಿ ?" "ಕೇಳಿತಾ" ? "ಏನೂಂದ್ರೆ", "ಹೌದಾ" "ಓ ಯಜಮಾನ್ರೆ" ಎಂಬ ವಿಧವಿಧವಾದ ಶಬ್ದಗಳಿವೆ. ಇವೆಲ್ಲಾ ನಿಜವಾದ ನಾಮಧೇಯಗಳಲ್ಲ. ಹೆಂಡತಿ ಗಂಡನನ್ನು ಕರೆಯೋಕೆ ಉಪಯೋಗವಾಗುವ ಶಬ್ದಗಳು. ಹಾಗೆಯೇ ಹೆಂಡತಿಯನ್ನು ಕರೆಯುವಾಗ "ಲೇ" "ಕೇಳಿತಾ" "ಹೌದಾ ?" "ಇಗಾ" "ಏ..." ಇತ್ಯಾದಿ ಶಬ್ದಗಳಿವೆ. "ಅಪ್ಪ" "ಅಮ್ಮ"ನಿಗೆ ಕನ್ನಡದಲ್ಲಿ ಒಂದೇ ಶಬ್ದ. ಮಾ, ಮಮ್ಮಿ, ಡ್ಯಾಡಿಗಳು ಖರೀದಿಸಿದ ಶಬ್ದಗಳು. ಹಾಗೆಯೇ ದೊಡ್ಡಪ್ಪ, ದೊಡ್ಡಮ್ಮ, ಅಜ್ಜ, ಅಜ್ಜಿ, ಚಿಕ್ಕಪ್ಪ, ಚಿಕ್ಕಮ್ಮ ಮಾವ, ಅತ್ತೆ, ಅಕ್ಕ, ಅಣ್ಣ ಶಬ್ದಗಳಿಗೆ ಕನ್ನಡದ ಬೇರೆ ಶಬ್ದಗಳಿಲ್ಲ. ಆದ್ದರಿಂದಲೇ ಗಂಡ-ಹೆಂಡತಿಯರ ನಡುವಿನ ಕರೆಯೋ ಶಬ್ದಗಳಲ್ಲಿ ನೂರೊಂದು ರೀತಿ. ಅಭ್ಯಾಸವಾದಮೇಲೆ ಗಂಡ ತನ್ನನ್ನು ಕರೆಯುವ ಶಬ್ದಗಳ್ಯಾವುವೆಂದು ಹೆಂಡತಿಗೆ ಗೊತ್ತಾಗುತ್ತದೆ. ಹಾಗೆಯೇ ಗಂಡನಿಗೂ, "ಏನ್ರಿ", "ಓಯ್" "ಏನೂಂದ್ರೆ", "ರೀ..." "ಹೌದಾ" "ಕೇಳಿತಾ" "ನೋಡಿ" ಎಂದು ಕರೆದ ಶಬ್ದ ಕೇಳಿದಾಗ ಅದು ತನ್ನ ಹೆಂಡತಿಯೇ ನನ್ನನ್ನು ಕರೆಯೋದು ಎಂದು ಕೂಡಲೇ ಅರ್ಥವಾಗುತ್ತದೆ.

ಹಾಗಾದರೆ 'ಗಂಡ-ಹೆಂಡತಿಯ ನಡುವೆ ಮಾತ್ರ ಈ ಕರೆಯೋ ಪದಗಳು ಯಾಕೆ ?' ಎಂದು ಕೇಳಿದರೆ ವ್ಯಾಕರಣಕಾರರು ಉತ್ತರಿಸಲಾರರು. ಪುರಾಣ ಕಾಲದಲ್ಲಿ "ಪ್ರಿಯಕರಾ... ಪ್ರಾಣೇಶಾ... ಪತಿದೇವ, ಒಡೆಯಾ, ಪ್ರಾಣ ವಲ್ಲಭ" "ಕಾಂತಾ" "ಪ್ರಣಯ ರಾಜಾ" ಎಂಬ ವಿಶೇಷ ನಾಮಪದಗಳಿದ್ದವು. ಅವುಗಳಿಗೆ ಈಗ ಬೆಲೆಯಿಲ್ಲ ಬಿಡಿ. ಆದರೆ 'ಮಾವಾ, ಅತ್ತೆ' ಎಂದ ಹಾಗೆ 'ಗಂಡಾ', 'ಹೆಂಡತೀs' ಎಂಬ ಶಬ್ದಗಳೂ ಈಗ ನಾಟಕೀಯವಾದಾವು. ಹಿರಿಯರು ಹೇಳಿದಂತೆ ಗಂಡ-ಹೆಂಡಂದಿರು ಹೆಸರು ಹಿಡಿದು ಕರೀಬಾರದೆಂಬ ಕಾರಣ ಮದುವೆಯಾದಾಗಲೇ ಹೆಂಡತಿಯ ಹೆಸರನ್ನು, ಗಂಡಿನ ಕಡೆಯವರು ಬದಲಿಸುತ್ತಾರೆ. ಹೆಂಡತಿಯಂತೂ ಗಂಡನನ್ನು ಹೆಸರು ಹಿಡಿದು ಕರೆಯೋಲ್ಲ. ಆದರೆ ಈಗಿನ ಕಾಲದಲ್ಲಿ ಅದನ್ನು ಮೀರಿಸಿ ಹೆಸರು ಹಿಡಿದು ಕರೆಯೋದು ಮಾತ್ರವಲ್ಲ, ಹೆಣ್ಣು ಗಂಡನನ್ನು ಪ್ರೀತಿಯಿಂದ ಏಕವಚನದಲ್ಲೂ ಕರೀತಾಳೆ. ನಮ್ಮ ನೆರೆಮನೆಯ ಹೆಣ್ಣೊಬ್ಬಳು ಗಂಡನನ್ನು "ಪ್ರಭಾಕರ್... ಊಟಕ್ಕೆ ಬಾರೋ" ಎಂದು ಏಕವಚನದಲ್ಲಿ ಕರೀತಿದ್ದಾಳೆ. ನಮ್ಮ ಅತ್ತೆ ಕುಪ್ಪಕ್ಕ ಒಂಭತ್ತು ವರ್ಷದಲ್ಲೇ ಮದುವೆಯಾಗಿ ಹನ್ನೊಂದನೇ ಪ್ರಾಯಕ್ಕೆ ಕಾಲಿರಿಸಿದಾಗ ಗಂಡನ ಕಡೆಯವರು ಅವರ ತಲೆ ಬೋಳಿಸಿ ಕೆಂಪು ಸೀರೆ ಉಡಿಸಿ ಅಂಗಾರಕ ಹಚ್ಚಿ ಕಳಿಸಿದ್ದರು. ಅವರೊಡನೆ ಯಾರಾದರೂ 'ನಿಮ್ಮ ಗಂಡನ ಹೆಸರೇನಮ್ಮಾ' ಎಂದು ಕೇಳಿದರೆ ಹೆಸರು ಹೇಳಲಾಗದೆ ಪ್ರಹಲ್ಲಾದನ ತಂದೆಯನ್ನು ಕೊಂದರಲ್ಲಾ ಆ ದೇವರ ಹೆಸರು ಎಂದು ಹೇಳುತ್ತಿದ್ದರು. ಅವರು ಸಾಯೋವರೆಗೂ ಮಕ್ಕಳಿಲ್ಲದ ಕಾರಣ ಗಂಡನ ಶ್ರಾದ್ಧ ಮಾಡುತ್ತಿದ್ದರು. ಪುರೋಹಿತರಿಗೆ ಮಾತ್ರ ಗೊತ್ತು ಅವರ ಗಂಡನ ಹೆಸರು ನರಸಿಂಹ ಅಂತ. ಅದಕ್ಕೇ ನಾನು ಹೇಳಿದ್ದು, ಕರೆಯೋ ಪದಗಳು ನಾಮಕರಣದ ಪದಗಳಲ್ಲಾ ಎಂದು !

**ರಾಘವೇಂದ್ರ ಉಡುಪಿ**
'ಶ್ಯಾಮಲಾ ಸದನ', ನಂ. ೮-೩-೫೧, ಕೆ. ಎ. ಮಾರ್ಗ
ಕುಂಜಿಬೆಟ್ಟು, ಉಡುಪಿ – ೫೭೬ ೧೦೨

# ಪರಿಕಲ್ಪನೆಗಳ ಅಸಂಬದ್ಧ ವಾದದಲ್ಲಿ ಭಾರತ



## ಹಿಂಸೆ ಮತ್ತು ಅಹಿಂಸೆ ಕುರಿತು ಅಂಶಸೂಚಿ ಅಭಿಪ್ರಾಯ

ರಾಜ್ಯದ ಆಧುನಿಕತೆಯ ಪರಿಕಲ್ಪನೆಯನ್ನು ಮತ್ತು ಅದರಲ್ಲಿ ನಡೆಯುತ್ತಿರುವ ಆರ್ಥಿಕ ಹಾಗೂ ರಾಜಕೀಯ ಪ್ರಕ್ರಿಯೆಗಳನ್ನು ವಿಚಾರಿಸಿದಾಗ ಕಾರ್ಲ್ ಮಾರ್ಕ್ಸ್‌ರ ವಿಚಾರಗಳು ನೆನಪಿಗೆ ಬರುತ್ತವೆ. ಕಾರ್ಲ್ ಮಾರ್ಕ್ಸ್‌ರ ಪ್ರಕಾರ ರಾಜ್ಯವು ವರ್ಗತುಳಿತದ ಸಾಧನ. ಶ್ರೀಮಂತ ವರ್ಗದ ಹತೋಟಿಯಲ್ಲಿರುವ ರಾಜ್ಯ ಬಡವರ್ಗದ ಶೋಷಣೆಯಲ್ಲಿ ಕಾರ್ಯನಿರತವಾಗುವ ಉಪಕರಣ ಎಂದು ಅವರು ವಿಶ್ಲೇಷಿಸುತ್ತಾರೆ. ಭಾರತವನ್ನು ಆಧುನಿಕ ರಾಜ್ಯದ ಪರಿಕಲ್ಪನೆಯಲ್ಲಿಟ್ಟು ನೋಡಿದಾಗ ಅದರಲ್ಲಿರುವ ಬಹುಪಾಲು ಆರ್ಥಿಕ ಮತ್ತು ರಾಜಕೀಯ ಪ್ರಕ್ರಿಯೆಗಳು ಸಾಮಾಜಿಕ ಹಾಗೂ ಆರ್ಥಿಕವಾಗಿ ತುಳಿಯಲ್ಪಟ್ಟ ವರ್ಗಗಳ ಕಲ್ಯಾಣದ ಕೆಲಸದಲ್ಲಿ ನಿಶ್ಚಿತ ಫಲಿತಾಂಶವನ್ನು ತೋರಿಸದೆ ಈ ವರ್ಗಗಳ ತುಳಿತಕ್ಕೆ ಕೆಲವು ಬಾರಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣವಾಗಿದೆ.

✠ ಡಾ|| ಪ್ರಕಾಶ ದೇಸಾಯಿ



ಹಿಂಸೆ ಮತ್ತು ಅಹಿಂಸೆ ವಿಚಾರಗಳ ಕುರಿತು ಭರತ ಭೂಮಿಯಲ್ಲಿ ಪುರಾತನ ಕಾಲದಿಂದಲೂ ಚರ್ಚೆಗಳಾಗಿವೆ. ಬುದ್ಧ, ಮಹಾವೀರ, ಬಸವರಂತಹ ಮಹಾನ್ ತಾತ್ವಿಕರಿಂದ ಮಹಾತ್ಮ ಗಾಂಧಿಯವರಂತಹ ಮಹಾನ್ ಹೋರಾಟಗಾರರವರೆಗೂ ಈ ವಿಷಯಗಳು ಚಿಂತನೆಗೆ ಒಳಪಟ್ಟಿವೆ. ಸ್ವತಂತ್ರ ಭಾರತದಲ್ಲಿ ಈ ಎಲ್ಲ ತಾತ್ವಿಕರ ಚಿಂತನೆಗಳಿಗೆ ಸಾಂಕೇತಿಕ ಮಹತ್ವ ದೊರಕಿದೆಯೇ ಹೊರತು ಪ್ರಾಯೋಗಿಕವಾಗಿ ಅಲ್ಲ. ದೇಶದಲ್ಲಿರುವ ಬಹುತೇಕ ರಾಜಕೀಯ ಪಕ್ಷಗಳ ಧುರೀಣರು, ರಾಜಕೀಯೇತರ ಸಂಘ–ಸಂಸ್ಥೆಗಳ ಧುರೀಣರು, ಮತ್ತು ಚಿಂತಕರು ತಾವುಗಳು ಗಾಂಧಿಯವರಂತೆ ಅಹಿಂಸಾವಾದಿಗಳೆಂದು ಹೇಳಿಕೊಂಡರೂ ಬಹಳಷ್ಟು ಬಾರಿ ಅವರ ಕೃತಿ ಮತ್ತು ಮಾತುಗಳು ಗಾಂಧಿವಾದದ ತಿರುಳಿನಿಂದ ದೂರವೆ ಇರುತ್ತವೆ. ಹಿಂಸೆ ಮತ್ತು ಅಹಿಂಸೆ ವಿಷಯದ ಕುರಿತು ಸೂಕ್ಷ್ಮವಾಗಿ ಗಮನಿಸಿದಾಗ ಬಹಳಷ್ಟು ತಿಳಿದುಕೊಳ್ಳಬೇಕಾದ ವಿಚಾರಗಳು ಸಿಗುತ್ತವೆ. ಈ ಪ್ರಸ್ತುತ ಕಿರು ಪ್ರಬಂಧವು ದೇಶ ಸ್ವತಂತ್ರವಾದ ದಿನಗಳಿಂದ ಹಿಂಸೆ ಮತ್ತು ಅಹಿಂಸೆ ವಿಷಯಗಳ ಚರ್ಚೆಗಳು ದೇಶದ ಸಾರ್ವಜನಿಕ ವಲಯಗಳಲ್ಲಿ ತೀವ್ರ ಪ್ರಮಾಣದ ಗಮನ ಸೆಳೆಯದೆ ಭಾರತವು ಒಂದು ರಾಷ್ಟ್ರ–ರಾಜ್ಯವಾಗಿ ಅಭಿವೃದ್ಧಿಗೋಸ್ಕರ ಒಂದರ್ಥದಲ್ಲಿ ಎಸಗಿದ ಹಿಂಸಾಕೃತ್ಯಗಳನ್ನು ನೋಡುತ್ತಾ ಮೂಕಪ್ರೇಕ್ಷಕವಾಗಿವೆ ಎಂಬುವದರ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡಲು ಪ್ರಯತ್ನಿಸುತ್ತದೆ. ಪ್ರಬಂಧದಲ್ಲಿ ಹಿಂಸೆ ಮತ್ತು ಅಹಿಂಸೆ ವಿಷಯಗಳಿಗೆ ಸುತ್ತಿಕೊಂಡಿರುವ ಇನ್ನಿತರ ವಿಚಾರಗಳಾದ ಅಭಿವೃದ್ಧಿ, ರಾಷ್ಟ್ರ – ರಾಜ್ಯ ಮತ್ತು ಪ್ರತಿಭಟನೆಗಳ ಬಗ್ಗೆ ವಿವರಿಸುವ ಪ್ರಯತ್ನವನ್ನು ಕೂಡ ಮಾಡಲಾಗಿದೆ.

ಪ್ರಜಾಪ್ರಭುತ್ವವೆಂದು ಕರೆಸಿಕೊಂಡ ರಾಜಕೀಯ ವ್ಯವಸ್ಥೆಯಲ್ಲಿ ಹಕ್ಕುಗಳ ಕುರಿತಾಗಿ ಹಿಂಸಾತ್ಮಕ ಘಟನೆಗಳು ಏಕೆ ನಡೆಯುತ್ತವೆ, ಒಬ್ಬ ವ್ಯಕ್ತಿ ಅಥವಾ ಸಂಘ – ಸಂಸ್ಥೆಗಳು ಹಿಂಸಾಮಾರ್ಗಕ್ಕೆ ಏಕೆ ಹೋಗುತ್ತಾನೆ – ಹೋಗುತ್ತವೆ ಎಂಬುವದು ತಿಳಿಯಬೇಕಾದ ವಿಷಯ. ಹಿಂಸೆ ಯಾವ ಮೂಲದಿಂದ ಬಂದರೂ ಅದು ಹಿಂಸೆಯೇ. ಅದು ಸರ್ಕಾರದ ನಿಯಂತ್ರಣದಲ್ಲಿರುವ ಸಂಸ್ಥೆಗಳಾದ ಸೇನಾಪಡೆ ಮತ್ತು ಪೊಲೀಸ್ ಪಡೆಗಳಿಂದ ನಡೆದಿರಬಹುದು ಅಥವಾ ಸರ್ಕಾರೇತರ ರಾಜಕೀಯ ಅಥವಾ ಸಾಮಾಜಿಕ ಸಂಘ –ಸಂಸ್ಥೆಗಳಿಂದ ನಡೆದಿರಬಹುದು. ಉದಾಹರಣೆಗೆ ನಕ್ಸಲ್‌ರು ಪೊಲೀಸ್ ಹಾಗೂ ಸೇನಾಪಡೆಗಳ ಮೇಲೆ ಮಾಡುತ್ತಿರುವ ಆಕ್ರಮಣಗಳು ಒಂದು ತರಹದ ಹಿಂಸೆಯಾದರೆ ಸೇನಾಪಡೆ ಮತ್ತು ಪೊಲೀಸರು ನಕ್ಸಲಿಯರ ದಮನ ಮಾಡುವ ಚಟುವಟಿಕೆಯೂ ಹಿಂಸೆಯ ಮತ್ತೊಂದು ರೂಪವಾಗಿದೆ.

ಆಧುನಿಕ ರಾಷ್ಟ್ರ – ರಾಜ್ಯಗಳು ಕಲ್ಯಾಣ ರಾಜ್ಯಗಳೆಂದು ಸಮರ್ಥಿಸಿಕೊಂಡರೂ ಅವುಗಳು ಮಾಡುವ ಕೆಲವು ಕೃತ್ಯಗಳು ಹಿಂಸೆಗೆ ಎಡೆಮಾಡಿಕೊಟ್ಟಿವೆ. ಆಧುನಿಕ ರಾಷ್ಟ್ರ – ರಾಜ್ಯಗಳ ಇತಿಹಾಸ ಹಾಗೂ ಪ್ರಸ್ತುತ ಪರಿಸ್ಥಿತಿಯನ್ನು ಗಮನಿಸಿದರೆ ಅಭಿವೃದ್ಧಿ ವಿಷಯದ ನಿಟ್ಟಿನಲ್ಲಿ ಅವುಗಳು ಒಂದು ತರಹದ ಅಪರಾಧಗಳಾಗಿವೆ. ಅವುಗಳು ಕೈಗೊಂಡ ಅಭಿವೃದ್ಧಿ ಕಾರ್ಯಗಳು ಮತ್ತು ಯೋಜನೆಗಳು ಸಮಗ್ರತೆಯ ಅನುಪಸ್ಥಿತಿಯಿಂದ ಕೆಲವರನ್ನು ಉನ್ನತ ಸ್ಥಿತಿಗೇರಿಸಿವೆ ಮತ್ತೆ ಕೆಲವರನ್ನು ಅಸಹಾಯಕತೆಯ ಸ್ಥಿತಿಗಿಳಿಸಿ ಅವರ ಆಹುತಿಯನ್ನೇ ಮಾಡಿವೆ. ಇಂತಹ ಆಹುತಿಗಳು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರ – ರಾಜ್ಯಗಳು ಎಂದೆನಿಸಿಕೊಂಡಿರುವ ಆಫ್ರಿಕಾ ಮತ್ತು ಏಶಿಯಾ ಖಂಡದ ರಾಷ್ಟ್ರ – ರಾಜ್ಯಗಳಲ್ಲಿ ಅವುಗಳು ಸ್ವತಂತ್ರ ರಾಷ್ಟ್ರಗಳಾದ ದಿನದಿಂದಲೂ ನಡೆಯುತ್ತಾ ಇವೆ. ದಕ್ಷಿಣ ಏಷಿಯಾದ ಅತಿ ದೊಡ್ಡ ರಾಷ್ಟ್ರವಾದ ಭಾರತವು ಅಭಿವೃದ್ಧಿ ಹೆಸರಿನಲ್ಲಿ ಮಾಡಿರುವ ಅಪರಾಧಗಳು ಹಲವಾರು. ಅಭಿವೃದ್ಧಿಯ ಹೆಸರಿನಲ್ಲಿ ದೇಶದಲ್ಲಿ ಸುಮಾರು ದಶಕಗಳಿಂದಲೂ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ತುಳಿತಕ್ಕೊಳಪಟ್ಟ ಜನತೆಯ ಮೇಲೆ ಒಂದಲ್ಲಾ ಒಂದು ತರಹದ ಹಿಂಸೆ ನಡೆಯುತ್ತಲೇ ಬಂದಿದೆ. ದೇಶದ ಮೊದಲ ಪ್ರಧಾನ ಮಂತ್ರಿಗಳಾದ ನೆಹರು ಅವರು ಅಭಿವೃದ್ಧಿಯ ಕುರಿತು ಮಾತನಾಡುವಾಗ ಅಣೆಕಟ್ಟುಗಳನ್ನು ದೇವಾಲಯಗಳೆಂದು ಕರೆದಿದ್ದರು. ಇದರರ್ಥ ಜನತೆಗೆ (ಧರ್ಮದಲ್ಲಿ ನಂಬಿಕೆ ಇರುವ) ಧರ್ಮ ಹಾಗೂ ದೇವಾಲಯಗಳಿಂದ ಯಾವ ತರಹದ ಆಧ್ಯಾತ್ಮಿಕ ಮುಕ್ತಿ ಸಿಗುತ್ತದೆಯೋ ಅದೇ ರೀತಿ ಅಣೆಕಟ್ಟಿನಂತಹ ಬೃಹತ್ ಯೋಜನೆಗಳಿಂದ ಜನತೆಗೆ ಆರ್ಥಿಕ ಮುಕ್ತಿ ಸಿಗುತ್ತೆ ಎಂದು. ಇಂತಹ ನಿಲುವು ಈಗಲೂ ಕೂಡ ಮುಂದುವರಿದುಕೊಂಡು ಬಂದಿದೆಯಾದರು ಇದರ ಭಾಷೆ ಮತ್ತು ವ್ಯಾಕರಣ ಮಾತ್ರ ಬದಲಾಗಿದೆ. ಇದರನ್ವಯ ಈಗ ದೇಶದಲ್ಲಿ ಅನೇಕ ಬೃಹತ್ ಯೋಜನೆಗಳು ನಡೆಯುತ್ತಿವೆ ಮತ್ತು ಕೆಲವೊಂದು ಈಗಾಗಲೇ ಪೂರ್ಣಗೊಂಡಿವೆ. ಈ ಬೃಹತ್ ಯೋಜನೆಗಳನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯಲ್ಲಿ ಸುಮಾರು ಜನರನ್ನು ಅವರು ವಾಸಿಸುವ ಮೂಲಸ್ಥಾನಗಳಿಂದ ಖಾಲಿ ಮಾಡಬೇಕಾಯಿತು. ಇದರ ಪರಿಣಾಮವಾಗಿ ಈ ಜನತೆ ನೂರಾರು ಸಮಸ್ಯೆಗಳನ್ನು ಎದುರಿಸಬೇಕಾಯಿತು ಹಾಗೂ ಈಗಲೂ ಎದುರಿಸುತ್ತಿದ್ದಾರೆ.




ದೇಶದ ಆರ್ಥಿಕ ಅಭಿವೃದ್ಧಿಗಾಗಿ ಬೃಹತ್ ಯೋಜನೆಗಳಾದ ಅಣೆಕಟ್ಟು, ವಿದ್ಯುತ್‌ಸ್ಥಾವರ, ಹೆದ್ದಾರಿ, ಕೈಗಾರಿಕಾ ಕಾರ್ಯಾಗಾರ, ಇತ್ಯಾದಿಗಳ ನಿರ್ಮಾಣದಲ್ಲಿ ಸರ್ಕಾರಗಳು ತೊಡಗಿರುತ್ತವೆ. ಬೃಹತ್ ಯೋಜನೆಗಳ ನಿರ್ಮಾಣದ ಮೊದಲು ಅವುಗಳಿಂದ ಆಗಬಹುದಾದ ಪರಿಣಾಮಗಳ ಬಗ್ಗೆ ಸರ್ಕಾರಗಳು ಬಹಳಷ್ಟು ಬಾರಿ ಆಲೋಚಿಸುವದಿಲ್ಲ. ಈ ಎಲ್ಲ ಯೋಜನೆಗಳು ಜನಸಾಮಾನ್ಯರ ವಿನಾಶಕ್ಕಾಗಿ ಕಾರಣವಾಗಿ ಅವರಿಗೆ ಅನೇಕ ತರಹದ ಹಿಂಸೆಗೊಳಪಡಿಸಿ ಅವರನ್ನು ಅಭಿವೃದ್ಧಿಯ ಪರಿಕಲ್ಪನೆಯಿಂದ ದೂರವಿಡುವಂತಾಗಿವೆ. ದೇಶದಲ್ಲಿ ಬೃಹತ್ ಯೋಜನೆಗಳಿಂದ ನಡೆದ ಅಭಿವೃದ್ಧಿ ಕಾರ್ಯವು ಸಾಮಾನ್ಯ ಜನರ ಅದರಲ್ಲೂ ದೀನದಲಿತರ ಮತ್ತು ಆದಿವಾಸಿಗಳ ಒಳಗೊಳ್ಳುವಿಕೆಯಲ್ಲಿ ಗುರುತಿಸಿಕೊಳ್ಳದೆ ಅವರ ಬಹಿಷ್ಕರಣಕ್ಕೆ ಕಾರಣವಾಗಿದೆ. ಅಮರ್ತ್ಯ ಸೇನರು ಹೇಳಿದ ಹಾಗೆ ಅಭಿವೃದ್ಧಿ ಜನರ ಜೀವನದಲ್ಲಿ ಸ್ವಾತಂತ್ರ್ಯ ತರುವಂತದ್ದಾಗಿರಬೇಕು. ಆದರೆ, ದೇಶದಲ್ಲಿ ಈಗ ನಡೆದಿರುವ ಅಭಿವೃದ್ಧಿ ಜನಸಾಮಾನ್ಯರಲ್ಲಿ ಆರ್ಥಿಕ ಸ್ವಾತಂತ್ರ್ಯ ತರದೆ ಅವರನ್ನು ಅನಾಥರನ್ನಾಗಿ ಮಾಡಿ ಹಲವು ತರಹದ ಹಿಂಸೆಗಳಿಗೆ ಗುರಿಮಾಡುತ್ತಿದೆ.

ಗಣಿಗಾರಿಕೆಯು ದೇಶದ ಆರ್ಥಿಕ ಅಭಿವೃದ್ಧಿಯ ದೆಸೆಯಲ್ಲಿ ನಡೆಯುವ ಒಂದು ಪ್ರಮುಖ ಚಟುವಟಿಕೆಯಾಗಿದೆ. ಆದರೆ ಈ ಗಣಿಗಾರಿಕೆಯಿಂದ ಒರಿಸ್ಸಾ, ಜಾರ್ಖಂಡ್, ಛತ್ತೀಸಘಡ ರಾಜ್ಯಗಳಲ್ಲಿ ಅಲ್ಲಿರುವ ಆದಿವಾಸಿ ಜನಾಂಗದ ಮೇಲೆ ಎಷ್ಟೊಂದು ಪರಿಣಾಮ ಬೀರಿದೆ ಎಂಬುವದು ತಿಳಿದುಕೊಳ್ಳಬೇಕಾದ ವಿಷಯ. ಗಣಿಗಾರಿಕೆಯಿಂದ ಆದಿವಾಸಿ ಜನರ ಸಂಸ್ಕೃತಿ ಮತ್ತು ಅವರ ನಿತ್ಯಜೀವನ ಅಪಾಯಕ್ಕೊಳಗಾಗಿವೆ. ಅಮಾಯಕ ಆದಿವಾಸಿಗಳ ಮೇಲೆ ಈ ರೀತಿ ನಡೆಯುವ ಕೃತ್ಯಗಳಿಗೆ ದೇಶ ಮಾಡುತ್ತಿರುವ ಘೋರ ಹಿಂಸಾತ್ಮಕ ಕೃತ್ಯಗಳೆಂದು ಕರೆಯಬಾರದೆ? ಒಂದು ದೃಷ್ಟಿಯಿಂದ ನೋಡಿದರೆ ಹಿಂಸಾತ್ಮಕ ಕೃತ್ಯಗಳಿಗಿಂತ ಜಾಸ್ತಿಯೆ. ಖ್ಯಾತ ಸಮಾಜ ವಿಜ್ಞಾನಿಯಾದ ಫೆಲಿಕ್ಸ್ ಪೆಡೆಲ್‌ರವರು ತಮ್ಮ ಇತ್ತೀಚಿನ ಸಂಶೋಧನಾ ಕೃತಿಗಳಲ್ಲಿ ಅಭಿವೃದ್ಧಿ ಹೆಸರಿನಲ್ಲಿ ಆದಿವಾಸಿ ಜನರ ಬಲಿದಾನ ಹೇಗೆ ನಡೆಯುತ್ತಿದೆ ಎಂಬುವದನ್ನು ವಿವರಿಸಿದ್ದಾರೆ. ಕಾರ್ಲ್ ಮಾರ್ಕ್ಸ್‌ರು ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಒಬ್ಬ ವ್ಯಕ್ತಿ ತಾನು ಶ್ರಮಿಸಿ ಉತ್ಪಾದಿಸಿದ ಉತ್ಪನ್ನದಿಂದ, ತನ್ನ ಕೆಲಸದಿಂದ, ತನ್ನ ಜನರಿಂದ, ಹಾಗೂ ತನ್ನ ಜೀವನದ ದಿನನಿತ್ಯ ಚಟುವಟಿಕೆಯಿಂದ ಅಥವಾ ತನ್ನಿಂದ ತಾನೆ, ಹೇಗೆ ವಿಮುಖಗೊಳ್ಳುತ್ತಾನೆ ಎಂದು ವಿವರಿಸಿದ ಮಾತುಗಳು ದೇಶದಲ್ಲಿರುವ ಬಹುತೇಕ ಜನಸಾಮಾನ್ಯರಿಗೆ ಅನ್ವಯವಾಗುತ್ತದಲ್ಲದೆ ಆದಿವಾಸಿ ಜನರ ಜೀವನಕ್ಕೆ ಈ ವಿವರಣೆಗಳು ಬಹುಪಾಲು ಅನ್ವಯವಾಗುತ್ತದೆ. ಆದಿವಾಸಿ ಜನರು ತಾವಿರುವ ಬೆಟ್ಟ – ಗುಡ್ಡಗಳಲ್ಲಿ ನಿಸರ್ಗದ ಜೊತೆ ಬೆರೆತು, ಬದುಕಿ ಅನೇಕ ನೈಸರ್ಗಿಕ ಸಂಪನ್ಮೂಲಗಳ ಉತ್ಪಾದನೆಯಲ್ಲಿ ಅಪರೋಕ್ಷವಾಗಿ ಕಾರಣರು. ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಮತ್ತು ನಂಬಿಕೆಗಳ ಜೊತೆಗೆ ಸಾಮೂಹಿಕ ಜೀವನದಲ್ಲಿ ಅತೀ ವಿಶ್ವಾಸವನ್ನು ಹೊಂದಿದವರು. ಆದರೆ, ಇವತ್ತಿನ ಸಂದರ್ಭದಲ್ಲಿ ಈ ಜನಾಂಗವು ತಾವಿರುವ ನಿಸರ್ಗದಿಂದ, ತಾವುಗಳು ಅಪರೋಕ್ಷವಾಗಿ ಉತ್ಪಾದಿಸಿದ ನೈಸರ್ಗಿಕ ಸಂಪನ್ಮೂಲಗಳಿಂದ, ತಮ್ಮ ವಿಶಿಷ್ಟ ಸಂಸ್ಕೃತಿ ಮತ್ತು ನಂಬಿಕೆಗಳಿಂದ, ಅನಾದಿಕಾಲದಿಂದಲೂ ಮಾಡುತ್ತಿರುವ ಕಸುಬುಗಳಿಂದ, ಹಾಗೂ ತಮ್ಮ ಸಾಮೂಹಿಕ ಜೀವನದಿಂದ ವಿಮುಖವಾಗುತ್ತಿದ್ದಾರೆ. ಈ ರೀತಿ ಅವರ ಜೀವನದ ಮೇಲೆ ಆಗುವ ಬದಲಾವಣೆಗಳಿಗೆ ಯಾವುದೇ ಸ್ವೀಕೃತ ಪರಿಹಾರವಿಲ್ಲದ ಕಾರಣ ತಮ್ಮ ನೆಲದಲ್ಲಿಯೆ ಅವರು ಭೂರಹಿತ, ಉದ್ಯೋಗರಹಿತರಾಗುತ್ತಿದ್ದಾರೆ. ಎಲ್ಲದಕ್ಕೂ ಮೇಲಾಗಿ ತಮ್ಮ ಭಾವನೆಗಳಿಗೆ ಸ್ಪಂದನೆರಹಿತ ಜೀವನ ಮಾಡಬೇಕಾಗಿದೆ. ಇಂತಹ ಜೀವನಕ್ಕೆ ತಳ್ಳಿರುವ ದೇಶದ ಅಭಿವೃದ್ಧಿ ಮಾರ್ಗಕ್ಕೆ ಹಿಂಸಾ ಮಾರ್ಗವೆಂದು ಅಥವಾ ಅಕ್ಷರಶಃ ಹಿಂಸೆ ಎಂದು ಕರೆಯದೆ ಇನ್ನಾವ ಪದ ಮತ್ತು ಅಭಿಪ್ರಾಯಗಳ ಬಳಕೆ ಮಾಡಬೇಕಾಗುತ್ತದೆ?

ರಾಜ್ಯದ ಆಧುನಿಕತೆಯ ಪರಿಕಲ್ಪನೆಯನ್ನು ಮತ್ತು ಅದರಲ್ಲಿ ನಡೆಯುತ್ತಿರುವ ಆರ್ಥಿಕ ಹಾಗೂ ರಾಜಕೀಯ ಪ್ರಕ್ರಿಯೆಗಳನ್ನು ವಿಚಾರಿಸಿದಾಗ ಕಾರ್ಲ್ ಮಾರ್ಕ್ಸ್‌ರ ವಿಚಾರಗಳು ನೆನಪಿಗೆ ಬರುತ್ತವೆ. ಕಾರ್ಲ್ ಮಾರ್ಕ್ಸ್‌ರ ಪ್ರಕಾರ ರಾಜ್ಯವು ವರ್ಗತುಳಿತದ ಸಾಧನ. ಶ್ರೀಮಂತ ವರ್ಗದ ಹತೋಟಿಯಲ್ಲಿರುವ ರಾಜ್ಯ ಬಡವರ್ಗದ ಶೋಷಣೆಯಲ್ಲಿ ಕಾರ್ಯನಿರತವಾಗುವ ಉಪಕರಣ ಎಂದು ಅವರು ವಿಶ್ಲೇಷಿಸುತ್ತಾರೆ. ಭಾರತವನ್ನು ಆಧುನಿಕ ರಾಜ್ಯದ ಪರಿಕಲ್ಪನೆಯಲ್ಲಿಟ್ಟು ನೋಡಿದಾಗ ಅದರಲ್ಲಿರುವ ಬಹುಪಾಲು ಆರ್ಥಿಕ ಮತ್ತು ರಾಜಕೀಯ ಪ್ರಕ್ರಿಯೆಗಳು ಸಾಮಾಜಿಕ ಹಾಗೂ ಆರ್ಥಿಕವಾಗಿ ತುಳಿಯಲ್ಪಟ್ಟ ವರ್ಗಗಳ ಕಲ್ಯಾಣದ ಕೆಲಸದಲ್ಲಿ ನಿಶ್ಚಿತ ಫಲಿತಾಂಶವನ್ನು ತೋರಿಸದೆ ಈ ವರ್ಗಗಳ ತುಳಿತಕ್ಕೆ ಕೆಲವು ಬಾರಿ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣವಾಗಿದೆ.

ಭಾರತದಲ್ಲಿ ಸುಮಾರು ಚಳುವಳಿಗಳು ದೇಶ ಸ್ವತಂತ್ರ ಹೊಂದಿದ ಮೊದಲ ದಿನಗಳಿಂದಲೂ ರಾಷ್ಟ್ರ ಕೈಗೊಳ್ಳುತ್ತಿರುವ ಅಭಿವೃದ್ಧಿ ಕಾರ್ಯಕ್ರಮಗಳ ಮತ್ತು ಯೋಜನೆಗಳ ವ್ಯಾಖ್ಯಾನ ಮತ್ತು ಅರ್ಥದ ಕುರಿತು ಪ್ರಶ್ನೆ ಹಾಗೂ ಹೋರಾಟ ಮಾಡುತ್ತಾ ಬಂದಿವೆ. ಈ ದಿಸೆಯಲ್ಲಿ ಚಳುವಳಿಗಳು ಬೇರೆ ಬೇರೆ ಮಾರ್ಗ ಅಥವಾ ತಂತ್ರಗಳನ್ನು ಅಳವಡಿಸಿಕೊಂಡಿವೆ. ಅವುಗಳಲ್ಲಿ ಪ್ರತಿಭಟನೆ, ರಸ್ತೆ ತಡೆ, ಹಿಂಸಾತ್ಮಕ ಹೋರಾಟ ಮತ್ತು ಉಪವಾಸ ಸತ್ಯಾಗ್ರಹ ಇತ್ಯಾದಿ. ಬಹಳಷ್ಟು ಚಳುವಳಿಗಳು ಹಿಂಸಾತ್ಮಕ ಮಾರ್ಗಗಳಿಗೆ ಹೋಗದೆ ಅಹಿಂಸಾ ಮಾರ್ಗಗಳಿಂದ ತಮ್ಮ ನಿಲುವು ಮತ್ತು ಬೇಡಿಕೆಗಳನ್ನು ಕೇಂದ್ರ ಹಾಗೂ ಸಂಬಂಧಿತ ರಾಜ್ಯ ಸರ್ಕಾರಗಳಿಗೆ ತಿಳಿಸಿ ಸರ್ಕಾರಗಳ ಜನತಾ ವಿರೋಧಿ ನೀತಿಯನ್ನು ಬಯಲಿಗೆಳೆಯುವಲ್ಲಿ ಸಫಲವಾಗಿ ಒಂದರ್ಥದಲ್ಲಿ ಭಾರತದ ಪ್ರಜಾಪ್ರಭುತ್ವಕ್ಕೆ ನಿಜವಾದ ಅರ್ಥವನ್ನು ಕೊಟ್ಟಿವೆ.

ಹಿಂಸಾತ್ಮಕ ಮಾರ್ಗದ ಮೂಲಕ ದೇಶದಲ್ಲಿರುವ ಸಾಮಾಜಿಕ ಹಾಗೂ


ದಾಳಿಗೀಡಾದ ಪತ್ರಿಕಾ ಕಛೇರಿ

## ಧರ್ಮದ ಹೆಸರಿನಲ್ಲಿ ದಾಂಧಲೆ, ಕಗ್ಗೊಲೆ

**ಕ**ಳೆದ ವರ್ಷದ ಕೊನೆಯಲ್ಲಿ ಪ್ರತೀಕಾರ ತೀರಿಸಿಕೊಳ್ಳಲು ತಾಲಿಬಾನ್ ಮೂಲಭೂತವಾದಿಗಳು ಪೆಶಾವರದ ಶಾಲೆಯೊಂದರ ಮೇಲೆ ಹಲ್ಲೆ ನಡೆಸಿ ಅಮಾಯಕ ಮಕ್ಕಳನ್ನು ಕಗ್ಗೊಲೆ ಮಾಡಿದ ಪ್ರಕರಣ ಇನ್ನೂ ಹಸಿಯಾಗಿರುವಾಗಲೆ ಹೊಸ ವರ್ಷದಲ್ಲಿ ಇಸ್ಲಾಮಿಕ್ ರಾಜ್ಯಸ್ಥಾಪನೆಗೆ ಹೊರಟಿರುವ ಭಯೋತ್ಪಾದಕರು ಫ್ರಾನ್ಸ್‌ನ ರಾಜಧಾನಿ ಪ್ಯಾರಿಸ್‌ನ 'ಚಾರ್ಲಿ ಹೆಬ್ಡೊ' ನಿಯತಕಾಲಿಕೆ ಕಚೇರಿ ಮೇಲೆ ದಾಳಿ ನಡೆಸಿ ಹನ್ನೆರಡು ಮಂದಿ ಪತ್ರಕರ್ತರನ್ನು ಗುಂಡಿನ ಮಳೆ ಸುರಿಸಿ ಕೊಂದದ್ದೂ ಪ್ರತೀಕಾರ ಸಾಧನೆಗಾಗಿಯೆ. ಎರಡೂ ಭಯೋತ್ಪಾದಕ ಕೃತ್ಯಗಳು ಬೇರೆಯಾಗಿದ್ದರೂ ಉದ್ದೇಶ ಹಾಗೂ ಮೂಲ ಒಂದೇ. ಎರಡೂ ಹಿಂಸಾಚಾರಗಳು ಇಸ್ಲಾಮ್ ಮೂಲಭೂತವಾದಿಗಳಲ್ಲಿ ಹೆಚ್ಚುತ್ತಿರುವ ಅಸಹನೆಯನ್ನೂ ತೋರುತ್ತದೆ. ಸಮರ್ಥಿಸಿಕೊಳ್ಳಲು ಕಾರಣಗಳೇನೇ ಇದ್ದರೂ ಎಸಗಿದ ದುಷ್ಕೃತ್ಯ ಖಂಡನೀಯ.

ಪ್ಯಾರಿಸ್ಸಿನ ವಿಡಂಬನಾತ್ಮಕ ನಿಯತಕಾಲಿಕೆ 'ಚಾರ್ಲಿ ಹೆಬ್ಡೊ' ತನ್ನ ಮುಖಪುಟದಲ್ಲಿ ಇಸ್ಲಾಮ್ ಧರ್ಮ ಸಂಸ್ಥಾಪಕ ಮಹಮ್ಮದ್ ಪೈಗಂಬರ್‌ಅನ್ನು ಅವಹೇಳನಕರವಾಗಿ ಚಿತ್ರಿಸಿತ್ತು ಎನ್ನುವುದೇ ಆಕ್ರೋಶಕ್ಕೆ ಕಾರಣ. ೧೯೭೦ರಲ್ಲಿ ಪುನರಾರಂಭಗೊಂಡ 'ಚಾರ್ಲಿ ಹೆಬ್ಡೊ' ನಿರ್ಭೀತವಾಗಿ ಯಾರನ್ನೂ ಬಿಡದೆ ಗೇಲಿಮಾಡುವ ಪತ್ರಿಕೆ. ಫ್ರಾನ್ಸ್‌ನ ರಾಷ್ಟ್ರಪತಿ ಚಾರ್ಲ್ಸ್ ಡಿಗಾಲ್‌ರನ್ನು ಅಣಕಿಸಿತೆಂಬ ಆಪಾದನೆಯ ಮೇಲೆ ಪತ್ರಿಕೆಯನ್ನು ಈ ಮೊದಲು ನಿಷೇಧಿಸಲಾಗಿತ್ತು. ಎಲ್ಲ ಮತಗಳನ್ನು, ಕ್ರಿಶ್ಚಿಯನ್, ಯೆಹೂದಿ, ಇಸ್ಲಾಮ್ ಧರ್ಮಗಳನ್ನು ಟೀಕಿಸುವ, ಹಾಸ್ಯಪ್ರಧಾನ ವ್ಯಂಗ್ಯಚಿತ್ರಗಳನ್ನು ಪ್ರಕಟಿಸುತ್ತ ಬಂದಿರುವ ಈ ನಿಯತಕಾಲಿಕೆ ೨೦೧೧ರಲ್ಲಿ ಒಮ್ಮೆ ಇಸ್ಲಾಮಿಕ್ ಮೂಲಭೂತವಾದಿಗಳ ಆಕ್ರೋಶಕ್ಕೀಡಾಗಿತ್ತು. ಆಗ ಕಚೇರಿಗೆ ಬೆಂಕಿ ಹಾಕಲು ಪ್ರಯತ್ನ ನಡೆದಿತ್ತು. ಒಂದು ವರ್ಷದ ನಂತರ ಪ್ರಕಟಗೊಂಡ ಮಹಮ್ಮದ್ ಪೈಗಂಬರ್ ಕುರಿತ ವ್ಯಂಗ್ಯಚಿತ್ರಗಳ ಪ್ರಕಟನೆಯೇ ಜನವರಿ ೧೫, ೨೦೧೫ರ ದಾಳಿಗೆ ಕಾರಣ. ಸಂಪಾದಕರನ್ನೂ ಒಳಗೊಂಡಂತೆ ಹನ್ನೆರಡು ಪತ್ರಕರ್ತರು ಈ ದಾಳಿಯಲ್ಲಿ ಬಲಿಯಾದ್ದು ದುರಂತ. ಇದು ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಡೆದ ಹಲ್ಲೆ. ಧರ್ಮದ ಹೆಸರಿನಲ್ಲಿ ಇಂಥ ಹಿಂಸಾತ್ಮಕ ಚರ್ಯೆಗಳು ಈಚೆಗೆ ಹೆಚ್ಚಾಗುತ್ತಿರುವುದು ನಿಜಕ್ಕೂ ಆತಂಕಕಾರಿ. ನಾಗರಿಕ ಜಗತ್ತು ಈ ಹೇಯಕೃತ್ಯವನ್ನು ಖಂಡಿಸಿದೆ. ಫ್ರಾನ್ಸ್‌ನ ಜನತೆಗೆ ತನ್ನ ಸಹಾನುಭೂತಿ ವ್ಯಕ್ತಗೊಳಿಸಿದೆ. ಪ್ಯಾರಿಸ್‌ನಲ್ಲಿ ಈ ದುರ್ಘಟನೆಯ ನಂತರ ನಡೆದ ಬೃಹತ್ ಪ್ರದರ್ಶನ ಹಾಗೂ ಅದರಲ್ಲಿ ನಲವತ್ತು ದೇಶಗಳ ಪ್ರಮುಖರು ಭಾಗವಹಿಸಿದ್ದುದು ಅದಕ್ಕೆ ಸಂಕೇತ. ಇಂಥ ಹೀನಕೃತ್ಯಗಳಿಗೆ ಹೆದರದೆ, ಅವನ್ನು ಹಿಮ್ಮೆಟ್ಟಿಸುವ ದೃಢನಿರ್ಧಾರ ಈ ಬೃಹತ್ ರ್‍ಯಾಲಿಯಲ್ಲಿ ಪ್ರಕಟಗೊಂಡಿತು. ಧರ್ಮದ ಹೆಸರಿನಲ್ಲಿ ನಡೆಯುವ ಇಂಥ ದೌರ್ಜನ್ಯಗಳು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಮಾರಕ.

ಮತಧರ್ಮವನ್ನು ಕಾಪಾಡಿಕೊಳ್ಳುವುದಕ್ಕಾಗಿ ನಡೆಯುತ್ತಿರುವ ಇಂಥ ಹತ್ಯಾಕಾಂಡಗಳು ಅಧಿಕಗೊಳ್ಳುತ್ತಿರುವುದು ಧಾರ್ಮಿಕ ಅಸಹನೆಯನ್ನು ತೋರುತ್ತವೆ. ಭಾರತದಲ್ಲೂ ಕೂಡ ಈ ಬಗೆಯ ಅಸಹನೆ ಪ್ರಕರಣಗಳು ಎಲ್ಲ ಧರ್ಮಗಳವರಿಂದ ಆಗಾಗ ಸಂಭವಿಸುತ್ತಿರುವುದನ್ನು ಕಂಡಿದ್ದೇವೆ. ಹೆಚ್ಚಾಗಿ ಇಂಥ ಪ್ರಕರಣಗಳಲ್ಲಿ ಇಸ್ಲಾಮಿಯರೇ ಭಾಗಿಗಳಾಗುತ್ತಿರುವುದರಿಂದ ಇಡೀ ಇಸ್ಲಾಮ್ ಧರ್ಮವನ್ನೇ ದೂಷಣೆ ಮಾಡುವುದು ಸರಿಯಲ್ಲ. ಎಲ್ಲ ಇಸ್ಲಾಮ್ ಧರ್ಮದ ಅನುಯಾಯಿಗಳೂ ಭಯೋತ್ಪಾದಕರಲ್ಲ. ಎಲ್ಲ ಧರ್ಮೀಯರಲ್ಲೂ ಮೂಲಭೂತವಾದಿಗಳು, ಮತಾಂಧರು ಇದ್ದಾರೆ. ಹಾಗಾಗಿ ಧಾರ್ಮಿಕ ಸಹನೆ ಮೂಡಿಸಲು ಪ್ರಪಂಚದ ಎಲ್ಲ ಧರ್ಮಗಳೂ ಒಕ್ಕೊರಲಿನಿಂದ ಕೈಜೋಡಿಸುವುದು ಇಂದು ಅತ್ಯಗತ್ಯವಾಗಿದೆ. ಸಿರಿಯ-ಇರಾಕ್ ಪ್ರದೇಶದಲ್ಲಿ ಉಗ್ರರು ಇಸ್ಲಾಮಿಕ್ ರಾಜ್ಯ ಸ್ಥಾಪಿಸಲು ಪ್ರಯತ್ನ ನಡೆಸಿರುವುದು ಕಳವಳಕಾರಿ ಬೆಳವಣಿಗೆ. ಪರಿಸ್ಥಿತಿಗೆ ಕಾರಣ ಏನೇ ಇದ್ದರೂ ಅದನ್ನು ತಡೆಗಟ್ಟುವುದು ನಾಗರಿಕ ಜಗತ್ತಿನ ಮುಂದಿರುವ ಸವಾಲು. ಪ್ಯಾರಿಸ್ ದುರ್ಘಟನೆಯ ನಂತರ 'ಚಾರ್ಲಿ ಹೆಬ್ಡೊ' ನಿಯತಕಾಲಿಕೆ ಪ್ರಕಟನೆಯನ್ನು ಹೊಸ ಹುರುಪಿನಿಂದ ಪ್ರಾರಂಭಿಸಿದೆ. ಪತ್ರಿಕೆಯ ಪ್ರಸಾರ ದಿಢೀರೆಂದು ಏರಿದೆ. ಇದು ಅಭಿವ್ಯಕ್ತಿ ಸ್ವಾತಂತ್ರ್ಯದ ಚೈತನ್ಯಕ್ಕೆ ಸಾಕ್ಷಿ. ಅಭಿವ್ಯಕ್ತಿ ಸ್ವಾತಂತ್ರಕ್ಕೆ ತನ್ನದೇ ಆದ ಇತಿಮಿತಿಗಳಿವೆ ಎಂಬುದು ನಿರ್ವಿವಾದ. ಆದರೆ ಅದನ್ನು ನಿಯಂತ್ರಿಸಲಾಗಲಿ, ಹರಣ ಮಾಡಲಾಗಲಿ ಪ್ರಯತ್ನಿಸುವುದು ಅಕ್ಷಮ್ಯ.

## ಶ್ರೀಲಂಕಾದಲ್ಲಿ ಬದಲಾವಣೆ

**ಶ್ರೀ**ಲಂಕಾದ ಚುನಾವಣೆಗಳಲ್ಲಿ ಅಧಿಕಾರದಲ್ಲಿದ್ದ ಮಹಿಂದ ರಾಜಪಕ್ಷೆ ಪರಾಜಯ ಮತ್ತು ಅವರ ಸಂಪುಟದಲ್ಲೇ ಆರೋಗ್ಯ ಸಚಿವರಾಗಿದ್ದ ಮೈತ್ರಿಪಾಲ ಸಿರಿಸೇನಾ ಪ್ರತಿಪಕ್ಷಗಳ ಅಭ್ಯರ್ಥಿಯಾಗಿ ಗಳಿಸಿದ ಜಯ ಈ ದ್ವೀಪದಲ್ಲಿ ಹೊಸ ಅಧ್ಯಾಯಕ್ಕೆ ನಾಂದಿಯಾದೀತೆ ಎನ್ನುವುದೇ ನಮ್ಮ ಮುಂದಿರುವ ಪ್ರಶ್ನೆ. ಸುಮಾರು ಮೂರು ದಶಕಗಳ ಅಂತರ್ಯುದ್ಧ ಅಂತ್ಯಗೊಂಡ ಮೇಲೂ ಅತೃಪ್ತಿಯ ಹೊಗೆ ಯಾಡುತ್ತಿರುವ ಈ ದೇಶದಲ್ಲಿ ಶಾಂತಿ ನೆಲೆಸೀತೆ ? ಏಕೆಂದರೆ ಶ್ರೀಲಂಕಾ ತಮಿಳರ ಸಮಸ್ಯೆ ಇನ್ನೂ ಪರಿಹಾರವಾಗದೆ ಹಾಗೇ ಉಳಿದಿದೆ. ಇದು ವರ್ಷಗಳ ಹಿಂದೆ ೨೦೦೯ರಲ್ಲಿ ತಮಿಳರ ವಿಮೋಚನಾ ಸಂಘಟನೆ ಎಲ್‌ಟಿಟಿಇ ವಿರುದ್ಧ ಜಯಗಳಿಸಿದ್ದೇ ಮಹಿಂದ ರಾಜಪಕ್ಷೆಯ ಬಂಡವಾಳ. ಈ ಅಸಮ ಸಮರದಲ್ಲಿ ಶ್ರೀಲಂಕಾ ಸೇನೆ ನಡೆಸಿದ ದೌರ್ಜನ್ಯಗಳ ಕುರಿತು ಸಾಕಷ್ಟು ಸಾಕ್ಷ್ಯಾಧಾರಗಳು ಲಭಿಸಿವೆ. ಮಹಿಂದ ರಾಜಪಕ್ಷೆ ಸರಕಾರ ಅದರ ಬಗ್ಗೆ ಒತ್ತಾಯವಿದ್ದರೂ ವಿಚಾರಣೆ ನಡೆಸಲು ಮುಂದಾಗಲಿಲ್ಲ. ಅದೇ ಸಮಯದಲ್ಲಿ ಅಂತರ್ಯುದ್ಧಕ್ಕೆ ಕಾರಣವಾದ ತಮಿಳರ ಸಮಾನ ಹಕ್ಕುಗಳ ಬೇಡಿಕೆಯನ್ನೂ ಪರಿಗಣಿಸಲಿಲ್ಲ. ಶ್ರೀಲಂಕಾದ ಉತ್ತರ ಭಾಗದಲ್ಲಿ ನೆಲೆಸಿರುವ ಅಸಂಖ್ಯಾತ ತಮಿಳರು ಎದುರಿಸುತ್ತಿರುವ ಸಮಸ್ಯೆಗಳು ಭಾರತ-ಶ್ರೀಲಂಕಾಗಳ ನಡುವಣ ಸಂಬಂಧಗಳಿಗೆ ಇರಸು ಮುರುಸಾಗಿದೆ. ಅಧಿಕಾರ ವಹಿಸಿಕೊಂಡಿರುವ ಹೊಸ ಪ್ರಜಾಪ್ರಭುತ್ವ ರಂಗದ ಸಿರಿಸೇನಾ ಆದಷ್ಟು ಬೇಗನೆ ಈ ಸಮಸ್ಯೆಯತ್ತ ಗಮನಹರಿಸಿ ತಮಿಳರು ಅನುಭವಿಸುತ್ತಿರುವ ಅಸಮಾನತೆಯನ್ನು ಸಮರ್ಪಕವಾಗಿ ಬಗೆಹರಿಸುವರೆಂದು ನಿರೀಕ್ಷಿಸೋಣ.


ಮಹಿಂದ ರಾಜಪಕ್ಷೆ


ಮೈತ್ರಿಪಾಲ ಸಿರಿಸೇನಾ

ಭಾರತ ಉಪಖಂಡದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಕಾಪಾಡಿಕೊಂಡು ಬಂದಿರುವ ರಾಷ್ಟ್ರಗಳಲ್ಲಿ ಶ್ರೀಲಂಕಾ ಒಂದು. ಚುನಾವಣೆಗಳಲ್ಲಿ ಜಯ ತಮ್ಮದೇ ಎಂದು ಬೀಗುತ್ತಿದ್ದ ಶ್ರೀಲಂಕಾ ಫ್ರೀಡಮ್ ಪಾರ್ಟಿಯ ನಾಯಕ ರಾಜಪಕ್ಷೆ ಚುನಾವಣೆಯಲ್ಲಿ ಹೀನಾಯ ಸೋಲು ಅನುಭವಿಸಿದ್ದಾರೆ. ನಿಗದಿಯಾದಂತೆ ೨೦೧೬ರ ಜನವರಿಯಲ್ಲಿ ಚುನಾವಣೆ ನಡೆಯಬೇಕಾಗಿತ್ತು. ಆಗಲೇ ಎರಡು ಅವಧಿ ಪೂರೈಸಿದ್ದ ರಾಜಪಕ್ಷೆ ಮೂರನೇ ಅವಧಿಗಾಗಿ ಹಾತೊರೆಯುತ್ತಿದ್ದರು. ಹತ್ತು ವರ್ಷಗಳಿಂದ ಅಧಿಕಾರದಲ್ಲಿದ್ದ ಅವರು ಎರಡು ವರ್ಷ ಮುಂಚೆಯೇ ಚುನಾವಣೆಗಳನ್ನು ಘೋಷಿಸಿದರು. ಅನಿರೀಕ್ಷಿತ ಬೆಳವಣಿಗೆಗಳನ್ನು ಅವರು ಲೆಕ್ಕ ಹಾಕಿರಲಿಲ್ಲ. ತಮ್ಮ ಸಂಪುಟದ ಸದಸ್ಯರೇ ಕೈಕೊಡುವರೆಂದು ಅವರು ಎದುರು ನೋಡಿರಲಿಲ್ಲ. ಅಧ್ಯಕ್ಷ ಸ್ಥಾನಕ್ಕೇರಿರುವ ಮೈತ್ರಿಪಾಲ ಸಿರಿಸೇನಾ ಸಿನ್ಹಾಲ ನಾಗರಿಕರ ಬೆಂಬಲವನ್ನೇ ಅಲ್ಲದೆ ಶ್ರೀಲಂಕಾದ ತಮಿಳರು ಮತ್ತು ಮುಸ್ಲಿಮರ ಮತಗಳನ್ನು ಪಡೆದು ಜಯಗಳಿಸಿದ್ದಾರೆ. ಜನ ಬದಲಾವಣೆಗಾಗಿ ಮತ ಹಾಕಿದ್ದಾರೆ, ಮುಂದಿನ ಆರು ವರ್ಷಗಳು ಅಧಿಕಾರದಲ್ಲಿರುವ ಸಿರಿಸೇನಾ ಅವರಿಗೆ ಶುಭಕೋರಿ, ಸಮಸ್ಯೆಗಳನ್ನು ಬಗೆಹರಿಸಲಿ ಎಂದು ಹಾರೈಸೋಣ.

**ಸೀಯಾರ್ಕೆ,** ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ನಾನು ಓದಿದ ಪುಸ್ತಕ

# ರೈತರ ಬಾಳಿನೊಡನೆ ಚೆಲ್ಲಾಟ: ವರ್ತಮಾನಕ್ಕೊಂದು ಕನ್ನಡಿ




ಕೃತಿ : **ಭಾರತ ಮತ್ತು ಚೀನಾ ದೇಶಗಳಲ್ಲಿ ವಿಶೇಷ ಆರ್ಥಿಕ ವಲಯ**
ಲೇಖಕರು : **ಡಾ|| ಸಿ. ಚಂದ್ರಪ್ಪ**
ಬೆಲೆ : ರೂ. ೨೬೦/–
ಪ್ರಕಾಶಕರು
**ಬೋಧಿ ವೃಕ್ಷ ಪ್ರಕಾಶನ**

**ಡಾ|| ಎಚ್. ಎಸ್. ಗೋಪಾಲ ರಾವ್**

ಇತಿಹಾಸ ಎಷ್ಟು ಮುಖ್ಯವೋ, ವರ್ತಮಾನವೂ ಅಷ್ಟೇ ಮುಖ್ಯ. ಇಂದಿನ ಇತಿಹಾಸವೇ ನಾಳಿನ ಇತಿಹಾಸ. ಇದು ಕ್ಲೀಷೆ ಎನಿಸುವ ಮಾತಿನಂತಿದೆ. ಆದರೆ ಇತಿಹಾಸದ ಪುಟಗಳನ್ನು ತಿರುವಿಹಾಕಿದಾಗ, 'ಇತಿಹಾಸ ಮರುಕಳಿಸುತ್ತದೆ' ಎಂಬ ಮಾತಿಗೆ ಪ್ರಸ್ತುತ ಸಂಗತಿಗಳು ತೋರುಗೈ ಆಗುತ್ತವೆ.

ಇತ್ತೀಚಿನ ದಿನಗಳಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಸಾಮಾನ್ಯ ಜನರ ನೆಮ್ಮದಿಯನ್ನು ಕೆಡಿಸಿ, ಅವರ ಬದುಕನ್ನು ಮೂರಾಬಟ್ಟೆ ಮಾಡುತ್ತಿರುವ ವಿಶೇಷ ಆರ್ಥಿಕ ವಲಯಗಳ ಆಳ ವಿಸ್ತಾರಗಳ ತಿಳಿವಳಿಕೆ ಅಗತ್ಯವಾಗಿದೆ. ಅಂತಹ ತಿಳಿವಳಿಕೆ ನೀಡುವ ಪುಸ್ತಕವೇ ಡಾ|| ಸಿ. ಚಂದ್ರಪ್ಪ ಅವರ **ಭಾರತ ಮತ್ತು ಚೀನಾ ದೇಶಗಳಲ್ಲಿ ವಿಶೇಷ ಆರ್ಥಿಕ ವಲಯ**.

ಮನುಷ್ಯನೂ ಸೇರಿದಂತೆ ಎಲ್ಲ ಪ್ರಾಣಿಗಳ ಶಕ್ತಿಯ ಗಳಿಕೆಗೆ ಆಹಾರ ಅತ್ಯವಶ್ಯಕ. ಆಹಾರ ಪದ್ಧತಿ ಬೇರೆಬೇರೆಯಾಗಬಹುದು. ಆದರೆ ಆಹಾರವಂತೂ ಬೇಕೇಬೇಕು. ಆಹಾರಕ್ಕಾಗಿ ದವಸಧಾನ್ಯಗಳನ್ನು ಬೆಳೆಯಬೇಕು. ಈಗ ಯಾವುದೇ ಬೆಳೆಯನ್ನು ಬೆಳೆಯಲಾಗದ ಪರಿಸ್ಥಿತಿ ಎದುರಾಗುತ್ತಿದೆ. ಹಿಂದೆ ಋಷಿಗಳು ಆಹಾರವನ್ನು ತ್ಯಜಿಸಿ, ಸೊಪ್ಪು, ಸೆದೆ, ಎಲೆ, ನೀರು, ಗಾಳಿಗಳ ಸೇವನೆಯಿಂದಲೇ ತಪಸ್ಸನ್ನು ಆಚರಿಸುತ್ತಿದ್ದರೆಂದು ಕಥೆ ಕೇಳಿದ್ದೇವೆ. ಮಹಾತ್ಮಾ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ, ಅನುಸರಿಸಿದ ಅಹಿಂಸಾತ್ಮಕ ಚಳವಳಿಯ ಭಾಗವಾಗಿ ನಿರಶನ ಸತ್ಯಾಗ್ರಹಗಳು ನಡೆದಿದ್ದವು. ಆಂಧ್ರಪ್ರದೇಶದ ರಚನೆಗಾಗಿ ಪೊಟ್ಟಿ ಶ್ರೀರಾಮುಲು, ಕರ್ನಾಟಕ ಏಕೀಕರಣದ ಉದ್ದೇಶದಿಂದ ಅದರಗುಂಚಿ ಶಂಕರಗೌಡ ಪಾಟೀಲ ಉಪವಾಸ ಸತ್ಯಾಗ್ರಹ ಮಾಡಿದ್ದರು. ಈಗಲೂ ಹಲವು ಪ್ರತಿಭಟನೆಗಳಲ್ಲಿ ಉಪವಾಸ ಸತ್ಯಾಗ್ರಹವೂ ನಡೆಯುತ್ತದೆ. ಇನ್ನು ಮುಂದೆ ಉಪವಾಸಕ್ಕೆ ಸತ್ಯಾಗ್ರಹದ ಅವಶ್ಯಕತೆಯೇ ಇಲ್ಲ; ಊಟಕ್ಕೇ ಕೊರತೆಯಾದಾಗ ಆಹಾರವನ್ನು ಸೇವಿಸುವ ಮಾತು ದೂರವೇ ಉಳಿದು, ಶಕ್ತಿ ಸಂಚಯನಕ್ಕೆ ಬೇರೆ ದಾರಿಗಳನ್ನು ಹುಡುಕಿಕೊಳ್ಳಬೇಕಾದ ಅನಿವಾರ್ಯ ಪರಿಸ್ಥಿತಿ ಎದುರಾಗಬಹುದು. ಈ ಮಾತಿನಲ್ಲಿ ವ್ಯಂಗ್ಯ ಇದೆ. ಜೊತೆಗೆ ಅನುಭವಿಸಲಾಗದ ನೋವು ಮಡುಗಟ್ಟಿದೆ.

ದವಸಧಾನ್ಯಗಳನ್ನು ಬೆಳೆಯಲು ಭೂಮಿಯ ಸದುಪಯೋಗವಾಗುತ್ತಿತ್ತು. ಫಲವತ್ತಾದ ಭೂಮಿಯನ್ನು ಎಂದೂ ಬಂಜರು ಬಿಡಬಾರದೆಂಬ ಭಾವವಿತ್ತು. ಈಗ ಭೂಮಿಯು ಆಹಾರ ಧಾನ್ಯಗಳನ್ನು ಬೆಳೆಯುವದಕ್ಕೆ ಬದಲು ಎಷ್ಟು ಹಣವನ್ನು ಗಳಿಸಿಕೊಡುತ್ತದೆ ಎಂಬ ಲೆಕ್ಕಾಚಾರ ಹೆಚ್ಚಿದೆ. ಹಣದ ರೂಪದಲ್ಲಿ ಭೂಮಿಯ ಮೌಲ್ಯವನ್ನು ಅಳೆಯುವ ಸಂದರ್ಭದಲ್ಲಿ ಅದರ ಲಾಭ ಪಡೆಯುವವರು ಬಂಡವಾಳಶಾಹಿಗಳಷ್ಟೇ ಹೊರತು, ನಿಜವಾದ ಕೃಷಿಕನಲ್ಲ. ಸ್ವಂತ ಖುಷಿಗೋಸ್ಕರ ಕೃಷಿಯ ಬಗ್ಗೆ ತೋರಿಕೆಯ ಆಸಕ್ತಿ ವಹಿಸುವವರಿಗೆ ಭೂಮಿಯು ತಾಯಿಯಲ್ಲ. ಬದಲಿಗೆ ಲಾಭ ತಂದುಕೊಡುವ ಒಂದು ಸರಕು. ಶ್ರೀಮಂತರಿಗೆ ಭೂಮಿಯೂ ಒಂದು ಸರಕು. ಯಾವುದೇ ಸರಕನ್ನು ಮಾರಾಟ ಮಾಡುವ ಕಲೆ ವ್ಯಾಪಾರಿಗಳಿಗೆ ಕರಗತ. ಭೂಮಿಯನ್ನು ತಾಯಿಯಂತೆ ಭಾವಿಸುವ ಮತ್ತು ಆ ಭೂಮಿಯ ಮೂಲಕ ತನ್ನ ಬದುಕನ್ನು ಕಟ್ಟಿಕೊಳ್ಳುವ ರೈತನಿಗೆ ಭೂಮಿಯೇ ಸರ್ವಸ್ವ. ಜಾಗತೀಕರಣ, ವ್ಯಾಪಾರೀಕರಣ ಮತ್ತು ಉದಾರೀಕರಣದ ನೆಪದಲ್ಲಿ ಆರ್ಥಿಕ ಶ್ರೀಮಂತಿಕೆಯನ್ನು ಹೆಚ್ಚಿಸುವ ಚಟುವಟಿಕೆ ಈಗ ಹೆಚ್ಚಿದೆ. ಈ ಚಟುವಟಿಕೆಯು ಬಡವರನ್ನು ಮತ್ತಷ್ಟು ಬಡವರನ್ನಾಗಿ ಮತ್ತು ಶ್ರೀಮಂತರನ್ನು ಮತ್ತಷ್ಟು ಶ್ರೀಮಂತರನ್ನಾಗಿ ಮಾಡುತ್ತಿರುವುದು ಎಲ್ಲ ವಿಚಾರವಂತರಿಗೂ ತಿಳಿದಿದೆ. ಅದನ್ನು ಅವರು ವಿರೋಧಿಸಲು ಮತ್ತು ಪ್ರತಿಭಟಿಸಲು ಮಾತ್ರ ಸಾಧ್ಯ. ತಪ್ಪಿಸಲು ಅಥವಾ ನಿಷ್ಕ್ರಿಯಗೊಳಿಸಲು ಸಾಧ್ಯವಿಲ್ಲ. ಏಕೆಂದರೆ ವಿಚಾರವಂತರು ಬಹುಸಂಖ್ಯಾತರಲ್ಲ. ಹೆಚ್ಚು ಜನ ವಿಚಾರವಂತರಾಗುವುದನ್ನು ತಡೆಯಲು ವ್ಯವಸ್ಥೆ ಎಲ್ಲ ಮಾರ್ಗೋಪಾಯಗಳನ್ನೂ ಸಿದ್ಧಮಾಡಿರುತ್ತದೆ. ತಾವು ಹೇಳಿದಷ್ಟನ್ನು ಕೇಳುವ ಮತ್ತು ಒಪ್ಪುವ ಪಡೆಯನ್ನು ಅಣಿಗೊಳಿಸುವುದು ಎಲ್ಲ ಕಾಲದ ಮತ್ತು ಎಲ್ಲ ಆಡಳಿತಶಾಹಿಯ ಒಪ್ಪಿತ ಕಾರ್ಯಕ್ರಮ.

ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಯಿಂದ ಆಗುವ ಸಾಮಾಜಿಕ ಮತ್ತು ಆರ್ಥಿಕ ದುಷ್ಪರಿಣಾಮಗಳ ಬಗ್ಗೆ ಜೀವಪರವಾದ ಈ ಕೃತಿ ಬೆಳಕು ಚೆಲ್ಲುತ್ತದೆ ಎಂದು ಪ್ರೊ|| ಟಿ. ಆರ್. ಚಂದ್ರಶೇಖರ್ ಮುನ್ನುಡಿಯಲ್ಲಿ ತಿಳಿಸಿದ್ದಾರೆ. 'ಎಸ್. ಇ. ಝೆಡ್‌ಗಳು ಪ್ರತ್ಯೇಕ ದೇಶದಂತೆ ಕೆಲಸ ಮಾಡುತ್ತಾ, ದೇಶದ ಸಾರ್ವಭೌಮತ್ವಕ್ಕೆ ಸವಾಲಾಗಿವೆ ಮತ್ತು ದೇಶದಲ್ಲಿ ಮಿಲಿಯನ್ನರುಗಳು ಮತ್ತು ಬಿಲಿಯನ್ನರುಗಳನ್ನು ಮಾತ್ರ ಸೃಷ್ಟಿಸಬಲ್ಲವೇ ವಿನಾ ಬಡತನವನ್ನು, ಹಸಿವನ್ನು, ಅಸಮಾನತೆಯನ್ನು ಪರಿಹರಿಸಲಾರವು ಎಂಬುದು ಪ್ರಸ್ತುತ ಅಧ್ಯಯನದಿಂದ ಸ್ಪಷ್ಟವಾಗುತ್ತದೆ' ಎಂದು ಅಭಿಪ್ರಾಯಪಟ್ಟಿದ್ದಾರೆ. ವಿಶೇಷ ಆರ್ಥಿಕ ವಲಯಗಳು ಸ್ಥಾಪಿತವಾಗಿರುವ ಪ್ರದೇಶಗಳ ಔಚಿತ್ಯದ ಬಗ್ಗೆಯೂ ಚರ್ಚೆ ಅವಶ್ಯಕ ಮತ್ತು ಕೃಷಿಯನ್ನು ನಂಬಿಕೊಂಡಿದ್ದ ಭೂಮಾಲೀಕರು ಅಥವಾ ಕೃಷಿಕರು ತಮ್ಮದಾದ ಭೂಮಿಯನ್ನು ಕಳೆದುಕೊಂಡು, ತಮ್ಮ ಭೂಮಿಯಲ್ಲೇ ಜೀತದ ಆಳುಗಳಾಗಿರುವ ವಿಪರ್ಯಾಸದ ಬಗ್ಗೆ ಪ್ರೊ|| ಅಭೀಜ್ ಗಮನ ಸೆಳೆದಿದ್ದಾರೆ.

ಅಭಿವೃದ್ಧಿ ಎಂದರೇನು ? ಅದನ್ನು ನಿರ್ಧರಿಸಲು ಇರುವ ಮಾನದಂಡಗಳೇನು ?

ಈ ಕುರಿತು ಯಾವುದೇ ಸ್ಪಷ್ಟತೆ ಇಲ್ಲ. ಕಾಲುದಾರಿಗಳು, ಗಾಡಿ ಜಾಡುಗಳು ಇಲ್ಲವಾಗಿ ಆರು/ಎಂಟು ಪಥದ ರಸ್ತೆಗಳ ಜೊತೆಗೆ ಮೆಟ್ರೋ ಮಾರ್ಗಗಳು ಕಣ್ಣಿಗೆ ಢಾಳಾಗಿ ಕಾಣುತ್ತಿರುವುದನ್ನು ಅಭಿವೃದ್ಧಿ ಎನ್ನಬೇಕೆ ? ಎತ್ತಿನ ಗಾಡಿಗಳು, ಜಟಕಾಗಳು ಕಾಣೆಯಾಗಿ ಸಾರ್ವಜನಿಕ ವಾಹನಗಳಿರಲಿ, ಖಾಸಗಿ ವಾಹನಗಳ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಿರುವುದನ್ನು ಅಭಿವೃದ್ಧಿ ಎಂದು ಪರಿಗಣಿಸಬೇಕೆ ? ಚಿಲ್ಲರೆ ಅಂಗಡಿಗಳ ಬದಲು ಎಲ್ಲ ಅವಶ್ಯಕ ಸಾಮಗ್ರಿಗಳೂ ಒಂದೆಡೆ ದೊರೆಯುವ ಮಾಲ್‌ಗಳು ಅಭಿವೃದ್ಧಿಯ ಸಂಕೇತವೇ ? ದಿನದ ಕೂಲಿ, ತಿಂಗಳ ಸಂಬಳ ಹೆಚ್ಚಿರುವುದನ್ನು ಅಭಿವೃದ್ಧಿ ಎನ್ನಬೇಕೆ ? ಈ ಮಾನದಂಡಗಳನ್ನು ಒಪ್ಪಿಕೊಂಡರೆ ಭಾರತವು ಈಗ ಅಭಿವೃದ್ಧಿಯನ್ನು ಸಾಧಿಸಿದೆ ಎಂಬ ನಿರ್ಧಾರಕ್ಕೆ ಬರಬೇಕಾಗುತ್ತದೆ. ಇದು ಸರಳವಾದರೂ ಸಾಧುವಾದ ಒಪ್ಪಿಗೆಯಲ್ಲ. ಅಭಿವೃದ್ಧಿಯ ವ್ಯಾಖ್ಯಾನ ಮಾಡುವಾಗ ಸಾಮಾಜಿಕ ಪ್ರಗತಿಗೂ ಆರ್ಥಿಕ ಪರಿಣಾಮಗಳಿಗೂ ಇರುವ ನೇರ ಸಂಬಂಧವನ್ನು ಮರೆಯುವಂತಿಲ್ಲ. ಹೆಚ್ಚಿನ ಸಂಬಳ ಅಥವಾ ಗಳಿಕೆಯು ತೃಪ್ತಿಯನ್ನು ತಂದುಕೊಡುತ್ತಿದೆಯೇ ? ಇಂದು ಗಳಿಸಿದ್ದರಲ್ಲಿ ನಾಳೆಗೆ ಉಳಿಯುವುದೆಷ್ಟು ? ಸಾಮಾನ್ಯ ಜನರ ಬಡತನ ನಿವಾರಣೆ ಆಗಿದೆಯೇ ? ಕೊಳ್ಳುವ ಮತ್ತು ಉಳಿಸುವ ಶಕ್ತಿ ಎಷ್ಟರಮಟ್ಟಿಗೆ ಹೆಚ್ಚಿದೆ ? ಗಳಿಸಿದಷ್ಟನ್ನೂ ಹೊಟ್ಟೆಗೆ ಅದನ್ನು ಬಿಟ್ಟರೆ ಬಟ್ಟೆಗೆ ಖರ್ಚು ಮಾಡುವ ಶಕ್ತಿ ಮೊದಲಿಗಿಂತ ಈಗ ಉತ್ತಮಗೊಂಡಿದೆಯೇ ? ಇಂತಹ ಪರಿಸ್ಥಿತಿಯಲ್ಲಿ ಯಾವುದೇ ವ್ಯಕ್ತಿ ಎಷ್ಟನ್ನು ಉಳಿಸಬಹುದು ? ಹೀಗೆ ಕೇಳುತ್ತಾ ಹೋದಂತೆ ಪ್ರಶ್ನೆಗಳು ಹೆಚ್ಚಾಗುತ್ತವೆ. ಸ್ಪಷ್ಟ ಉತ್ತರವನ್ನು ಕೊಡಲು ಅಥವಾ ಪಡೆಯಲು ಸಾಧ್ಯವಿಲ್ಲ.

ವಿಶ್ವಸಂಸ್ಥೆಯು ಜಗತ್ತಿನ ಕಡುಬಡ ರಾಷ್ಟ್ರಗಳಲ್ಲಿ ೨೦೧೫ರ ಒಳಗೆ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಯ ಅಭಿವೃದ್ಧಿಯನ್ನು ಸಾಧಿಸುವ ಗುರಿ ಇಟ್ಟುಕೊಂಡಿದೆ ಎಂಬ ಸೂಚನೆ ಈ ಕೃತಿಯಲ್ಲಿದೆ. 'ಪಾಶ್ಚಿಮಾತ್ಯ ದೇಶಗಳ ಆರ್ಥಿಕ ಅಭಿವೃದ್ಧಿಯ ಮಾದರಿಗಳನ್ನು ಅನುಕರಿಸಿದ ಮಾತ್ರಕ್ಕೆ ನಮ್ಮ ನಾಗರಿಕರಿಗೆ ಉತ್ತಮ ಬದುಕು ಕಟ್ಟಿಕೊಟ್ಟಂತೆ ಆಗುವುದಿಲ್ಲ' ಎಂಬ ಮಾತನ್ನು ಈ ಕೃತಿ ಹೇಳಿದೆ. ಅಮೆರಿಕಾ ದೇಶದ ಮೂಲಭೂತ ಸೌಕರ್ಯ ಗಳನ್ನು ಭಾರತದಲ್ಲಿ ನಿರೀಕ್ಷಿಸಲು ಸಾಧ್ಯವಿಲ್ಲ. ಅದು ನಾಗರಿಕ ಜಗತ್ತಿಗೆ ಹೊಸದಾಗಿ ತೆರೆದುಕೊಂಡ ದೇಶ. ಅಲ್ಲಿ ಇನ್ನೂ ಬಳಸದ ಭೂಮಿ ಇದೆ. ಅರಣ್ಯ, ಕೃಷಿ, ರಸ್ತೆ ಇತ್ಯಾದಿ ಯಾವುದಕ್ಕೂ ಕೊರತೆ ಇಲ್ಲ. ಆದರೆ ಭಾರತದಲ್ಲೂ ಅಂತಹುದೇ ಸೌಲಭ್ಯಗಳು ಇವೆ ಅಥವಾ ಇರಬೇಕು ಎಂದು ಅಪೇಕ್ಷಿಸುವುದು ಎಷ್ಟರಮಟ್ಟಿಗೆ ಸರಿ ?

ಆರ್ಥಿಕ ಅಭಿವೃದ್ಧಿಗೆ ತೆರೆದುಕೊಂಡ ದೇಶ ವ್ಯಾಪಾರದತ್ತ ಹೆಚ್ಚು ಗಮನಹರಿಸಬೇಕಾಗುತ್ತದೆ. ವ್ಯಾಪಾರ ಎಂದರೆ ಲಾಭ ತರುವ ದಂಧೆ. ಇದನ್ನು




ಆಮದಿಗಿಂತ ಹೆಚ್ಚಾಗಿ ರಫ್ತಿನಿಂದ ಸಾಧಿಸಬಹುದು. ಇದಕ್ಕೆ ಮುಕ್ತ ವ್ಯವಸ್ಥೆ ಇದ್ದರೆ ಒಳ್ಳೆಯದು. ಆರ್ಥಿಕ ವಿಷಯಗಳಲ್ಲಿ ಕೆಲವು ವಿನಾಯಿತಿಗಳೂ ಅವಶ್ಯಕ ವಾಗುತ್ತವೆ. ವ್ಯಾಪಾರದಲ್ಲಿ ತೊಡಗಿದ ದೇಶಗಳಲ್ಲಿ ವ್ಯಾಪಾರಕ್ಕೆ ಮತ್ತು ವ್ಯಾಪಾರಿಗಳಿಗೆ ಅನುಕೂಲ ವಾಗುವಂತಹ ಕಾನೂನುಗಳನ್ನು ರಚಿಸಬೇಕಾಗುತ್ತದೆ. ಹೀಗೆ ಎಲ್ಲ ಅನುಕೂಲಗಳ ನಿರೀಕ್ಷೆಯಲ್ಲಿ ಅಸ್ತಿತ್ವಕ್ಕೆ ಬಂದ 'ವಿಶೇಷ ಆರ್ಥಿಕ ವಲಯ'ಗಳು ಹಿಂದೆ ಬೇರೆ ಬೇರೆ ಹೆಸರುಗಳಿಂದ ಕಾರ್ಯ ನಿರ್ವಹಿಸುತ್ತಿದ್ದವು. ೧೯೬೦ರಿಂದಲೂ ಇಂತಹ ಸಂಸ್ಥೆಗಳಿವೆ. ಮುಂದುವರಿದ ದೇಶಗಳು ಹಿಂದುಳಿದ ದೇಶಗಳಲ್ಲಿ ಅಭಿವೃದ್ಧಿಯ ನೆಪದಲ್ಲಿ ಸ್ಥಾಪಿಸುತ್ತಿರುವ ವಿಶೇಷ ಆರ್ಥಿಕ ವಲಯಗಳು ಉದ್ಯಮಿಗಳು, ವ್ಯಾಪಾರಿಗಳು, ರಾಜಕಾರಣಿಗಳ ಕುತಂತ್ರದಿಂದ ರೂಪುಗೊಳ್ಳುತ್ತಿದ್ದು, ಇವಕ್ಕೆ ಕೆಲವು ಅಧಿಕಾರಿಗಳ ಕುಮ್ಮಕ್ಕೂ ಇರುವುದು ಪಾರದರ್ಶಕ ಸತ್ಯ.

ಈಗಿನ ವಿಶೇಷ ಆರ್ಥಿಕ ವಲಯಗಳು ಹಿಂದೆ ರಫ್ತು ವಲಯಗಳು ಎಂದು ಗುರುತಿಸಲ್ಪಟ್ಟಿದ್ದವು. ಲೇಖಕರು ವಿಶ್ವದಲ್ಲಿ ಒಟ್ಟು ೮೪೭ ರಫ್ತು ವಲಯಗಳಿದ್ದವು ಎಂಬ ಮಾಹಿತಿ ನೀಡಿದ್ದಾರೆ. ಉತ್ತರ ಅಮೆರಿಕಾದಲ್ಲಿರಲಿ, ಕಮ್ಯುನಿಸಂ ಬಲಿಷ್ಠವಾಗಿರುವ ಚೀನಾದಲ್ಲೂ ವಿಶೇಷ ಆರ್ಥಿಕ ವಲಯಗಳಿವೆ ಎನ್ನುವುದು ವಿಪರ್ಯಾಸದ ಸಂಗತಿ. ಜಾಗತೀಕರಣದ ಹಿನ್ನೆಲೆಯಲ್ಲಿ 'ಜಾಗತೀಕರಣ ಇಲ್ಲವೇ ವಿನಾಶ' ಎಂಬ ಮಾತು ಕೇಳುತ್ತಿರುವ ಸಮಯದಲ್ಲೇ ನ್ಯಾಯಮೂರ್ತಿಗಳೊಬ್ಬರು 'ಜಾಗತೀಕರಣ ಮತ್ತು ವಿನಾಶ' ಎಂದು ಹೇಳಿರುವ ಮಾತು ಹೆಚ್ಚಿನ ಆಲೋಚನೆಗೆ ಮತ್ತು ಚರ್ಚೆಗೆ ಅವಕಾಶ ಕಲ್ಪಿಸಿದೆ.

ದೇಶದ ಅಭಿವೃದ್ಧಿಗೆ ಎಂದು ಬಹಿರಂಗವಾಗಿ ಹೇಳಿದರೂ, ಆಂತರ್ಯದಲ್ಲಿ ಶ್ರೀಮಂತರ ಅಭಿವೃದ್ಧಿಗೆ ದೇಶದ ಬಡ ರೈತರ ಶೋಷಣೆಗೆ ನಿಂತಿರುವ ವ್ಯವಸ್ಥೆಯು ಭಾರತದಲ್ಲಿ ಪ್ರಬಲವಾಗಿಯೇ ಕಾರ್ಯ ನಿರ್ವಹಿಸುತ್ತಿದೆ. ಶ್ರೀಮಂತರ ಅನುಕೂಲಕ್ಕಾಗಿ ಎಂತಹ ಸುಲಿಗೆಗೂ ಮುಂದಾಗಿರುವ ವ್ಯವಸ್ಥೆಯು ಗ್ರಾಮೀಣ ಉತ್ಪಾದನಾ ವ್ಯವಸ್ಥೆಯನ್ನು ಇಡಿಯಾಗಿ ಹಾಳುಮಾಡುತ್ತಿದೆ.

ಲೇಖಕರು ಗಮನಿಸಿರುವಂತೆ, 'ಅಂತಾರಾಷ್ಟ್ರೀಯ ವಿಶ್ವವಿದ್ಯಾಲಯಗಳಲ್ಲಿ ಅರ್ಥಶಾಸ್ತ್ರವನ್ನು ಬಂಡವಳಿ ಗರಿಗೆ ಬೇಕಾದ ರೀತಿಯಲ್ಲಿ ಬೋಧಿಸುತ್ತಿದ್ದ ವ್ಯಕ್ತಿಯನ್ನು ತಂದು ನೇರವಾಗಿ ಭಾರತದ ಸಚಿವ ಸಂಪುಟದ ವಿತ್ತ ಸಚಿವರನ್ನಾಗಿ ಮಾಡಲಾಯಿತು.' ಜಾಗತೀಕರಣದ ರೂಪುರೇಷೆ ಗಳಿಗೆ ಭಾರತವನ್ನು ಒಗ್ಗಿಸಲು ಮುಂದುವರಿದ ದೇಶಗಳು ತರಬೇತಿ ನೀಡುತ್ತಿವೆ. ಭಾರತದ ಬೋಧನಾ ಕ್ರಮದಲ್ಲಿ ವಿದೇಶೀ ಮಾದರಿಯನ್ನು 'ಪ್ರಸಾದ' ಎಂಬಂತೆ ಅನುಸರಿಸಲಾಗುತ್ತಿದೆ. ಇತ್ತೀಚಿನ ದಿನಗಳಲ್ಲಿ ಇದು ಕೇವಲ ಆರ್ಥಿಕ ವಿಷಯಗಳಿಗೆ ಮಾತ್ರ ಸಂಬಂಧಿಸಿಲ್ಲ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೋಧನೆಯು ವಿಶ್ವಮಟ್ಟದಲ್ಲಿ ಆಗುತ್ತಿರುವ ಸಂಶೋಧನೆಗಳನ್ನು ಆಧರಿಸಿ ಬದಲಾಗಬೇಕಾದ್ದು ಅನಿವಾರ್ಯವಾದರೂ, ಮಾನವಿಕ ವಿಷಯಗಳ ವಿಚಾರದಲ್ಲಿ ಈ ಮಾತು ಅನ್ವಯವಾಗುವುದಿಲ್ಲ. ಹೊಸ ಶೋಧಗಳ ಕಾರಣ ಕೆಲವು ವಿಷಯಗಳ ಸೇರ್ಪಡೆ ಅನಿವಾರ್ಯ ಎನಿಸಿದ ಹೊರತು, ಇತಿಹಾಸದ ಪಠ್ಯವನ್ನು ಬದಲಾಯಿಸುವುದು ಸರಿ ಎನಿಸುವುದಿಲ್ಲ. ಇನ್ನು ಭಾಷೆಯ ವಿಷಯಗಳು ಸ್ಥಳೀಯ ಸಂದರ್ಭಗಳಿಗೆ ಅನ್ವಯವಾಗುತ್ತವೆ. ಅಲ್ಲೂ ವ್ಯಾಕರಣ, ಛಂದಸ್ಸು ಇತ್ಯಾದಿ ಶಾಸ್ತ್ರ ವಿಚಾರಗಳ ಪಠ್ಯವನ್ನು ಬೇಡ ಎನ್ನಬಹುದಷ್ಟೇ ಹೊರತು ಬದಲಾಯಿಸುವುದು ಸೂಕ್ತವಾಗಲಾರದು. ಈಗ ವ್ಯಾಪಾರೀಕರಣಗೊಂಡಿರುವ ಶಿಕ್ಷಣವೇ ಪಾಶ್ಚಾತ್ಯ ಮಾದರಿಯನ್ನು ಅನುಸರಿಸುತ್ತಿದೆ ಎಂದ ಮೇಲೆ ಮಾರಾಟವಾಗಬಲ್ಲ ಸರಕುಗಳ ಬಗ್ಗೆ ಚರ್ಚೆ ಅನವಶ್ಯಕ.

ಲೇಖಕರ 'ಶ್ರೀಮಂತರಿಂದ, ಶ್ರೀಮಂತರಿಗಾಗಿ ಶ್ರೀಮಂತರು ಸೃಷ್ಟಿಸಿದ ಆರ್ಥಿಕ ನೀತಿ' ಎಂಬ ಅಭಿಪ್ರಾಯವನ್ನು ವಿಶೇಷ ಆರ್ಥಿಕ ವಲಯಗಳ ವಿಚಾರದಲ್ಲಿ ನಿರಾಕರಿಸುವುದು ಕಷ್ಟ. ವಿಶೇಷ ಆರ್ಥಿಕ ವಲಯಗಳಿಗಾಗಿ ಫಲವತ್ತಾದ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳಲಾಗುತ್ತಿದೆ ಮತ್ತು ಹಾಗೆ ವಶಪಡಿಸಿಕೊಂಡ ಭೂಮಿಯನ್ನು ರಿಯಲ್ ಎಸ್ಟೇಟ್ ದಂಧೆಗೆ ಬಳಸಿಕೊಳ್ಳಲಾಗುತ್ತಿದೆ ಎಂಬ ಆಘಾತಕಾರಿ ವಿಚಾರವು ಗಾಬರಿ ಹುಟ್ಟಿಸುತ್ತದೆ. ಇದನ್ನು ತಡೆಯಲು ಭಾರತೀಯ ರಿಸರ್ವ್ ಬ್ಯಾಂಕ್ ಸೂಚನೆ ನೀಡಿದ್ದರೂ, ನಿಲ್ಲದೆ ಮುಂದುವರಿಯುತ್ತಿರುವ ವಿಶೇಷ ಆರ್ಥಿಕ ವಲಯಗಳ ಸೃಷ್ಟಿಯು, ನಗರಗಳಿಗೆ ಹೊಂದಿ ಕೊಂಡಂತೆಯೇ ತಲೆ ಎತ್ತುತ್ತಿರುವ ಕೈಗಾರಿಕಾ ವಲಯ ಮತ್ತು ಉಪನಗರಗಳು ಸೃಷ್ಟಿಸುತ್ತಿರುವ ಸಮಸ್ಯೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿವೆಯೇ ಹೊರತು, ನಿವಾರಣೆಯಾಗುವ ಯಾವ

ಸೂಚನೆಯೂ ಇಲ್ಲ. ವಿಶೇಷ ಆರ್ಥಿಕ ವಲಯಗಳಲ್ಲಿ ಬಂಡವಾಳ ತೊಡಗಿಸುವವರಿಗೆ ರಾಜ್ಯ ಸರ್ಕಾರಗಳೂ ಕೆಲವು ವಿನಾಯಿತಿಗಳನ್ನು ನೀಡಬೇಕು ಮತ್ತು ರಾಷ್ಟ್ರದ ಇತರೆಡೆ ಅನ್ವಯಿಸುವ ಕಾರ್ಮಿಕ ಕಾನೂನುಗಳು ವಿಶೇಷ ಆರ್ಥಿಕ ವಲಯಗಳಿಗೆ ಅನ್ವಯ ಆಗುವುದಿಲ್ಲ. ೨೦೦೦ದ ಏಪ್ರಿಲ್‌ನಲ್ಲಿ ಜಾರಿಗೆ ಬಂದ ವಿಶೇಷ ಆರ್ಥಿಕ ವಲಯ ನೀತಿಗೆ ನಂತರದ ಎಲ್ಲ ಸರ್ಕಾರಗಳೂ ಮನ್ನಣೆ ನೀಡಿವೆ ಮತ್ತು ವಿಶೇಷ ಆರ್ಥಿಕ ವಲಯಗಳಿಗೆ ಅನುಕೂಲವಾಗುವ ಹಲವು ತಿದ್ದುಪಡಿಗಳನ್ನೂ ಮಾಡಿವೆ. ಈಗ ಇಡೀ ವಿಶ್ವದಲ್ಲಿ ಮತ್ತು ವಿಶೇಷವಾಗಿ ಭಾರತದಲ್ಲಿ ಅಸ್ತಿತ್ವದಲ್ಲಿರುವ ವಿಶೇಷ ಆರ್ಥಿಕ ವಲಯಗಳ ಮಾಹಿತಿಯನ್ನೂ ಲೇಖಕರು ಬಳಸಿಕೊಂಡಿದ್ದಾರೆ.

ಮೇಲೆ ತಿಳಿಸಿದ ಬಹುತೇಕ ಎಲ್ಲ ವಿಷಯಗಳೂ, ಮಾಹಿತಿ ಸಹಿತ ಡಾ॥ ಸಿ. ಚಂದ್ರಪ್ಪ ಅವರ 'ಭಾರತ ಮತ್ತು ಚೀನಾ ದೇಶಗಳಲ್ಲಿ ವಿಶೇಷ ಆರ್ಥಿಕ ವಲಯ' ಎಂಬ ಕೃತಿಯಲ್ಲಿ ಚರ್ಚಿತವಾಗಿವೆ. ಈ ಕೃತಿಯು ಒದಗಿಸಿರುವ ಮಾಹಿತಿಗಳು ಮತ್ತು ಸ್ಪಷ್ಟಪಡಿಸಿರುವ ಅನೇಕ ವಿಚಾರಗಳು ಶ್ರೀಮಂತರನ್ನು ಹೊರತುಪಡಿಸಿ, ವಿಶೇಷವಾಗಿ ಬಡ ರೈತರನ್ನು ಗಾಬರಿಗೊಳಿಸಿದೆ. ಅಷ್ಟೇ ಅಲ್ಲ, ಇದು ಹೀಗೆಯೇ ಮುಂದುವರಿದರೆ ಮುಂದೆ, ಬಹು ಹತ್ತಿರದಲ್ಲೇ ಜನಸಾಮಾನ್ಯರು ಎದುರಿಸಬೇಕಾದ ಹಲವು ಆತಂಕಗಳನ್ನು ಮನದಟ್ಟು ಮಾಡಿಕೊಡುತ್ತದೆ. ಪಶ್ಚಿಮ ಬಂಗಾಳದ ನಂದಿಗ್ರಾಮದ ಘಟನೆಯ ಹಿನ್ನೆಲೆಯಲ್ಲಿ ಈ ಚರ್ಚೆಗಳು ಮುಂದುವರಿಯುವುದು ಸೂಕ್ತವಾಗುತ್ತದೆ.

೨೦೦೫ರಲ್ಲಿ ಜಾರಿಗೆ ಬಂದ ವಿಶೇಷ ಆರ್ಥಿಕ ವಲಯ ಕಾಯಿದೆಯ ಪ್ರಕಾರ ವಿಶೇಷ ಆರ್ಥಿಕ ವಲಯಗಳಿಗೆ ಹಲವು ವಿಶೇಷ ಸೌಲಭ್ಯಗಳಿರುತ್ತವೆ. ಅವರಿಗೆ ತೆರಿಗೆಗಳ ಕಾಟವಿಲ್ಲ. ಕೆಲವು ತೆರಿಗೆಗಳ ವಿನಾಯಿತಿಯೂ ಉಂಟು. ಅವರಿಗೆ ತಮ್ಮದೇ ಆದ ಕಾಯಿದೆ ಮತ್ತು ಕಾನೂನುಗಳಿವೆ. ಇವುಗಳಿಗೆ ಪ್ರತ್ಯೇಕ ನ್ಯಾಯಾಲಯ ಇರುತ್ತದೆ. ಅದಕ್ಕೆ ಪ್ರತ್ಯೇಕ ನ್ಯಾಯಾಧೀಶರಿರುತ್ತಾರೆ. ಇವೆಲ್ಲವೂ ಬಹುರಾಷ್ಟ್ರೀಯ ಕಂಪೆನಿಗಳ ಹುನ್ನಾರ ಎಂದು ಎಲ್ಲರಿಗೂ ಗೊತ್ತಿದೆ. ಆದರೂ ಬಹುತೇಕ ಎಲ್ಲರೂ ಅಸಹಾಯಕರು. ಯಾರಿಗೂ ತಡೆಯುವ ಸಾಮರ್ಥ್ಯ ಇಲ್ಲ. ಅಭಿವೃದ್ಧಿಗೋಸ್ಕರ ವಿಶೇಷ ಆರ್ಥಿಕ ವಲಯಗಳು ಶ್ರಮಿಸುತ್ತವೆ ಎಂಬುದು ಸಾಮಾನ್ಯ ತಿಳಿವಳಿಕೆ.

ವಿಶೇಷ ಆರ್ಥಿಕ ವಲಯದ ಸ್ಥಾಪನೆಗೆ ಅವಕಾಶ ಕೋರಿ ಶ್ರೀಮಂತ ಸಂಸ್ಥೆಯು ರಾಜ್ಯ ಸರ್ಕಾರಕ್ಕೆ ಸಲ್ಲಿಸುವ ಮನವಿಯನ್ನು, ತನ್ನ ಅನುಮೋದನೆಯ ನಂತರ ಕೇಂದ್ರ ಸರ್ಕಾರಕ್ಕೆ ಕಳುಹಿಸುತ್ತದೆ. ಅಂತಿಮವಾಗಿ ಆಯ್ಕೆ ಸಮಿತಿಯು ಮನವಿಯನ್ನು ಒಪ್ಪಿ ವಿಶೇಷ ಆರ್ಥಿಕ ವಲಯದ ಸ್ಥಾಪನೆಗೆ ಹಸಿರು ನಿಶಾನೆ ತೋರಿಸುತ್ತದೆ. ಇದು ಅನುಸರಿಸಬೇಕಾದ ಕ್ರಮ.

ಆಧುನಿಕ ಮಾಹಿತಿ ಮತ್ತು ತಂತ್ರಜ್ಞಾನದ ಮೂಲಕವೇ ವಹಿವಾಟು ನಡೆಸುವ ವಿಶೇಷ ಆರ್ಥಿಕ ವಲಯದ ಕಚೇರಿಗಳು ಮೊದಲಿಗೆ ಮಹಾನಗರಗಳ ಭಾರೀ ಹೋಟೆಲ್‌ಗಳಲ್ಲಿರುತ್ತವೆ. ಜಾಗ ದೊರೆತ ಮೇಲೂ ಆ ಕಚೇರಿಗಳು ಅಲ್ಲೇ ಕೆಲಸ ಮಾಡುತ್ತವೆ. ರಾಷ್ಟ್ರಕ್ಕಿಂತಲೂ, ಅಂತಾರಾಷ್ಟ್ರೀಯ ಬಂಡವಾಳ ಹೂಡಿಕೆ ಮತ್ತು ವ್ಯಾಪಾರಕ್ಕೆ ಹೆಚ್ಚಿನ ಅವಕಾಶವಿರುವ ವಿಶೇಷ ಆರ್ಥಿಕ ವಲಯಗಳು ಉದ್ಯೋಗ ಸೃಷ್ಟಿಯ ಸಂದರ್ಭದಲ್ಲಿ ಕುಶಲಿಗಳಲ್ಲ ಎಂಬ ಕಾರಣದಿಂದ ಸ್ಥಳೀಯರನ್ನು ದೂರ ಇಡುತ್ತವೆ. ಹೊರಗಿನವರಿಗೆ ಉದ್ಯೋಗ ನೀಡುತ್ತವೆ. ಇದರಿಂದ ವಿಶೇಷ ಆರ್ಥಿಕ ವಲಯಗಳಲ್ಲಿ ಅನ್ಯ ಪ್ರಾಂತ್ಯ ಮತ್ತು ಅನ್ಯ ಭಾಷಿಕರ ವಲಸೆ ಹೆಚ್ಚುತ್ತದೆ. ತಕ್ಷಣ ಕೈಗೆ ಬರುವ ಹಣ ಮತ್ತು ನಂತರ ಯಾವಾಗಲೋ ಅರ್ಹತೆಗೆ ತಕ್ಕಂತೆ ಸಿಗುವ ಕೆಲಸದ ನೆಪದಲ್ಲಿ ತನ್ನದೇ ಆದ ಭೂಮಿಯನ್ನು ಕಳೆದುಕೊಳ್ಳುವ ರೈತ ತ್ರಿಶಂಕು ಸ್ಥಿತಿಗೆ ಇಳಿಯುತ್ತಾನೆ.

ಮೊದಲಿಗೆ, ಚೀನಾದಲ್ಲಿ ಸ್ಥಾಪಿತವಾದ ವಿಶೇಷ ಆರ್ಥಿಕ ವಲಯಗಳು ಅದ್ಭುತ ಯಶಸ್ಸನ್ನು ಸಾಧಿಸಿವೆ ಎಂಬ ಕಾರಣದಿಂದ ಬೇರೆ ದೇಶಗಳಲ್ಲೂ ವಿಶೇಷ ಆರ್ಥಿಕ ವಲಯಗಳು ಸ್ಥಾಪನೆಯಾದವು. ಕ್ರಮೇಣ ಭಾರತಕ್ಕೂ ಇವುಗಳ ಆಗಮನವಾಯಿತು ಮತ್ತು ಇದಕ್ಕೆ ಚೀನಾದ ಆರ್ಥಿಕ ವಲಯಗಳು ಮಾದರಿಯಾದವು. ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಯಿಂದ ಭೂಮಿಗೆ ಭಾರೀ ಬೆಲೆ ಬಂದಾಗ ರೈತರಿಗಿಂತ ಹೆಚ್ಚಾಗಿ ಮಧ್ಯವರ್ತಿಗಳಿಗೆ ಆಸಕ್ತಿ ಹೆಚ್ಚಾಯಿತು. ಬುಗುರಿ ಇಲ್ಲದೆಯೇ ಚಾಟಿ ಆಡಿಸಬಹುದಾದ ಯಾವ ಅವಕಾಶವನ್ನೂ ದುಡ್ಡಿನ ಬೆನ್ನು ಹತ್ತಿದವರು ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಹಣದ, ಅದರಲ್ಲೂ ತಾನು ಊಹಿಸಿಕೊಳ್ಳದಷ್ಟು ಹಣ ತನ್ನ ಭೂಮಿಯಿಂದ ದೊರೆಯುವುದೆಂಬ ಕಾರಣದಿಂದ ರೈತ, ವರ್ಷವಿಡೀ ದುಡಿದರೂ ಹೊಟ್ಟೆ, ಬಟ್ಟೆಗೂ ಸಾಕಾಗದ ಫಸಲನ್ನು, ಅದಕ್ಕಾಗಿ ವಿನಿಯೋಗವಾಗುವ ಶ್ರಮದಿಂದ ಮುಕ್ತಿ ಪಡೆಯಲು, ಆವರೆಗೆ ತನ್ನನ್ನು ಸಲಹುವ ತಾಯಿ ಎಂದು ಭಾವಿಸಿದ್ದ ಭೂಮಿಯನ್ನು ಮಾರಿ, ಶ್ರಮವಿಲ್ಲದ ಸುಖ ಜೀವನದ ಕನಸು ಕಾಣುತ್ತಾನೆ. ರೈತರು ಮತ್ತು ಕೂಲಿಕಾರ್ಮಿಕರ ಬದುಕನ್ನು ಕಸಿದುಕೊಂಡ ವಿಶೇಷ ಆರ್ಥಿಕ ವಲಯಗಳು, ಮೊದಲಿಗೆ ರಫ್ತು ಮತ್ತು ನಂತರ ಕೈಗಾರಿಕೆಗಳ ಹೆಸರಿನಲ್ಲಿ ಭೂಮಿಯನ್ನು ವಶಪಡಿಸಿಕೊಂಡು, ನಂತರ ಸ್ಥಳೀಯರನ್ನು ಅಥೋಭ್ರಷ್ಟ, ತಥೋಭ್ರಷ್ಟ ಮಾಡುತ್ತಿವೆ ಎನ್ನುವ ಸತ್ಯ ಅವುಗಳ ಸ್ಥಾಪನೆಗೆ ನೆರವಾದವರಿಗೆ ತಿಳಿಯದಿರಲು ಸಾಧ್ಯವಿಲ್ಲ. ಆದರೆ ಹಣದ ಬೆನ್ನು ಹತ್ತಿದವರಿಂದ ಯಾವುದೇ ನೈತಿಕ ಜವಾಬ್ದಾರಿಯನ್ನು ನಿರೀಕ್ಷಿಸುವಂತಿಲ್ಲ.

ಲೇಖಕರು, ವಿಶೇಷ ಆರ್ಥಿಕ ವಲಯವನ್ನು 'ವಿಶೇಷ ಶೋಷಣೆಯ ವಲಯ' ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ಇಲ್ಲಿ ಗಮನಿಸಲೇ ಬೇಕಾದ ಮತ್ತೊಂದು ವಿಪರ್ಯಾಸವೆಂದರೆ, ಭಾರತದಲ್ಲಿ ಗ್ರಾಮೀಣ ಗೃಹ ಕೈಗಾರಿಕೆಗಳು ಅಭಿವೃದ್ಧಿಯಾಗಬೇಕು ಎಂದು ಹಂಬಲಿಸಿ, ಗ್ರಾಮ ಸ್ವರಾಜ್ಯದ ಕನಸು ಕಂಡ ಮಹಾತ್ಮಾ ಗಾಂಧಿಯವರ ರಾಜ್ಯವಾದ ಗುಜರಾತ್‌ನಲ್ಲಿ ಒಂದು ವಿಶೇಷ ಆರ್ಥಿಕ ವಲಯಕ್ಕೆ ಮಹಾತ್ಮಾ ಗಾಂಧಿ ಅವರ ಹೆಸರನ್ನು ಇಡಲಾಗಿರುವುದು ವಿಪರ್ಯಾಸಕ್ಕೊಂದು ಉದಾಹರಣೆ.

ಭಾರತದಲ್ಲಿ ವಿದೇಶೀ ಸಂಸ್ಥೆಗಳು ಹೂಡಿರುವ ಬಂಡವಾಳವು ಹೇರಳ ಎನ್ನುವಷ್ಟೇ ಇದೆ. ಅದನ್ನು ರಕ್ಷಿಸುವ ಹೊಣೆಯನ್ನು ಬಹುತೇಕ ಎಲ್ಲ ಆಡಳಿತಶಾಹಿ ರಾಜಕೀಯ ಪಕ್ಷಗಳೂ ಒಪ್ಪಿಕೊಂಡಿವೆ. ವಿಶೇಷ ಆರ್ಥಿಕ ವಲಯಗಳ ಬಿಸಿ ನೇರವಾಗಿ ನಗರವಾಸಿಗಳನ್ನು ತಟ್ಟುವುದಿಲ್ಲ. ಆದರೆ ಯಾವುದೇ ನಗರಕ್ಕೆ ಹೊಂದಿಕೊಂಡ ಹಳ್ಳಿಗಳು ಇದರ ಬಿಸಿಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದ ಸ್ಥಿತಿಯನ್ನು ನಮ್ಮ ಆಡಳಿತಶಾಹಿ ಸೃಷ್ಟಿಸಿದೆ. ಮನೆ ಉರಿಯುತ್ತಿರುವಾಗ ಬೆಂಕಿ ಕಾಯಿಸಿಕೊಳ್ಳುವ ಬುದ್ಧಿ ಇದು. ಹಳ್ಳಿಗಳ ಮಾತನ್ನು ಒತ್ತಟ್ಟಿಗಿಟ್ಟರೂ, ಗುಡ್ಡಗಾಡು ಮತ್ತು ಕಾಡುಗಳಲ್ಲಿ ವಾಸಿಸುವ ಆದಿವಾಸಿಗಳು ಮತ್ತು ಗಿರಿಜನರ ಪಾಡನ್ನು ಯಾರೂ ಚಿಂತಿಸಿದಂತಿಲ್ಲ. ಅವರಿಗೆ ಒಂದಷ್ಟು ಪರಿಹಾರ ಕೊಡುವುದೇ ನಮ್ಮ ಕರ್ತವ್ಯ ಎನ್ನುವ ಮನೋಭಾವವೇ ಹೆಚ್ಚುತ್ತಿರುವಂತಿದೆ. ಒರಿಸ್ಸಾದ ನಿಯಮಗಿರಿ ಬೆಟ್ಟದಲ್ಲಿ ಗಣಿಗಾರಿಕೆಗೆ ಒಕ್ಕಲೆಬ್ಬಿಸುವ ಕೆಲಸ ಆಗುತ್ತಿರುವಾಗ, ಅವರ ಭವಿಷ್ಯದ ಬದುಕಿನ ಬಗ್ಗೆ ಸೂಕ್ತವಾಗಿ ಚಿಂತಿಸುವ ಕೆಲಸ ಆಗಿಲ್ಲ ಎಂದು ಯಾರಿಗಾದರೂ ಅನಿಸಬಹುದು. ಹಿಂದೆ ಜಲಾಶಯಗಳ ನಿರ್ಮಾಣಕ್ಕಾಗಿ ಮುಳುಗಿಸಿರುವ ಗ್ರಾಮಸ್ಥರ ಬದುಕು ಮತ್ತು ಜಲ ಮತ್ತು ಉಷ್ಣ ವಿದ್ಯುತ್ ಸ್ಥಾವರಗಳ ಸ್ಥಾಪನೆ ಮತ್ತು ವಿದ್ಯುತ್ ವಿತರಣ ಮಾರ್ಗಗಳ ನಿರ್ಮಾಣಕ್ಕಾಗಿ ಕಡಿದಿರುವ ಮರಗಳ ಬಗ್ಗೆ ಪರಿಸರವಾದಿಗಳು ಪ್ರತಿಭಟನೆ ಮಾಡಿದರೆ ಪರಿಹಾರ ಸಿಗಬಹುದಷ್ಟೇ ಹೊರತು ಸಮಸ್ಯೆ ಬಗೆಹರಿಯುವುದಿಲ್ಲ. ಈಗಂತೂ ಕಾರ್ಪೊರೇಟ್ ಮತ್ತು ಭೂಮಾಫಿಯಾ ವಲಯಗಳು ಭೂಮಿಯನ್ನು ಮಾತ್ರವಲ್ಲದೆ, ಕೆರೆ, ಕಟ್ಟೆಗಳನ್ನೂ ನುಂಗುತ್ತಿವೆ. ಭೂಮಿಯ ಬೆಲೆಯನ್ನು ನಿರ್ಧರಿಸುವವರು ಮಾರುವವರಲ್ಲ; ಬದಲಿಗೆ ಕೊಳ್ಳುವವರು. ಅವರಿಗೆ ನೆರವಾಗುವವರು ಅಧಿಕಾರಿಗಳು ಮತ್ತು ರಾಜಕಾರಣಿಗಳು.

ಕೃತಿಯು ಅವಕಾಶ ಮಾಡಿಕೊಂಡು, ಅಭಿವೃದ್ಧಿ ಪದವನ್ನು ವ್ಯಾಖ್ಯಾನಿಸಲು ಹಲವು ಬಾರಿ ಪ್ರಯತ್ನಿಸಿದೆ. ನಮಗೆ ತಿಳಿದಿರುವಂತೆ ನಮ್ಮ ದೇಶದಲ್ಲಿ ರಸ್ತೆಗಳು ಹೆಚ್ಚಿವೆ. ಗ್ರಾಮಾಂತರ ಸಾರಿಗೆ ವ್ಯವಸ್ಥೆ ಸುಧಾರಿಸಿದೆ. ಶೈಕ್ಷಣಿಕ ಪ್ರಗತಿ ಸಾಧ್ಯವಾಗಿದೆ. ವೈದ್ಯಕೀಯ ಕ್ಷೇತ್ರದಲ್ಲೂ ಸುಧಾರಣೆಯಾಗಿದೆ. ಸಾರ್ವಜನಿಕ ವಾಹನ ವ್ಯವಸ್ಥೆಯ ಜೊತೆಗೆ ಖಾಸಗಿಯಾಗಿಯೂ ಇದು ಐಷಾರಾಮಿ ಆಗಿದೆ. ಇದಿಷ್ಟನ್ನು ಅಭಿವೃದ್ಧಿ ಎನ್ನಬೇಕೆ ಎಂಬ ಪ್ರಶ್ನೆಗೆ ಉತ್ತರ ಸುಲಭವಾಗಿ ದೊರೆಯುವುದಿಲ್ಲ. ಸಾಮಾನ್ಯ ಜನರು ಅಂದಂದಿನ ಜೀವನಕ್ಕೆ ಕಷ್ಟಪಡುವ ಪರಿಸ್ಥಿತಿ ತಪ್ಪಿದೆಯೇ ? ಶ್ರೀಮಂತ ಮತ್ತು ಕಾರ್ಪೊರೇಟ್ ವಲಯಕ್ಕೆ ಅನುಕೂಲವಾಗುವ ಬದಲಾವಣೆಗಳು ಮಾತ್ರ ಅಭಿವೃದ್ಧಿ ಎನಿಸಿಕೊಳ್ಳುವುದಿಲ್ಲ.

ಅಭಿವೃದ್ಧಿಯ ಹೆಸರಿನಲ್ಲಿ ಸಾಮಾನ್ಯ ಜನತೆಗೆ, ಅದರಲ್ಲೂ ಕೃಷಿಕರಿಗೆ ಮಾಡುತ್ತಿರುವ ವಂಚನೆಯನ್ನು ಅಭಿವೃದ್ಧಿ ಎನ್ನಬೇಕೆ ? ಒಂದೆಡೆ ರಸ್ತೆಗಳು, ಕಟ್ಟಡಗಳು, ಮಾಲ್‌ಗಳು ಕಣ್ಣು ಕುಕ್ಕುತ್ತಿದ್ದರೆ ಮತ್ತೊಂದೆಡೆ ಸಾಲದ ಹೊರೆಯನ್ನು ತಡೆದುಕೊಳ್ಳಲಾರದೆ ಆತ್ಮಹತ್ಯೆಯ ಮೊರೆಹೋಗುತ್ತಿರುವ ರೈತರನ್ನು ಕಂಡಾಗ ಕಣ್ಣಿನಲ್ಲಿ ನೀರು ತುಂಬುತ್ತದೆ.

ಅಭಿವೃದ್ಧಿಯ ಹೆಸರಿನಲ್ಲಿ ದೇಶದ ವಿವಿಧೆಡೆ ನಡೆಯುತ್ತಿರುವ ಪರಿಸರಕ್ಕೆ ಹಾನಿಯಾಗುವಂತಹ ಕೆಲಸಗಳನ್ನು ಪ್ರತಿಭಟನೆಗಳು ನಡೆಯುತ್ತಿವೆ ಎಂಬುದರತ್ತ ಗಮನ ಸೆಳೆಯುವ ಲೇಖಕರು ಫಲವತ್ತಾದ ಭೂಮಿಯನ್ನು ಕಾಪಾಡಬೇಕು, ರೈತ ಮತ್ತು ಕೃಷಿಯನ್ನು ಪ್ರೋತ್ಸಾಹಿಸಬೇಕು ಎಂಬ ಮಾತನ್ನು ಭರತವಾಕ್ಯದಂತೆ ನುಡಿದಿದ್ದಾರೆ. ಆದರೆ ಇದನ್ನು ತಡೆಯಲು ರೈತನಿಂದ ಸಾಧ್ಯವಿಲ್ಲ. ರೈತರು ಚುನಾಯಿಸಿರುವ ಬಹುತೇಕ ಜನ ಪ್ರತಿನಿಧಿಗಳು ತಮ್ಮ ಸೀಮಿತ ಅಧಿಕಾರಾವಧಿಯಲ್ಲಿ ತಾವು ಎಷ್ಟು ಹೆಚ್ಚು ಶ್ರೀಮಂತರಾಗಬಹುದು ಎಂಬ ಚಿಂತೆಯಲ್ಲೇ ಕಾರ್ಯ ಪ್ರವೃತ್ತರಾಗುವುದರಿಂದ ಅಭಿವೃದ್ಧಿ ಎನ್ನುವುದು ಕನಸಿನ ಗಂಟಾಗಿಯೇ ಉಳಿಯುತ್ತದೆ.

ಬದುಕಿಗೆ ಅತ್ಯವಶ್ಯಕವಾದ ಗಾಳಿ, ಆಹಾರ ಮತ್ತು ಕುಡಿಯುವ ನೀರಿಗೆ ಹಾಹಾಕಾರವನ್ನು ಸೃಷ್ಟಿಸುತ್ತಾ, ಶ್ರೀಮಂತರ ಓಲೈಕೆಯಲ್ಲಿ ನಿರತ ವಾಗಿರುವ ಮತ್ತು ವಿದೇಶೀ ಕಾರ್ಪೊರೇಟ್ ಸಂಸ್ಥೆಗಳಿಗೆ 'ಜೀ ಹುಜೂರ್' ಎನ್ನುತ್ತಿರುವ ನಮ್ಮ ಆಡಳಿತ ವ್ಯವಸ್ಥೆಯು ಸ್ಥಳೀಯರ, ಅದರಲ್ಲೂ ಬಡ ರೈತರ ಬದುಕನ್ನು ಚಿಂದಿಮಾಡುತ್ತಿದೆ. ಇದೆಲ್ಲವನ್ನೂ ಡಾ|| ಸಿ. ಚಂದ್ರಪ್ಪ ತಮ್ಮ **ಭಾರತ ಮತ್ತು ಚೀನಾ ದೇಶಗಳಲ್ಲಿ ವಿಶೇಷ ಆರ್ಥಿಕ ವಲಯ** ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಹಲವು ಸಂದರ್ಭಗಳಲ್ಲಿ ವಿಷಯಗಳ ಪುನರಾವರ್ತನೆ ಆಗಿದೆ ಎನಿಸಿದರೂ, ಪ್ರತಿಯೊಂದು ಸಂದರ್ಭಕ್ಕೂ ಅವರು ಸಂಗ್ರಹಿಸಿರುವ ಅಂಕಿ – ಅಂಶಗಳು ಮತ್ತು ನಡೆಯುತ್ತಿರುವ ಆಗು – ಹೋಗುಗಳ ಮಾಹಿತಿಯು ವಾಸ್ತವವನ್ನು ಕಣ್ಣಿಗೆ ಕಟ್ಟುವಂತೆ ಮನವರಿಕೆ ಮಾಡಿಕೊಟ್ಟಿವೆ. ಶ್ರೀಮಂತರಿಗೆ, ಕೆಲವು ಅಧಿಕಾರಿಗಳಿಗೆ ಮತ್ತು ಜನವಿರೋಧಿ ನೆಲೆಯ ರಾಜಕಾರಣಿಗಳಿಗೆ ಈ ಕೃತಿಯಲ್ಲಿ ಪ್ರಸ್ತಾಪಿತವಾಗಿರುವ ಸಂಗತಿಗಳು ಅಪ್ರಿಯ ಎನ್ನಿಸಬಹುದು ಮತ್ತು ಅವರ ಸಿಟ್ಟನ್ನು ಹೆಚ್ಚಿಸಬಹುದು. ಸ್ಥಳೀಯ ಸಮಸ್ಯೆಗಳು, ಇರುವ ಮೂಲಭೂತ ಸೌಕರ್ಯಗಳು, ಅವುಗಳನ್ನು ಉತ್ತಮಪಡಿಸಲು ಇರುವ ಪ್ರಕೃತಿ ಸಹಜ ಸನ್ನಿವೇಶಗಳ ಸದ್ಬಳಕೆಯ ಅರಿವು ಇಲ್ಲದವರಿಗೆ ಅಭಿವೃದ್ಧಿಯು ಸಮಾಜದ ಸರ್ವತೋಮುಖ ಅಭಿವೃದ್ಧಿ ಎನ್ನುವುದರ ಬದಲು ತಮ್ಮ ಸ್ವಂತ ಅಭಿವೃದ್ಧಿ ಎಂದು ಮಾತ್ರ ತಿಳಿದಿರುತ್ತದೆ.

ಭಾರತದ ಇತಿಹಾಸ, ಪ್ರಾಕೃತಿಕ ಸಂಪತ್ತು, ಭೌಗೋಳಿಕ ಸಂಪತ್ತು, ಜನರ ಶಕ್ತಿಸಾಮರ್ಥ್ಯಗಳ ಅರಿವಿಲ್ಲದೆ, ಅಪರೂಪಕ್ಕೆ ಭಾರತದಲ್ಲಿ ಯಾಂತ್ರೀಕೃತ ಶುದ್ಧ ನೀರನ್ನು ಕುಡಿಯುವ, ವಿದೇಶೀಯರು ಮತ್ತು ಅವರ ಬಾಲ ಹಿಡಿದ ಮಧ್ಯವರ್ತಿ ವಲಯಕ್ಕೆ ತಾವು ಸ್ಥಳೀಯರ ಬದುಕನ್ನು, ತಮ್ಮ ಸ್ವಾರ್ಥಕ್ಕೆ ನಾಶ ಮಾಡುತ್ತಿದ್ದೇವೆ ಎಂಬ ಪಾಪಪ್ರಜ್ಞೆ ಇರಬೇಕು. ಹಣ ಮತ್ತು ಅಧಿಕಾರದ ಬೆನ್ನು ಹತ್ತಿದವರಿಗೆ ಇದು ತಿಳಿಯುವುದಿಲ್ಲ ಮತ್ತು ಮುಖ್ಯವೂ ಅಲ್ಲ.

ಇತಿಹಾಸದ ಬೋಧಕರಾದರೂ, ಡಾ|| ಸಿ. ಚಂದ್ರಪ್ಪ ವರ್ತಮಾನದ ಆತಂಕಗಳ ಬಗ್ಗೆ ಅಪರೂಪದ ಮಾಹಿತಿಗಳನ್ನು ಸಂಗ್ರಹಿಸಿ, ಸಮಾಜಮುಖಿ ಓದುಗರಿಗೆ ನೀಡಿರುವ ಈ ಕೃತಿಯ ಓದಿನಿಂದ ಸಾಮಾಜಿಕ ಸಮಸ್ಯೆಗಳ ಅರಿವು ಹೆಚ್ಚುತ್ತದೆ ಎಂದು ನಿರೀಕ್ಷಿಸಬಹುದು.

**ಡಾ|| ಎಚ್. ಎಸ್. ಗೋಪಾಲ ರಾವ್**
ನಂ. ೧೪೪, 'ಸ್ವಸ್ತಿಶ್ರೀ ಸ್ಕಂದ', ಐ. ವೈ. ಡಿ. ರಸ್ತೆ
ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩

# ಅಪ್ಪಿಕೊಳ್ಳಬೇಕೆಂದಿದೆ

ಕಾವ್ಯಲೋಕ



ಅಪ್ಪಿಕೊಳ್ಳಬೇಕೆಂದಿದೆ
ದಾರಿಯಲ್ಲಿ ಎದುರಿಗೆ ಸಿಗುವ ಸುಂದರಿಯನ್ನು
ಯಾವುದೇ ಕಾಮನೆಗಳನ್ನು ಆವಾಹಿಸಿಕೊಳ್ಳದೆ

ಮನೆಯಲ್ಲಿ ಇರುವ ತಂಗಿಯನ್ನು
ಯಾವುದೇ ಅಂಗವನ್ನು ಹೊತ್ತುಕೊಳ್ಳದೆ

ಪಕ್ಕದಲ್ಲಿ ಇರುವ ಹೆಂಡತಿಯನ್ನು
ಯಾವುದೇ ದಾಂಪತ್ಯದ ಸೋಂಕಿಲ್ಲದೆ

ಅಪ್ಪಿಕೊಳ್ಳಬೇಕೆಂದಿದೆ
ನನ್ನ ತಮ್ಮನನ್ನು
ಯಾವುದೇ ಈರ್ಷ್ಯೆಗೆ ಎಡೆಮಾಡಿಕೊಡದೆ

ರಸ್ತೆ ಬದಿಯ ಹುಚ್ಚನನ್ನು
ನನ್ನದೇ ದೇಹದ ಅಂಗವೆಂಬಂತೆ

ಹರಕಲು ಬಟ್ಟೆಯ ಕೊಳಕು ಮೈಯ
ಕೂಲಿಯನ್ನು
ನನ್ನದೇ ಪೋಷಾಕು ಎಂಬಂತೆ

ಅಪ್ಪಿಕೊಳ್ಳುವುದೆಂದರೆ
ದೈವತ್ವವನ್ನು ಆವಾಹಿಸಿಕೊಳ್ಳುವುದೆ ?
ಬುದ್ಧ ಬಸವನಂತಾಗುವುದೆ !

ಹುಡುಕುತ್ತಿದ್ದೇನೆ
ನನ್ನದೇ ಆಕೃತಿಯನ್ನು
ಅಪ್ಪಿಕೊಳ್ಳಬೇಕೆಂದಿದೆ ನನ್ನನ್ನು ನಾನೇ !

**ಚೀಮನಹಳ್ಳಿ ರಮೇಶಬಾಬು ಎಸ್.**
ನಂ. ೫೩, ೭ನೇ ಅಡ್ಡರಸ್ತೆ, ಕಾಫಿ ಬೋರ್ಡ್ ಬಡಾವಣೆ
ಹೆಬ್ಬಾಳ ಕೆಂಪಾಪುರ, ಬೆಂಗಳೂರು – ೫೬೦ ೦೨೪

ಸುನಂದಮ್ಮನವರ ಭಾಷೆ ನೇರ ಮತ್ತು ಸರಳ. ಬೆಂಗಳೂರಿನ ಆಡುಭಾಷೆಯ ಶೈಲಿಯನ್ನು ಇವರ ಬರಹಗಳಲ್ಲಿ ಗುರುತಿಸಬಹುದಾಗಿದೆ. ಇವರ ಕೃತಿಗಳಲ್ಲಿ ಬರುವ ಎಲ್ಲ ಪಾತ್ರ ಸನ್ನಿವೇಶಗಳೂ ಮಧ್ಯಮ ವರ್ಗವನ್ನು ಪ್ರತಿನಿಧಿಸುತ್ತವೆ. ವೈಭವದ ಬದುಕಿನ ಚಿತ್ರಣವಾಗಲೀ, ಅತ್ಯಂತ ಬಡತನದ ಬಾಳ್ವೆಯಾಗಲೀ, ದಲಿತವರ್ಗದ ಚಿತ್ರಣವಾಗಲಿ ಕಂಡುಬರುವುದಿಲ್ಲ. "ಕೆಳವರ್ಗದ, ಗ್ರಾಮೀಣ ಬದುಕಿನ ಅನುಭವದ ಕೊರತೆಯಿಂದಾಗಿ ಅವರ ಬಗ್ಗೆ ಬರೆದಿಲ್ಲ" ಎಂದು ಲೇಖಕಿಯೇ ವಿನಮ್ರವಾಗಿ ಒಪ್ಪಿಕೊಂಡಿದ್ದಾರೆ. ಹೀಗಾಗಿ ಸುನಂದಮ್ಮನವರ ಸಾಮಾಜಿಕ ಅನುಭವ ನಗರ ಜೀವನದ ಮಿತಿಗೆ ಒಳಪಟ್ಟಿದೆ.



ಕೆ. ಅಕ್ಕಮಹಾದೇವಿ



# ಹಾಸ್ಯ ಲೇಖಕಿ ಟಿ. ಸುನಂದಮ್ಮ

**ಕ**ನ್ನಡ ಸಾಹಿತ್ಯಕ್ಕೆ ಹಾಸ್ಯ ಬರಹಗಳ ಮುಖಾಂತರ ಒಂದು ವಿಶಿಷ್ಟ ಸ್ಥಾನವನ್ನು ತಂದುಕೊಟ್ಟವರು ಟಿ. ಸುನಂದಮ್ಮನವರು. ಕನ್ನಡದ ಪ್ರಥಮ ಹಾಸ್ಯ ಲೇಖಕಿಯಾದ ಸುನಂದಮ್ಮನವರು ಆಗಸ್ಟ್ ೮, ೧೯೧೭ರಂದು, ಮೈಸೂರಿನಲ್ಲಿ ಜನಿಸಿದರು. ನಾಗಮ್ಮ, ಟಿ. ರಾಮಯ್ಯ ಇವರ ತಾಯಿ ತಂದೆಯರು. ಶಿಕ್ಷಣಾಧಿಕಾರಿಗಳೂ, ವಿದ್ವಾಂಸರೂ ಆಗಿದ್ದ ತಾತ ವೆಂಕಟರಾಮಯ್ಯ, ಮೊಮ್ಮಗಳ ಮೇಲೆ ಗಾಢ ಪ್ರಭಾವವನ್ನು ಬೀರಿದರು. ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರಾಮುಖ್ಯತೆ ಇಲ್ಲದ ಅಂದಿನ ದಿನಗಳಲ್ಲಿ ತಾತ ಹಾಗೂ ಪ್ರಗತಿಶೀಲರಾದ ತಾಯಿ ತಂದೆಯರ ಪ್ರೋತ್ಸಾಹ ಸುನಂದಮ್ಮನವರು ಕಾಲೇಜಿನವರೆಗೂ ಓದಲು ಅವಕಾಶ ಕಲ್ಪಿಸಿಕೊಟ್ಟಿತು.

ಆ ಕಾಲದ ಪದ್ಧತಿಯಂತೆ ಸುನಂದಮ್ಮನವರಿಗೆ ಕೇವಲ ಹನ್ನೊಂದು ವರ್ಷ ವಯಸ್ಸಿಗೇ ಮದುವೆಯಾಯಿತು. ವರ ಹದಿನೇಳು ವರ್ಷದ ವೆಂಕಟನಾರಾಯಣಪ್ಪ ಇಂಟರ್‌ಮೀಡಿಯಟ್ ವಿದ್ಯಾರ್ಥಿ. ಹತ್ತು ದಿನಗಳ ವೈಭವದ ವಿವಾಹ. ಹದಿನೆಂಟು ಮೊಳದ ಸೀರೆ, ತೊಲಗಟ್ಟಲೆ ಚಿನ್ನಾಭರಣ, ಉರುಟಣೆ ಹಾಡುಗಳು, ಆರತಿ-ಧೂಮ, ಹೋಮದ ಹೊಗೆ ಮಧ್ಯೆ ತೂಕಡಿಸಿದ್ದೇ ನೆನಪು. ವಿವಾಹದ ಅನಂತರವೂ ಇಬ್ಬರ ವಿದ್ಯಾಭ್ಯಾಸವೂ ಮುಂದುವರಿಯಿತು. ಸಂಪ್ರದಾಯ, ಶಿಕ್ಷಣಗಳ ತೂಗುಯ್ಯಾಲೆಯಲ್ಲೂ ಪಾಠ, ಪರೀಕ್ಷೆಗಳಲ್ಲಿ ಸುನಂದಮ್ಮನವರಿಗೇ ಮೊದಲ ಸ್ಥಾನ ಮೀಸಲು.

"ನನ್ನ ಸಾಹಿತ್ಯ ಪ್ರಿಯತೆಯ ಪ್ರೇರಣೆ ನಮ್ಮ ತಾತ, ತಂದೆ ಮತ್ತು ತಾಯಿ. ಶಿಸ್ತು, ಕಾಲಕ್ಕೆ ಬೆಲೆ, ನಿಯಮಿತ ಅಭ್ಯಾಸಗಳು - ಇವು ಅವರಿಂದ ನಾನು ಪಡೆದ ಬಳುವಳಿ" - ಎನ್ನುತ್ತಾರೆ ಸುನಂದಮ್ಮ. ಈಕೆ ಒಂಬತ್ತನೇ ವಯಸ್ಸಿನಲ್ಲಿಯೇ ಸಾಹಿತ್ಯರಚನೆ ಆರಂಭಿಸಿದರು.

ಇವರು ಮೊಟ್ಟಮೊದಲು ಸಣ್ಣಕಥೆ ಬರೆದಾಗ ೧೨ರ ಬಾಲಕಿ. ಮದುವೆ ಮನೆಯಲ್ಲಿ ನೋಡಿದ ಬಾಲವಿಧವೆಯ ಬದುಕು ಇವರ ಕಥಾವಸ್ತು. ಕಥೆಯ ಹೆಸರು "ಇನ್ನೂ ಚಿಕ್ಕ ಹುಡುಗಿ." ಎಂಟು ಹತ್ತು ವರ್ಷಗಳ ದೀರ್ಘ ವಿಶ್ರಾಂತಿಯ ತರುವಾಯ ಸುನಂದಮ್ಮ ಮತ್ತೆ ಲೇಖನಿ ಹಿಡಿದರು. ೧೯೪೨ರಲ್ಲಿ ಇವರ ಬರಹದ ಬದುಕಿಗೆ ಅನಿರೀಕ್ಷಿತ ತಿರುವು ದೊರೆಯಿತು. ಡಾ|| ಎಂ. ಶಿವರಾಂ (ರಾಶಿ) ಆಂಗ್ಲ 'ಪಂಚ್' ಮಾದರಿಯ 'ಕೊರವಂಜಿ' ಹಾಸ್ಯ ಮಾಸಪತ್ರಿಕೆಯನ್ನು ಪ್ರಾರಂಭಿಸಿದರು. ತಮ್ಮನ ಸಲಹೆಯಂತೆ ಮೊದಲಿಗೆ ಸುನಂದಮ್ಮನವರು ಕೊರವಂಜಿಗಾಗಿ 'ನಾನ್ಯಾರಿಟ್ಟದ್ದು' - ಲೇಖನ ಬರೆದರು. ನಾ. ಕಸ್ತೂರಿ, ಜಿ. ಪಿ. ರಾಜರತ್ನಂ, ರಾಶಿ - ಮೊದಲಾದವರ ಮೆಚ್ಚುಗೆ, ಓದುಗರ ಪ್ರಶಂಸೆ, ಸುನಂದಮ್ಮನವರ ಒಲವನ್ನು ವಿನೋದ ಸಾಹಿತ್ಯದತ್ತ ಆಕರ್ಷಿಸಿದವು. ಮುಂದೆ ೨೫ ವರ್ಷ 'ಕೊರವಂಜಿ' ಪತ್ರಿಕೆ ಇರುವವರೆಗೂ, ಅನಂತರ ಮಲ್ಲಿಗೆ, ಸುಧಾ, ಪ್ರಜಾಮತ - ಹೀಗೆ ಅನೇಕ ನಿಯತಕಾಲಿಕೆಗಳು ಸುನಂದಮ್ಮನವರನ್ನು ಕೈಬೀಸಿ ಕರೆದವು. ಅಂದಿನಿಂದ ಸುನಂದಮ್ಮನವರು ಬದುಕಿರುವವರೆಗೂ ಅವರ ನಗೆಬುಗ್ಗೆ ಅವ್ಯಾಹತವಾಗಿ ಓದುಗ ವೃಂದವನ್ನು ನಗಿಸುತ್ತಲೇ ಬಂದಿದೆ.

**ಸುನಂದಮ್ಮನವರ ಪ್ರಬಂಧ ಸಾಹಿತ್ಯ**

ಕನ್ನಡದ ಪ್ರಥಮ ಹಾಸ್ಯ ಲೇಖಕಿಯಾಗಿ ಎಲ್ಲರ ಮೆಚ್ಚುಗೆ ಗಳಿಸಿದ ಸುನಂದಮ್ಮನವರು ಅತಿ ಹೆಚ್ಚಿನ ಸಂಖ್ಯೆಯ ಪ್ರಬಂಧಗಳನ್ನು ರಚಿಸಿದ್ದಾರೆ. ಇವರ ಎಲ್ಲ ಪ್ರಬಂಧಗಳ ಸಂಕಲನ "ಶ್ರೀಮತಿ ಸುನಂದಮ್ಮನವರ ಸಮಗ್ರ ಹಾಸ್ಯ ಸಾಹಿತ್ಯ" ೧೯೯೩ರಲ್ಲಿ ಪ್ರಕಟವಾಯಿತು. ಅ. ರಾ. ಮಿತ್ರ ಅವರು ಈ ಕೃತಿಗೆ ನಲ್-ನುಡಿಯನ್ನು ಬರೆದಿದ್ದಾರೆ. 'ಕೊರವಂಜಿ'ಯಲ್ಲಿ ಪ್ರಕಟವಾದ ಕೆಲವು ಪ್ರಬಂಧಗಳು ಈ ಸಂಕಲನದಲ್ಲಿ ಸೇರ್ಪಡೆಯಾಗಿಲ್ಲ. ಇತ್ತೀಚೆಗೆ ೨೦೦೧ರಲ್ಲಿ 'ಸಮಯ-ಸಿಂಧು' ಎಂಬ ಮತ್ತೊಂದು ಸಂಕಲನ ಪ್ರಕಟವಾಗಿದೆ. ಇದಲ್ಲದೆ ಇನ್ನೂ ಎಷ್ಟೋ ಪ್ರಬಂಧಗಳು, ಬರಹಗಳು ಬೇರೆ ಬೇರೆ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿದ್ದು, ಪ್ರಸ್ತುತ ಲಭ್ಯವಿಲ್ಲದಂತಾಗಿವೆ.

ಲಲಿತ ಪ್ರಬಂಧ, ನಗೆಬರಹ, ಹರಟೆ - ಈ ಮೂರೂ ಲಕ್ಷಣಗಳ ತ್ರಿವೇಣಿ

ಸಂಗಮವನ್ನು ಇವರ ಬರಹಗಳಲ್ಲಿ ಗುರುತಿಸ ಬಹುದಾಗಿದೆ. "ಇಲ್ಲಿನ ಕೆಲವು ಬರಹಗಳು ಸಮಕಾಲೀನವಾಗದಿರಬಹುದು" ಎಂದು ಲೇಖಕಿಯೇ ತಿಳಿಸಿದ್ದಾರೆ. ನಾಗರಿಕ ಸಮಾಜದಲ್ಲಿ ಅಂತಸ್ತು ಗಳಿಗಾಗಿ, ಪ್ರಚಾರಕ್ಕಾಗಿ ಪರದಾಡುವ ಮಧ್ಯಮ ವರ್ಗದ ಸ್ತ್ರೀ, ಇವರ ಅನೇಕ ಬರಹಗಳ ಕೇಂದ್ರಬಿಂದು, ಗಂಡಂದಿರ ಸೋಲು, ಹೆಂಗಸರ ಸರ್ವಾಧಿಕಾರ, ಅಳಿಯಂದಿರ ಪರದಾಟ, ದೀಪಾವಳಿಯ ಸತ್ಕಾರ – ಇಂಥ ವಿಷಯಗಳ ಸುತ್ತ ಸುನಂದಮ್ಮನವರ ಬರಹ ಹೆಣೆಯಲ್ಪಟ್ಟಿದೆ. ಮಧ್ಯಮ ವರ್ಗದವರ ನೋವು ನಲಿವುಗಳನ್ನು ಬಿಂಬಿಸಲು "ಸರಸು–ಮೈಲಾರಯ್ಯ" – ಎಂಬ ಕಾಲ್ಪನಿಕ ದಂಪತಿಯನ್ನು ಸೃಷ್ಟಿಸಿದ್ದಾರೆ. ಕೆಲವೊಮ್ಮೆ ಈ ಪಾತ್ರಗಳು ಅತಿ ಬುದ್ಧಿವಂತಿಕೆಯನ್ನು ತೋರಲು ಹೋಗಿ ಥಟಕ್ಕನೆ ಮುಗ್ಗರಿಸಿ ನಗೆಗೆ ಕಾರಣರಾಗುತ್ತಾರೆ. ಎಲ್ಲಕ್ಕೂ ತಲೆದೂಗುವ ಮೈಲಾರಯ್ಯ ಸಭ್ಯನಾದರೆ, ತಪ್ಪು ತನ್ನದಾದರೂ ತನ್ನ ವಾಚಾಳಿತನದಿಂದ ಮೈಲಾರಯ್ಯನ ಬಾಯಿ ಮುಚ್ಚಿಸುವ ಸರಸು ಗಟ್ಟಾಣಿ ಯಾಗದೆ, ಸಹಧರ್ಮಿಣಿಯಾಗಿಯೇ ಉಳಿಯುತ್ತಾಳೆ.

ಸರಸೂ ಸಮಾಜ ಸೇವಕಿ. ಸಮಾಜವನ್ನು ತಿದ್ದಬೇಕೆಂಬುದು ಅವಳ ಬಯಕೆ. ಬೀಡಿ ಸೇದುವ ಬಾಲಕನಿಗೆ ಹಣ ಕೊಟ್ಟು "ಬೀಡಿ ಸೇದಬೇಡ" ಎನ್ನುತ್ತಾಳೆ. ಮುದುಕಿಯೊಬ್ಬಳನ್ನು ಅಬಲಾಶ್ರಮಕ್ಕೆ ಸೇರಿಸಲು ಹೋಗಿ ಬೇಸ್ತು ಬೀಳುತ್ತಾಳೆ. ಕ್ಷಾಮ ಪರಿಹಾರ ನಿಧಿಗೆ ಹಣ, ದವಸಧಾನ್ಯ ಸಂಗ್ರಹಿಸಿದ್ದು ತಾನು. ಪತ್ರಿಕೆಗಳಲ್ಲಿ ಫೋಟೋ, ಹೆಸರು ಬೇರೊಬ್ಬರಿಗೆ ಬಂದಾಗ ತನಗಾದ ಮೋಸಕ್ಕೆ ಮರುಗುತ್ತಾಳೆ. ಮದುವೆ ಮನೆಗಳಲ್ಲಿ ಖರ್ಚಾಗದೆ ಉಳಿದ ಆಹಾರ ಸಾಮಗ್ರಿಗಳನ್ನು ಸಂಗ್ರಹಿಸಿ ಅದನ್ನು ಬಡಬಗ್ಗರಿಗೆ ಹಂಚುವ ಯೋಜನೆಯನ್ನು ಹಾಕುತ್ತಾಳೆ. ಜನ ಆಡಿಕೊಂಡಾಗ ಯೋಜನೆಯನ್ನೇ ಕೈಬಿಡುತ್ತಾಳೆ. ಪುಸ್ತಕ ಪ್ರಕಟಣೆ, ಗ್ರಾಮೋದ್ಧಾರ, ಸಂಸ್ಕೃತಿ, ಸಾಹಿತ್ಯ ಪ್ರಚಾರ – ಹೀಗೆ ಸರಸು ಬಹುಮುಖ ಪ್ರತಿಭೆಯ ಪಾತ್ರವಾಗಿ ಕಾಣುತ್ತಾಳೆ.

ಆಹಾರ ಪದಾರ್ಥಗಳ ದುಂದು, ಹಬ್ಬದ ಆಡಂಬರ, ಹನ್ನೆರಡು ಬಗೆ ಊಟ – ಇವನ್ನೆಲ್ಲಾ ಖಂಡಿಸಿ ಸರಳ ಹಬ್ಬಗಳ ಬಗ್ಗೆ ಭಾಷಣ ಬಿಗೀತಿದ್ದ ಗಂಡ ಮೈಲಾರಯ್ಯನಿಗೇ ಉಗಾದಿ ದಿನ ಬೆಲ್ಲದ ನೀರು, ತಿಳಿಸಾರು ಬಡಿಸಿದಾಗ ಅವ್ನು ಮೆಚ್ಚಿ, "ಪರ್ವಾಗಿಲ್ಲ ನನ್ನ ಬುದ್ಧಿವಾದಾನ ಚೆನ್ನಾಗಿ ಅನುಸರಿಸ್ದೆ" ಎಂದು ಬೀಗಿದ. ಉಂಡು ಮಂಚದ ಮೇಲೆ ಮಗ್ಗುಲಾಗೋ ವೇಳೆಗೆ ಕೊನೇ ಹುಡ್ಗಿ ಪದ್ದಿ 'ಡರ್' ಎಂದು ತೇಗಿದಾಗ ಮೈಲಾರಯ್ಯ "ಏನೇ ಪದ್ದೀ, ಬೆಲ್ಲದ ಪಾಯಸ, ತಿಳಿಸಾರನ್ನ ತಿಂದದ್ದಕ್ಕೇ ಹೊಟ್ಟೆ ಭಾರ ಆಯ್ತೇ ?" ಎಂದಾಗ ಆ ಮೂರು ವರ್ಷದ ಪದ್ದಿ "ಬೆಲ್ಲದ ಪಾಯ್ಸಾನಾ ?...ಒಬ್ಬಟ್ಟು , ಚಿತ್ರನ್ನ, ಕೋಚಂಬ್ಲಿ, ಪಲ್ಲ ಎಲ್ಲ ತಿನ್ನಿಲ್ಲಾ ?" ಎಂದಿತು. ಪೆಚ್ಚಾದ ಮೈಲಾರಯ್ಯ ಬಾಗಿಲ ಕಡೆ ನೋಡಿದಾಗ ನಾಲ್ಕು ಕಂಠಗಳು ಮುಸಿಮುಸಿ ನಕ್ಕ ಸದ್ದು ಕೇಳಿಸಿತು. ಅದು ಸರಸು ಮೈಲಾರಯ್ಯನಿಗೆ ಹೊಡೆದ "ತಿರುಗು ಬಾಣ."

"ಸರಸು – ಮೈಲಾರಯ್ಯ"ರಂತೆಯೇ ಅವರ ಆರು ಮಕ್ಕಳ ಚಿತ್ರಣವೂ ಬರುತ್ತದೆ. ಕನ್ನಡ ಅಕ್ಷರಮಾಲೆ ಪ್ರಕಾರ ಅವರಿಗೆ ಹೆಸರಿಟ್ಟಿದ್ದಾರೆ. ಅ–ಆ–ಇ–ಈ–ಉ–ಊ (ಅಂದರೆ ಅನಂತ, ಆರತಿ, ಇಳಾ, ಈಶ್ವರಿ, ಉಷಾ, ಊರ್ಮಿಳಾ) – ಇಂಥಾ ದೊಡ್ಡ ಸಂಸಾರದ ಹೊಣೆಹೊತ್ತ ಸರಸು – ಮೈಲಾರಯ್ಯ ತಮ್ಮ ಅತಿ ಬುದ್ಧಿವಂತಿಕೆಯಿಂದ ಪೇಚಿಗೆ ಸಿಕ್ಕಿ ಓದುಗರ ನಗೆಗೆ ಕಾರಣರಾಗುತ್ತಾರೆ. ನಿವೃತ್ತಿ ನಂತರದ ಮೈಲಾರಯ್ಯನ ಸಂಸಾರದ ಚಿತ್ರಣ "ನರ್ಸದ್ ಹನ್ಮಂತ್ ಸ್ಕ್ಯಾಮ್" ಗಿರಿಜಾ ಕಲ್ಯಾಣ, ಸರಸುಸುಪಾಕ ಸದನ, ಮನೆಯಲ್ಲೊಂದು ಷೂಟಿಂಗ್, ಸರಸ ಮಹಲ್, ಪೇಡ್ ಘಡದ ಗಡಿಬಿಡಿ ಮುಂತಾದ ಕತೆಗಳಲ್ಲಿ ದೊರೆಯುತ್ತದೆ. ಹಾಗೆ ಸರಸೂ ತಮ್ಮ ರಿಪೀಟ್ ನಾಗರಾಜನ ಪಾತ್ರವೂ ಆಗಾಗ್ಗೆ ಕಾಣಿಸಿಕೊಳ್ಳುತ್ತದೆ.

ದೀಪಾವಳಿಯ ಬಗ್ಗೆ ಲೇಖಕಿಗೆ ವಿಶೇಷ ಆಸಕ್ತಿ. ಹಬ್ಬಕ್ಕೆ ಅಳಿಯ ಬರುತ್ತಾನೆಂದು ಅತ್ತೆ ಮಾವಂದಿರ ಸಡಗರ, ಅತ್ತೆಯ ಮನೆಗೆ ಹೋಗಲು ಅಳಿಯನ ಸಿದ್ಧತೆ. ಏನೋ ಬಯಸಿ ಬಂದ ಅಳಿಯನಿಗೆ ಇದ್ದಕ್ಕಿದ್ದಂತೆಯೇ ದೊರೆಯುವ ಷಾಕ್ ಟ್ರೀಟ್‌ಮೆಂಟ್ – ಇವು 'ಹೊನ್ನಯ್ಯನ ದೀಪಾವಳಿ, ಅಪ್ಪಣ್ಣನ ದೀಪಾವಳಿ, ನನ್ನ ದೀಪಾವಳಿ, ಅಸ್ವಸ್ಥ ದೀಪಾವಳಿ, ಪೀರ್ ಲಕ್ಷ್ಮಣನ ದೀಪಾವಳಿ – ಮುಂತಾದ ಪ್ರಬಂಧಗಳಲ್ಲಿ ಹಲವು ರೂಪದಲ್ಲಿ ಚಿತ್ರಿಸಲ್ಪಟ್ಟಿವೆ. ಈ ಎಲ್ಲ ಲೇಖನಗಳೂ ಒಂದೇ ವಸ್ತುವನ್ನು ಹಿಂಜಿ ಬೇರೆಬೇರೆಯಾಗಿ ಬರೆದಂತೆ ಭಾಸವಾಗುತ್ತದೆ.'

ಗಂಡ ಕೊಟ್ಟ ಹಣವನ್ನು 'ನಿಧಿ ಫೈನಾನ್ಸ್'ನಲ್ಲಿ ಹಾಕಿ ಮೋಸಹೋದ ಸರಸು, ಗಣಪತಿ ಹಾಲು ಕುಡಿಯುವ ಸುದ್ದಿ ಹಬ್ಬಿದ್ದ ಸಂದರ್ಭದಲ್ಲಿ ಅದನ್ನು ವಿಡಂಬಿಸಿರುವ 'ಕಥೆ – ಉಪಕಥೆ',




'ಪೇಯಿಂಗ್–ಗೆಸ್ಟ್'ಅನ್ನು 'ಪಾವತಿ–ಅತಿಥಿ' ಎಂದು ಕನ್ನಡೀಕರಿಸಿದ ಆ ಪ್ರಬಂಧದ ಕೊನೆಯಲ್ಲಿ ಆ ಮನೆಯನ್ನೇ ಪಾವತಿ ಅತಿಥಿ ಖರೀದಿಸಿ ಆತಿಥೇಯ ಆಂಟಿಯೇ ಅತಿಥಿ ಆಗುವುದು. ಸುಂದರಿ ಹೆಂಡತಿಯನ್ನು ಮನೆಯಲ್ಲಿ ಬಿಟ್ಟುಹೋಗಲು ಅನುಮಾನಿಸುವ ನಾಗರಾಜ ಪೇಜರ್‌ನ ಸಹಾಯ ಪಡೆಯಲು ಹೋಗಿ ಪೇಚಿಗೆ ಸಿಕ್ಕಿದ್ದು, ಮೈಥಿಲಮ್ಮ ಮಯೂರಮ್ಮನ ಪೈಪೋಟಿ ಜೀವನ, ಮುಪ್ಪಿನಲ್ಲಿ ಮಗುವನ್ನು ಪಡೆದ ತಪ್ಪಿಗೆ ಕೊಪ್ಪಕ್ಕೆ ವರ್ಗ ಮಾಡಿಸಿಕೊಂಡು, ಮಗನನ್ನೇ ಮೊಮ್ಮಗನೆಂದು ಹೇಳುವ ರಮಣಯ್ಯ ದಂಪತಿಗಳು, ಮಗಳು ಮತ್ತು ಸೊಸೆ ಭಾಗವಹಿಸುವ ಸೌಂದರ್ಯ ಸ್ಪರ್ಧೆಗೆ ಪ್ರೇಕ್ಷಕಳಾಗಿ ಹೋದ ಗುಂಡಮ್ಮನೇ ಸ್ಪರ್ಧೆಯಲ್ಲಿ ಗೆದ್ದದ್ದು – ಹೀಗೆ ಉಳಿದ ಬರಹಗಳಲ್ಲಿ ವಿಷಯ ವೈವಿಧ್ಯವಿದೆ.

**ನಾಟಕಗಳು**

ಚಿಕ್ಕಂದಿನಿಂದಲೂ ನಾಟಕಪ್ರಿಯರಾಗಿದ್ದ ಸುನಂದಮ್ಮನವರು ಅನೇಕ ಹಾಸ್ಯ ನಾಟಕಗಳನ್ನೂ ರಚಿಸಿದ್ದಾರೆ. ಬೊಂಬಾಯಿ ಸೊಸೆ, ಮಾಡಿದ್ದುಣ್ಣೋ ಮಹರಾಯ, ಆದರ್ಶದ ಆಡಂಬರ, ಚಿಕ್ಕಪ್ಪನ ಉಯಿಲು, ಚಕ್ರ–ಚುಕ್ಕೆ ಮೊದಲಾದವು. ಇವರ ನಾಟಕಗಳಲ್ಲಿ ಯಾವುದೇ ನಾಟಕವನ್ನು ಗಮನಿಸಿದರೂ ಸುಮಾರು ೨೦ರಿಂದ ೩೦ ನಿಮಿಷಗಳ ಅವಧಿಯಲ್ಲಿ ಅಭಿನಯಿಸಿ ಮುಗಿಸಬಹುದು. ಈ ಅಲ್ಪ ಅವಧಿಯ ನಾಟಕಗಳಲ್ಲಿ ದೃಶ್ಯಗುಣ ಮರೆಯಾಗಿ ಮಾತೇ ಪ್ರಧಾನವಾಗಿದೆ.

ಅಚ್ಚಾಗಿರುವ ನಾಟಕಗಳ ಪೈಕಿ ಮನ ಸೆಳೆಯುವಂಥ ನಾಟಕವೆಂದರೆ 'ಊರ್‍ಗೊಂದೇ ಅಡುಗೆಮನೆ' ಅಥವಾ 'ಸಾಮೂಹಿಕ ಪಾಕಶಾಲೆ'. ರಷ್ಯಾದ ಸಾಮೂಹಿಕ ವ್ಯವಸಾಯ ಪದ್ಧತಿಯನ್ನು ಇದು ಹೋಲುತ್ತದೆ. ಪ್ರತಿಯೊಬ್ಬರ ಮನೆಯಲ್ಲೂ ಒಂದೊಂದು ಪಾಕಶಾಲೆ ಯಾಕಿರಬೇಕು ? ಬದಲು ಊರಿನವರಿಗೆಲ್ಲಾ ಒಂದೇ ಪಾಕಶಾಲೆ ಇರಲಿ. ಅದರಿಂದ ಪ್ರತಿ ನಾರೀಮಣಿಗೂ ಉಳಿತಾಯವಾಗುವ ವೇಳೆಯನ್ನು ಬಜಾರುಗಳಲ್ಲಿ ಅಲೆದು ಬೇಕೆನಿಸುವ ಸೀರೆ, ಬಟ್ಟೆ, ಸೌಂದರ್ಯ ಪರಿಕರ, ಸಿನಿಮಾಗಳನ್ನು ಆರಿಸಿಕೊಂಡು ಸುಖಪಡುವುದಕ್ಕೆ ವಿನಿಯೋಗ ವಾಗುವುದೆಂದು ತೀರ್ಮಾನಿಸಿದ ಈ ಕಮ್ಯುನಿಸ್ಟ್, ಆದರ್ಶ ನಾರಿಯರ ನಾಲಿಗೆ ರುಚಿಯ ಮುಂದೆ ಮುರಿದುಬೀಳುತ್ತಾನೆ. ಸ್ತ್ರೀ ಪಾತ್ರಗಳೇ ಹೆಚ್ಚಾಗಿರುವ ಈ ನಾಟಕವನ್ನು ಸ್ತ್ರೀಯರು ಅಭಿನಯಿಸಲು ಅನುಕೂಲವಾಗಿದೆ.

'ಆದರ್ಶದ ಆಡಂಬರ' ನಾಟಕವು ಸಮಾಜದ ಸೇವಕಿಯೊಬ್ಬಳ ಅಂತರಂಗ ಬಹಿರಂಗಗಳ ವೈರುಧ್ಯವನ್ನು ವಿಡಂಬಿಸಿದೆ. 'ಚಿಕ್ಕಪ್ಪನ ಉಯಿಲು' ನಾಟಕದ ಕೊನೆಯಲ್ಲಿ ಮಾಡುವ ಹಾಸ್ಯಕ್ಕಾಗಿ ರಚಿತವಾಗಿದೆ. ಶ್ರೀಮಂತನಾದ ಚಿಕ್ಕಪ್ಪ ಹೃದ್ರೋಗಿ ಯಾಗಿ ವಿಶ್ರಾಂತಿಗೆಂದು ಬರುವುದು, ಆ ಚಿಕ್ಕಪ್ಪ ತಮ್ಮ ಮನೆಯಲ್ಲೇ ಸಾಯಲೆಂದು ಬಯಸುವ ದಂಪತಿಗಳೂ, ದಂಪತಿಗಳ ಆಡಂಬರವನ್ನು ಬಯಲಿಗೆಳೆಯುವ ಪುಟ್ಟ ಮಗು, ಇಲ್ಲಿ ಸಾಯದೆ

ಊರಿಗೆ ಹೋದ ಚಿಕ್ಕಪ್ಪ, ಸಾಯುವಾಗ ಕಳುಹಿಸಿದ ಉಯಿಲು ಹಣದ ಬದಲು 'ಮಕ್ಕಳನ್ನು ಸಾಕುವ ವಿಧಾನ' ಎಂಬ ಪುಸ್ತಕವನ್ನು ನೋಡಿ ದಂಪತಿಗಳು ಸುಸ್ತಾಗುತ್ತಾರೆ.

ಬೆಂಗಳೂರು ಆಕಾಶವಾಣಿ ಕೇಂದ್ರಕ್ಕೆ, ಮಹಿಳಾ ಸಮಾಜ, ಸಂಘಸಂಸ್ಥೆಗಳಿಗೆ ಅನೇಕ ನಾಟಕಗಳನ್ನು ರಚಿಸಿದ್ದಾರೆ. ಮಾಸ್ತಿಯವರ 'ಇಂದಿರೆಯೋ ಅಲ್ಲವೋ ' 'ಆಚಾರವಂತ ಅಯ್ಯಂಗಾರ್', ಆನಂದರ 'ನಾ ಕೊಂದ ಹುಡುಗಿ' ಎಂಬ ಸಣ್ಣಕತೆಗಳನ್ನೂ, ಅ.ನ.ಕೃ.ರವರ 'ಕುಲಪುತ್ರ' ಕಾದಂಬರಿಯನ್ನೂ ನಾಟಕಕ್ಕೆ ರೂಪಾಂತರಿಸಿದ್ದಾರೆ. ಬರವಣಿಗೆಯ ಜೊತೆಗೆ ನಾಟಕಗಳಲ್ಲಿ ಅಭಿನಯಿಸಿದ್ದಾರೆ.

ಹಾಸ್ಯ ಸಾಹಿತಿಯಾದ ಸುನಂದಮ್ಮನವರು ಗಂಭೀರ ಸಾಹಿತ್ಯವನ್ನೂ ರಚಿಸಿದ್ದಾರೆ. ರಾಷ್ಟ್ರೋತ್ಥಾನ ಪುಸ್ತಕ ಸಂಪದಕ್ಕಾಗಿ 'ತೆನಾಲಿ ರಾಮಕೃಷ್ಣ' ಬರೆದಿದ್ದಾರೆ. ಕೊರವಂಜಿಯ ಜನಕರಾದ ಡಾ|| ಎಂ. ಶಿವರಾಂರವರ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಬರೆದಿದ್ದಾರೆ. 'ಆಧುನಿಕ ನಗೆ ಸಾಹಿತ್ಯ' ಎಂಬ ಕೃತಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾಗಿದೆ. 'ಕೈಲಾಸಂ, ಬೀಚಿ, ಜಾನಪದದಲ್ಲಿ ಹಾಸ್ಯ' – ಮುಂತಾದ ಲಲಿತ ಪ್ರಬಂಧಗಳನ್ನೂ ಬರೆದಿದ್ದಾರೆ. ತಮ್ಮ ಸುತ್ತಮುತ್ತಲ ಸಮಾಜದಲ್ಲಿನ ವ್ಯಕ್ತಿಗಳ ಚಲನವಲನ ಹಾಗೂ ಪ್ರಚಲಿತ ವಿದ್ಯಮಾನಗಳನ್ನು ತಮ್ಮ ಬರಹಕ್ಕೆ ವಸ್ತುವಾಗಿ ಆರಿಸಿಕೊಳ್ಳುವ ಸ್ವಭಾವ ಸುನಂದಮ್ಮನವರದು. ಮೊರಾರ್ಜಿ ದೇಸಾಯಿ ಪ್ರಧಾನ ಮಂತ್ರಿಯಾಗಿದ್ದಾಗಿನ ಬಂಗಾರದ ನಿಯಂತ್ರಣ, ಅರ್ಥಮಂತ್ರಿ ದೇಶಮುಖರು ನಿಯೋಜಿಸಿದ ಸಂಪತ್ ತೆರಿಗೆ, ಮಿತಸಂತಾನ ಚಳವಳಿ, ಮಹಿಳಾ ಸಣ್ಣ ಉಳಿತಾಯ, ಬರ ಪರಿಹಾರ ನಿಧಿ, ಗಣಪತಿ ಹಾಲು ಕುಡಿದದ್ದು – ಹೀಗೆ ಕಾಲಕ್ಕೆ ತಕ್ಕಂತೆ ವಸ್ತುವಿನ ಆಯ್ಕೆಯಲ್ಲಿಯೂ ವೈವಿಧ್ಯತೆಯನ್ನು ಗುರುತಿಸಬಹುದಾಗಿದೆ. ವಸ್ತು ಯಾವುದೇ ಆಗಿರಲಿ, ಅದಕ್ಕೆ ಹಾಸ್ಯದ ಲೇಪನವಂತೂ ಇದ್ದೇ ಇರುತ್ತದೆ.

ಸುನಂದಮ್ಮನವರ ಭಾಷೆ ನೇರ ಮತ್ತು ಸರಳ. ಬೆಂಗಳೂರಿನ ಆಡುಭಾಷೆಯ ಶೈಲಿಯನ್ನು ಇವರ ಬರಹಗಳಲ್ಲಿ ಗುರುತಿಸಬಹುದಾಗಿದೆ. ಇವರ ಕೃತಿಗಳಲ್ಲಿ ಬರುವ ಎಲ್ಲ ಪಾತ್ರ ಸನ್ನಿವೇಶಗಳೂ ಮಧ್ಯಮ ವರ್ಗವನ್ನು ಪ್ರತಿನಿಧಿಸುತ್ತವೆ. ವೈಭವದ ಬದುಕಿನ ಚಿತ್ರಣವಾಗಲೀ, ಅತ್ಯಂತ ಬಡತನದ ಬಾಳ್ವೆಯಾಗಲೀ, ದಲಿತವರ್ಗದ ಚಿತ್ರಣವಾಗಲಿ ಕಂಡುಬರುವುದಿಲ್ಲ. "ಕೆಳವರ್ಗದ, ಗ್ರಾಮೀಣ ಬದುಕಿನ ಅನುಭವದ ಕೊರತೆಯಿಂದಾಗಿ ಅವರ ಬಗ್ಗೆ ಬರೆದಿಲ್ಲ" ಎಂದು ಲೇಖಕಿಯೇ ವಿನಮ್ರವಾಗಿ ಒಪ್ಪಿಕೊಂಡಿದ್ದಾರೆ. ಹೀಗಾಗಿ ಸುನಂದಮ್ಮನವರ ಸಾಮಾಜಿಕ ಅನುಭವ ನಗರ ಜೀವನದ ಮಿತಿಗೆ ಒಳಪಟ್ಟಿದೆ.

ಸುನಂದಮ್ಮನವರದು ಸರಳವಾದ, ಶುದ್ಧವಾದ ತಿಳಿಹಾಸ್ಯ. ಇವರ ಹಾಸ್ಯದಲ್ಲಿ ದ್ವಂದ್ವಾರ್ಥವಾಗಲಿ ಅಥವಾ ಅಶ್ಲೀಲತೆಯ ಸೋಂಕಾಗಲಿ ಕಾಣುವುದಿಲ್ಲ. ಹೇಳಬೇಕಾದುದನ್ನು ನೇರವಾಗಿ ಹೇಳದೆ ವ್ಯಂಗ್ಯವಾಗಿ ಸೂಚಿಸಿದರೆ ಆ ಮಾತಿಗೆ ಸೊಗಸು ಬರುತ್ತದೆ. ಸುನಂದಮ್ಮನವರ ಬರಹದಲ್ಲೂ ಅಲ್ಲಲ್ಲಿ ವ್ಯಂಗ್ಯ ಇಣುಕುವುದನ್ನು ಗುರುತಿಸಬಹುದು. ಉದಾಹರಣೆಗೆ : "ಸಂಗೀತಗಾರನನ್ನು ನಾನು ಸಿಂಪತೈಸುತ್ತೇನೆ, ಮೊದಲೇ ಹಾಡುವಾಗ ಬಾಯಿ ಕಿವಿಗೆ ಹೋಗಿ... ಮೂರು ಹಣೆಗೆ ಜಟ್ಟಿ, ಜುಟ್ಟು ಕಥಕ್ಕಳಿ ಕುಣಿದು, ದೇಹಕ್ಕೆ ಅದುರು ವಾಯುವಿನ ಅಪಾಯವೇನೋ ಎನಿಸುತ್ತಿರುವಾಗ – ಪಕ್ಕನೆ ಕಣ್ಣಿಗೆ ದೀಪ ಬಿಟ್ಟರೆ, ಮೂಡಿದ ಚಿತ್ರ ನೋಡಿದ ಮಕ್ಕಳು 'ಗೊಗ್ಗಯ್ಯ'ನೆಂದು ಹೆದರದಿರಲು ಸಾಧ್ಯವೇ ?" ಎಂಬ ಸಾಲುಗಳು.

ಶ್ರೀಮತಿಯವರು ಸಾಮಾಜಿಕ ಜೀವನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ. ಅಖಿಲ ಮೈಸೂರು ಮಹಿಳಾ ಸಮ್ಮೇಳನ, ಮಹಿಳಾ ಸಂಘಸಂಸ್ಥೆಗಳಲ್ಲಿ ಕೆಲಸ ಮಾಡಿದ್ದಾರೆ. ಇವರು ಎರಡು ಅವಧಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿದ್ದರು. ಕರ್ನಾಟಕ ಲೇಖಕಿಯರ ಸಂಘದ ಸ್ಥಾಪಕ ಅಧ್ಯಕ್ಷೆ. ಅಭಿಮಾನಿಗಳಿಂದ 'ಸುನಂದಾಭಿನಂದನ' ಗ್ರಂಥ ಸಮರ್ಪಣೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿ, "ಲಿಪಿಪ್ರಾಜ್ಞೆ" ಮೊದಲಾದ ಮನ್ನಣೆ ಪುರಸ್ಕಾರಗಳು ಸುನಂದಮ್ಮನವರನ್ನರಸಿಕೊಂಡು ಬಂದಿವೆ.

ಸುನಂದಮ್ಮನವರು ಮೇಲ್ನೋಟಕ್ಕೆ ಹಾಸ್ಯ ಸಾಹಿತಿಯಾಗಿ ಕಂಡರೂ ವೈಯಕ್ತಿಕ ಬದುಕಿನಲ್ಲಿ ಸಾಕಷ್ಟು ನೋವುಂಡವರು. ತಂಗಿ, ತಮ್ಮ ನಡುವಯಸ್ಸಿನಲ್ಲಿ ಅಗಲಿದರು. ಮುಪ್ಪಿನಲ್ಲಿ ಆಸರೆಯಾಗಬೇಕಿದ್ದ ಕರುಳ ಕುಡಿಯನ್ನೂ ವಿಧಿ ಬರಮಾಡಿಕೊಂಡಿತು. ೮೪ ವರ್ಷದ ತುಂಬು ಬಾಳನ್ನು ನಡೆಸಿದ ಪತಿ ನಿಧನರಾದರು. ಕೊನೆಗೆ ಸುನಂದಮ್ಮನವರೂ ತಮ್ಮ ೮೯ನೇ ವಯಸ್ಸಿನಲ್ಲಿ ಜನವರಿ ೨೭, ೨೦೦೬ರ ಸಂಜೆ ಅಸ್ತಂಗತರಾದರು.

**ಕೆ. ಅಕ್ಕಮಹಾದೇವಿ**
ಕನ್ನಡ ಉಪನ್ಯಾಸಕಿ, ವಿ. ವಿ. ಸಂಜೆ ಕಾಲೇಜು, ಮೈಸೂರು

## ವಚನ

ಭೂಮಿಯನು ಉಳಲು
ಬಿಸಿಲೆಂದು ಬಳಲಿದರು
ಮಳೆಯು ಬಂದಾಗ
ಚಳಿಯೆಂದು ನಡುಗಿದರು
ಬೀಜ ಬಿತ್ತಲು ಭವಿಷ್ಯ ಕೇಳಿದರು
ಫಸಲು ಕೊಯ್ಯಲು ಕಾಲ ಬರಲಿ ಎಂದರು
ಕಾಲದ ಬೆಲೆ ತಿಳಿಯದ ಸೋಮಾರಿಗಳಿಗೆ
ತುತ್ತು ಅನ್ನಕ್ಕೆ ಭಿಕ್ಷೆ ಎತ್ತುವ ಕಾಲ
ಬರುವುದಯ್ಯಾ – ರತ್ನದೀಪ

**ಎ. ಜಿ. ರತ್ನ ಕಾಳೇಗೌಡ**
ವಿದ್ಯಾರಣ್ಯಪುರ ಪೋಸ್ಟ್
ಬೆಂಗಳೂರು – ೫೬೦ ೦೯೭




*ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ಮತ್ತು ಕಾರ್ಪೊರೇಷನ್ ಬ್ಯಾಂಕ್ ಅಧಿಕಾರಿಗಳ ಸಂಘ (ಸಿಬಿಒಎ)ದ ಜಂಟಿ ಆಶ್ರಯದಲ್ಲಿ ದಿನಾಂಕ ೩-೧-೨೦೧೫ರಂದು ಬೆಂಗಳೂರಿನ ಮಿಥಿಕ್ ಸೊಸೈಟಿ ಸೆಂಟಿನರಿ ಹಾಲ್‌ನಲ್ಲಿ 'ಸಂಘರ್ಷದಿಂದ ಸಾಮರಸ್ಯದೆಡೆಗೆ' ಕೃತಿಯನ್ನು ಅಖಿಲ ಭಾರತ ಬ್ಯಾಂಕ್ ಅಧಿಕಾರಿಗಳ ಒಕ್ಕೂಟದ ಅಧ್ಯಕ್ಷರಾದ ಶ್ರೀ ವೈ. ಸುದರ್ಶನ್‌ರವರು ಲೋಕಾರ್ಪಣೆ ಮಾಡಿದರು. ಡಾ|| ಸಿದ್ದನಗೌಡ ಪಾಟೀಲರು ಮುಖ್ಯ ಅತಿಥಿಯಾಗಿದ್ದರು. ಶ್ರೀ ಫಕೀರ್ ಮುಹಮ್ಮದ್ ಕಟ್ಪಾಡಿಯವರು ಕೃತಿ ಪರಿಚಯ ಮಾಡಿಕೊಟ್ಟರು. ಶ್ರೀ ಡಿ. ಎನ್. ಪ್ರಕಾಶ್, ಶ್ರೀ ಏಕನಾಥ ಬಾಳಿಗಾ, ಶ್ರೀ ಸಿ. ಆರ್. ಕೃಷ್ಣರಾವ್ ಹಾಗೂ ಕೃತಿಯ ಲೇಖಕ ಶ್ರೀ ಟಿ. ಆರ್. ಭಟ್ ಉಪಸ್ಥಿತರಿದ್ದರು.*

# ಬಜೆಟ್‌ನೊಳಗೊಂದು ಕಾರ್ಪೊರೇಟ್ ತೆರಿಗೆ ಮನ್ನಾ ಯೋಜನೆ



೨೦೧೩-೧೪ರಲ್ಲಿ ವ್ಯವಹಾರ ಎಂದಿನಂತೆಯೇ ನಡೆಯಿತು. ಭಾರತೀಯ ಬಿಸಿನೆಸ್‌ನ ಕುಳಗಳು ಸುಪುಷ್ಟವಾಗಿದ್ದರು. ಈ ಬಾರಿಯ ಬಜೆಟ್ ಪ್ರತಿ, ಮತ್ತೆ ೫.೩೨ ಲಕ್ಷ ಕೋಟಿಗಳಷ್ಟು ಹಣವನ್ನು ಕಾರ್ಪೊರೇಟ್ ವಲಯದ "ಹಸಿದವರಿಗೆ" ಮತ್ತು ನೊಂದವರಿಗೆ ಕೊಡಲಾಗಿದೆ ಎಂದು ದಾಖಲಿಸುತ್ತದೆ. ಅಸಲಿಗೆ ಅದರಲ್ಲಿರುವುದು ೫.೭೨ ಲಕ್ಷ ಕೋಟಿ ಎಂದು. ಆದರೆ ಆ ೪೦ ಸಾವಿರ ಕೋಟಿಗಳನ್ನು ವೈಯಕ್ತಿಕ ತೆರಿಗೆಗಳಿಂದ ಬಿಟ್ಟಿರುವ ಕಾರಣ, ನಾನದನ್ನು ಪರಿಗಣಿಸುತ್ತಿಲ್ಲ. ಉಳಿದ ಹಣವೆಲ್ಲಾ ಕಾರ್ಪೊರೇಟ್ ಜಗತ್ತಿಗೆ ಮೇಯಲು ನೀಡಲಾಗಿದೆ. ಕೈಬಿಟ್ಟಿರುವ ಆದಾಯದಲ್ಲಿ ಮುಖ್ಯ ಪಾಲು ನೇರ ಕಾರ್ಪೊರೇಟ್ ತೆರಿಗೆ, ಕಸ್ಟಮ್ಸ್ ಮತ್ತು ಅಬಕಾರಿ ಡ್ಯೂಟಿಗಳಿಗೆ ಸೇರಿದ್ದು. ಭಾರತದ ಅತಿ ಶ್ರೀಮಂತರಿಗೆ ತೆರಿಗೆ ಮತ್ತು ಡ್ಯೂಟಿಗಳಿಂದ ೫.೩೨ ಲಕ್ಷ ಕೋಟಿಗಳಷ್ಟು ಉಳಿಸಿದ್ದು ಕೊಂಚ ಅತಿಯಾಯಿತೆಂದು ನಿಮಗನ್ನಿಸಿದರೆ ಇನ್ನೊಮ್ಮೆ ಯೋಚಿಸಿ. ೨೦೦೫-೨೦೦೬ರಿಂದ ಇಲ್ಲಿಯವರೆಗೆ ತೆರಿಗೆ, ಕಂದಾಯಗಳ ತಲೆಪಟ್ಟಿಯಡಿಯಲ್ಲಿ ನಾವು ಕೈಬಿಟ್ಟಿರುವ ಆದಾಯ ಸುಮಾರು ೩೬.೫ ಲಕ್ಷ ಕೋಟಿ (ಇದರಲ್ಲಿ ೧%ರಷ್ಟು ಆದಾಯ ಕಾರ್ಪೊರೇಟ್ ತೆರಿಗೆಗೆ ಸೇರಿದ್ದು). ಅಂದರೆ ಒಂಭತ್ತು ವರ್ಷಗಳಲ್ಲಿ ೩೬೫೦೦೦೦೦೦೦೦೦೦೦ ರೂಪಾಯಿಗಳು ಮಂಗಮಾಯವಾಗಿವೆ.

೩೬.೫ ಟ್ರಿಲಿಯನ್ ರೂಪಾಯಿಗಳಿಂದ ನೀವು ಈ ಎರಡು ಕೆಲಸಗಳನ್ನು ಆರಾಮವಾಗಿ ನಿಭಾಯಿಸಬಹುದಾಗಿತ್ತು :

- ಒಂದು, ಈಗಿನ ರೀತಿಯಲ್ಲೇ ನಡೆದುಕೊಂಡು ಹೋದರೆ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು (MNREGA) ಇನ್ನೂ ೧೦೫ ವರ್ಷಗಳ ಕಾಲ ಸಲೀಸಾಗಿ ನಡೆಸಿಕೊಂಡು ಹೋಗಬಹುದಿತ್ತು. ಕೃಷಿ ಕಾರ್ಮಿಕರಿರಲಿ, ಯಾವ ಮನುಷ್ಯನೂ ಅಷ್ಟು ಸಮಯ ಉದ್ಯೋಗ ಪಡೆಯಲು ಬದುಕಿರಲಾರ. ಆ ಹಣದಿಂದ ಎರಡು ತಲೆಮಾರಿನ ಕಾರ್ಮಿಕರಿಗಾಗುವಷ್ಟು ಕೆಲಸ ನೀಡಬಹುದಿತ್ತು. ಇದೇ ಯೋಜನೆಗೆ ಈಗ ಗೊತ್ತಾಗಿರುವ ಹಣ ೩೪೦೦೦ ಕೋಟಿ.
- ಎರಡು, ಸಾರ್ವಜನಿಕ ಪಡಿತರ ವ್ಯವಸ್ಥೆಯನ್ನು ಇನ್ನೂ ೩೧ ವರ್ಷಗಳ ಕಾಲ ಸರಾಗವಾಗಿ ನಡೆಸಿಕೊಂಡು ಹೋಗಬಹುದಿತ್ತು. ಈಗ ಇದಕ್ಕೆ ಗೊತ್ತುಮಾಡಿರುವ ಹಣ ೧,೧೫,೦೦೦ ಕೋಟಿ.




ಈ ಆದಾಯ ನಿಜಕ್ಕೂ ಕೈಗೆ ಗಿಟ್ಟಿದ್ದರೆ ಇವುಗಳಲ್ಲಿ ಶೇಕಡ ೩೦ರಷ್ಟು ಹಣ ರಾಜ್ಯ ಸರ್ಕಾರಗಳಿಗೆ ದಕ್ಕುತ್ತಿತ್ತು. ಆದರೀಗ ಕೇಂದ್ರದ ಉದಾರ ತೆರಿಗೆ ಮನ್ನಾ ಯೋಜನೆಯಿಂದ ರಾಜ್ಯ ಸರ್ಕಾರಗಳು ನರಳುವಂತಾಗಿದೆ. ಬರೀ ೨೦೧೩-೧೪ರಲ್ಲಿ ಕೈಬಿಟ್ಟ ಆದಾಯವನ್ನೇ ಪರಿಗಣಿಸಿದರೂ ಅವುಗಳಿಂದ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗಳನ್ನು ಮೂರು ದಶಕಗಳವರೆಗೆ ನಿರಾತಂಕವಾಗಿ ನಡೆಸಬಹುದಿತ್ತು. ಹೋಗಲಿ, ಅದೇ ಹಣದಿಂದ ಪಡಿತರ ವ್ಯವಸ್ಥೆಯನ್ನು ನೆಟ್ಟಗೆ ನಾಲ್ಕೂವರೆ ವರ್ಷ ನಡೆಸಿಕೊಂಡು ಬರಬಹುದಿತ್ತು. ೨೦೧೨-೧೩ರಲ್ಲಿ ತೈಲ ಕಂಪೆನಿಗಳು ವರದಿ ಮಾಡಿದ್ದ ನಷ್ಟಕ್ಕಿಂತ ನಾಲ್ಕು ಪಟ್ಟು ಜಾಸ್ತಿಯಿತ್ತು ಈ ಆದಾಯ.

ಸುಮ್ಮನೆ ಹೀಗೊಮ್ಮೆ ಕಸ್ಟಮ್ಸ್ ಡ್ಯೂಟಿಯಡಿ ನೀಡಿರುವ ವಿನಾಯಿತಿಗಳತ್ತ ಕಣ್ಣಾಡಿಸಿ. 'ಚಿನ್ನ ಮತ್ತು ವಜ್ರ'ಗಳಡಿಯಲ್ಲಿ ೪೮,೬೩೫ ಕೋಟಿ ರೂಪಾಯಿಗಳನ್ನು ಕೈಬಿಡಲಾಗಿದೆ. ಇವೇನು ಜನಸಾಮಾನ್ಯರು ಕೊಳ್ಳುವ ಸಾಮಾನಲ್ಲವಷ್ಟೆ? ಖಂಡಿತವಾಗಿಯೂ ಇದು ನಾವು ಗ್ರಾಮೀಣ ಉದ್ಯೋಗಕ್ಕೆಂದು ಮಾಡುತ್ತಿರುವ ಖರ್ಚಿಗಿಂತ ದೊಡ್ಡದು. ಕಳೆದ ೩೬ ತಿಂಗಳುಗಳಲ್ಲಿ ಚಿನ್ನ ಮತ್ತು ವಜ್ರಗಳಿಗೆಂದು ಕೈಬಿಟ್ಟಿರುವ ಆದಾಯ ಸುಮಾರು ೧.೬ ಟ್ರಿಲಿಯನ್ – ಅಂದರೆ ಕೈಬಿಟ್ಟ ಆದಾಯದಲ್ಲಿ ಶೇಕಡ ೧೬ರಷ್ಟು. ಮುಂಬರುವ ಪಡಿತರ ವ್ಯವಸ್ಥೆಗೂ ನಾವಿಷ್ಟು ಖರ್ಚು ಮಾಡಲಿಕ್ಕಿಲ್ಲ.

೨೦೧೩-೧೪ರ ಕೈಬಿಟ್ಟ ಆದಾಯದಲ್ಲಿ ೭೬,೧೧೬ ಕೋಟಿ ರೂಪಾಯಿಗಳು ಕೇವಲ ಕಾರ್ಪೊರೇಟ್ ತೆರಿಗೆಗೆ ಸೇರಿದ್ದು. ಇದರ ಎರಡರಷ್ಟು, ಅಂದರೆ ೧,೯೫,೬೭೯ ಕೋಟಿ ರೂಪಾಯಿಗಳನ್ನು ಅಬಕಾರಿ ಡ್ಯೂಟಿಯಲ್ಲೂ ಸುಮಾರು ಮೂರುಪಟ್ಟು ಅಂದರೆ, ೨,೬೦,೭೧೪ ಕೋಟಿ ರೂಪಾಯಿಗಳಷ್ಟು ಹಣವನ್ನು ಕಸ್ಟಮ್ಸ್ ಡ್ಯೂಟಿಯಲ್ಲೂ ಕೈಬಿಡಲಾಗಿದೆ.

ಹೌದು, ಇದು ಕೇವಲ ಇಂದು ನಿನ್ನೆಮೊನ್ನೆಯ ಕತೆಯಲ್ಲ. ಆರ್ಥಿಕ 'ಸುಧಾರಣೆ' ಶುರುವಾದಂದಿನಿಂದ ಟ್ರಿಲಿಯನ್‌ಗಳಷ್ಟು ಆದಾಯ ನಮ್ಮ ಕೈಬಿಟ್ಟು ಹೋಗುತ್ತಲೇ ಇದೆ. ಇದರ ಸಂಖ್ಯೆ ಬಜೆಟ್‌ನಲ್ಲಿ ಅಧಿಕೃತವಾಗಿ ದಾಖಲಾಗತೊಡಗಿದ್ದು ೨೦೦೬-೦೭ರಿಂದಷ್ಟೆ. ಮೊದಲೇ ಏನಾದರೂ ಇವು ಸಿಕ್ಕಿದ್ದರೆ ಖಂಡಿತವಾಗಿಯೂ ಕೈಬಿಟ್ಟ ಆದಾಯ ೩೬.೫ ಟ್ರಿಲಿಯನ್‌ಗಳಿಗಿಂತ ಜಾಸ್ತಿ ಇರುತ್ತಿತ್ತು. ಈ ಸಂಖ್ಯೆಗಳು ಬೆಳೆಯುತ್ತಲೇ ಇರುತ್ತವೆ. ಬಜೆಟ್ ಪ್ರತಿಯಲ್ಲೇ ಹೇಳಿದಂತೆ "ಕೇಂದ್ರದ ತೆರಿಗೆಗಳಿಂದ ಕೈಬಿಟ್ಟ ಆದಾಯದ ಮೊತ್ತ ಮೇಲ್ಮುಖವಾಗಿ ಬೆಳೆಯುತ್ತಿದೆ..." ಖಂಡಿತವಾಗಿಯೂ. ೨೦೦೫-೦೬ರಲ್ಲಿ ಸಿಕ್ಕ ವಿನಾಯಿತಿಗಿಂತ ಈಗ ನೀಡುತ್ತಿರುವ ವಿನಾಯಿತಿ ಶೇಕಡ ೧೩೨ರಷ್ಟು ಹೆಚ್ಚಿದೆ.

ಈ ಕಾರ್ಪೊರೇಟ್ ತೆರಿಗೆ ಮನ್ನಾ ಎನ್ನುವುದೊಂದು ಉದ್ದಿಮೆಯಾಗಿದ್ದರೆ, ಅದನ್ನು ಲಾಭದಾಯಕ ಉದ್ದಿಮೆ ಎಂದು ಘೋಷಿಸಬಹುದಾಗಿತ್ತು.

(ಪಿ. ಸಾಯಿನಾಥ್‌ರ 'Corporate Karza Maafi at Rs. 36.5 Trillion'ನ ಅನುವಾದ)

---

**ಮೂಲ : ಪಿ. ಸಾಯಿನಾಥ್**. ಕನ್ನಡಕ್ಕೆ : **ಸಾಕ್ಷಿ**

ಕೇರಾಫ್ : ಕೆ. ಅರವಿಂದ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಬೆಂಗಳೂರು ಪ್ರಧಾನ ಕಛೇರಿ ಅವಿನ್ಯೂ ರಸ್ತೆ, ಬೆಂಗಳೂರು – ೫೬೦ ೦೦೨




# ಪರಿಸರ

'ಹೊಸತು' ಪತ್ರಿಕೆಯ ವಿಶೇಷ ಸಂಚಿಕೆಗಾಗಿ ಜನಾಭಿಪ್ರಾಯ ರೂಪಿಸಲು **ಓದುಗರ ವೇದಿಕೆ** ಎಂಬ ಹೆಸರಿನಲ್ಲಿ ಆಹ್ವಾನಿಸಿದ ಪರಿಸರಕ್ಕೆ ಸಂಬಂಧಿಸಿದ ಕಿರುಲೇಖನಗಳಲ್ಲಿ ಕೆಲವನ್ನು ಜನವರಿ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಉಳಿದವನ್ನು ಈ ಸಂಚಿಕೆಯಲ್ಲಿ ಪ್ರಕಟಿಸುತ್ತಿದ್ದೇವೆ.

**–ಸಂಪಾದಕ**

**ಇಂ**ದಿನ ಅಭಿವೃದ್ಧಿಯ ವೇಗಗಳನ್ನು ಗಮನಿಸತೊಡಗಿದರೆ ಮುಂದಿನ ದಿನಗಳಲ್ಲಿ ಕಾಂಕ್ರಿಟ್ ನಾಡಲ್ಲಿ ಮಣ್ಣು ಎಲ್ಲಿದೆ ಎಂದು ಹುಡುಕಬೇಕಾದೀತು. ಮುಂದಿನ ಪೀಳಿಗೆಯ ಮಕ್ಕಳು ಏಸಿ ರೂಮ್‌ನ ಲ್ಯಾಬ್‌ಗಳಲ್ಲಿ ಮಣ್ಣು ಎಂದರೆ ಹೀಗಿರುತ್ತಾ ಎಂದು ಕಣ್ಣರಳಿಸಿ ನೋಡಿದರೆ ಆಶ್ಚರ್ಯಪಡಬೇಕಾಗಿಲ್ಲ. ಇವತ್ತು ಅಭಿವೃದ್ಧಿ ಎಂದರೆ ಕಾಂಕ್ರಿಟ್ ನಾಡು, ಏಸಿ ರೂಮ್, ಇಂಟರ್‌ನೆಟ್, ಟ್ಯಾಂಕ್‌ನಿಂದ ಬರುವ ನೀರು, ಮಣ್ಣಿನ ಒಂದಂಶವೂ ಕಾಣದ ಪಳಪಳ ಹೊಳೆಯುವ ರಸ್ತೆಗಳು, ರೆಡಿಮೇಡ್ ಫುಡ್‌ಗಳು, ಎಂ. ಎನ್. ಸಿ. ಕಂಪನಿಗಳು ಹೀಗೆ ಹತ್ತು ಹಲವಾರು ಸಂಗತಿಗಳಾಗಿವೆ. ಈ ರೀತಿಯ ಅಭಿವೃದ್ಧಿಯ ಹೆಸರಿನಲ್ಲಿ ನಾವು ಸದ್ದಿಲ್ಲದೆ ನಮ್ಮ ಜೀವನಾಡಿಯಾಗಿರುವ ನೈಸರ್ಗಿಕ ಪರಿಸರವನ್ನೇ ಮುಗಿಸುತ್ತಿದ್ದೇವೆ. "ಪರಿಸರ ಮಾನವನ ಆಸೆಗಳನ್ನು ಈಡೇರಿಸಬಲ್ಲದೇ ಹೊರತು ದುರಾಸೆಗಳನ್ನಲ್ಲ" ಎಂದು ಮಹಾತ್ಮಾ ಗಾಂಧೀಜಿ ಹೇಳಿದ ಮಾತು ಎಷ್ಟೊಂದು ದಿಟ. ನೈಸರ್ಗಿಕ ಪರಿಸರದ ಜೊತೆ ಪೂರಕವಾಗಿ ಬದುಕಬೇಕಾದ ನಾವು ಕೃತಕ ಪರಿಸರದ ಸುಖದ ಮಾಯೆಗೆ ಒಳಗಾಗಿ ನೈಸರ್ಗಿಕ ಪರಿಸರವನ್ನು ವಿನಾಶಕ್ಕೆ ತಳ್ಳುತ್ತಿದ್ದೇವೆ. ನಮ್ಮ ಎಲ್ಲ ದುರಾಸೆಗಳನ್ನು ಪರಿಸರ ಎಷ್ಟೊಂದು ಸಹಿಸಿ ತಡೆದುಕೊಂಡಿತ್ತು. ಕೊನೆಗೂ ತಿರುಗಿ ಬೀಳಬೇಕಲ್ಲ. ಮುನಿದು ತೋರುವ ವಿಕೋಪ ಆಧುನಿಕತೆಯ ಭ್ರಮೆಯಲ್ಲಿರುವ ನಮ್ಮನ್ನು ನಿಸ್ಸಹಾಯಕರನ್ನಾಗಿ ಮಾಡುತ್ತದೆ. ಕುಳಿತಲ್ಲಿಂದಲೇ ಕೋಟ್ಯಂತರ ಕಿ. ಮೀ. ದೂರದ ಗ್ರಹಕ್ಕೆ ಯಂತ್ರ ಕಳುಹಿಸಿ ನಿಯಂತ್ರಿಸುವ ನಾವು ನಮ್ಮ ಮುಂದೆ ನಡೆಯುವ ಪ್ರಕೃತಿ ವಿಕೋಪಗಳನ್ನು ತಡೆಯಲು ಸಾಧ್ಯವಾಗದೇ ಒದ್ದಾಡುತ್ತಿದ್ದೇವೆ. ಜಾಗತೀಕರಣ ನಮ್ಮಲ್ಲಿ ಲಾಭ ಮತ್ತು ಹಪಾಹಪಿತನ, ಸುಖದ ಲೋಲುಪತೆಯನ್ನು ಕಲಿಸುತ್ತೆ ಹೊರತು ನೈಸರ್ಗಿಕ ಪರಿಸರಕ್ಕೆ ಪೂರಕವಾಗಿ ಬದುಕುವುದನ್ನು ಹೇಳಿಕೊಡಲ್ಲ. ಇವತ್ತು ನಾವು ತುರ್ತಾಗಿ ಪರಿಸರಕ್ಕೆ ಹತ್ತಿರವಾಗಬೇಕಾದ ಅಗತ್ಯವಿದೆ. ಗಾಂಧೀಜಿಯವರ ಸರಳ ಜೀವನ ನಾವು ಇನ್ನು ಮುಂದಾದರೂ ಅಳವಡಿಸಿಕೊಳ್ಳದೆ ವಿಧಿಯಿಲ್ಲ. ನೈಸರ್ಗಿಕ ಪರಿಸರವಿಲ್ಲದೇ ಒಂದು ಆರೋಗ್ಯಪೂರ್ಣವಾದ ನೆಮ್ಮದಿಯ ಜೀವನ ನಡೆಸಲು ಸಾಧ್ಯವಿಲ್ಲ. ಪರಿಸರದ ಮೇಲೆ ಅನವಶ್ಯಕ ಒತ್ತಡ ಹೇರದೆ ಆದಷ್ಟು ಮೂಲ ರೂಪದಲ್ಲೇ ಇಟ್ಟುಕೊಳ್ಳಲು ಪ್ರಯತ್ನಿಸೋಣ. ಪರಿಸರ ಚೆನ್ನಾಗಿದ್ದರೆ ನಾವು ಚೆನ್ನಾಗಿರಲು ಸಾಧ್ಯ. ನಾವು ಚೆನ್ನಾಗಿ ಇರಬೇಕಾದರೆ ಪರಿಸರ ಚೆನ್ನಾಗಿ ಇಟ್ಟುಕೊಳ್ಳಬೇಕು. ಒಟ್ಟಿನಲ್ಲಿ ಸ್ವಚ್ಛ ಪರಿಸರ ಮತ್ತು ಆರೋಗ್ಯ ಉತ್ತಮವಾಗಿಟ್ಟುಕೊಳ್ಳುವುದು ನಮ್ಮ ಆದ್ಯ ಕರ್ತವ್ಯವಾಗಬೇಕು.

**ವಿನಾಯಕ ಎಲ್. ಪಟಗಾರ,** ಉತ್ತರಕನ್ನಡ



**ಪ**ರಿಸರ ಎಂದರೆ ನಮ್ಮ ಸುತ್ತಲಿರುವ ಜಗತ್ತಿನ ವಾತಾವರಣ, ವಾತಾಯನ. ಇವು ಭೌತಿಕ, ಭೌಗೋಳಿಕ, ಆರ್ಥಿಕ ಹಾಗೂ ಸಾಮಾಜಿಕ ಪರಿಸರ ಎಂಬ ನಾಲ್ಕು ಬಗೆಗಳಲ್ಲಿವೆ. ಪರಸ್ಪರ ಜೀವಿಗಳ ಮತ್ತು ಅವುಗಳ ಪರಿಸರಗಳ ನಡುವಿನ ಅಧ್ಯಯನವನ್ನು 'ಪರಿಸರ ವಿಜ್ಞಾನ' ಎಂದು ಹೇಳುವರು.

ಇಂಗಾಲ ಚಕ್ರ, ಸಾರಜನಕ ಚಕ್ರ, ಆಮ್ಲಜನಕ ಚಕ್ರ ಹಾಗೂ ಜಲಜನಕ ಪೂರೈಕೆಗಳಿಂದಾಗಿ ಸಸ್ಯಗಳು – ಪ್ರಾಣಿಗಳು ಮತ್ತು ಅವುಗಳ ಪರಿಸರಕ್ಕೆ ಪರಸ್ಪರ ಸಂಬಂಧವಿದ್ದು, ಅವುಗಳ ನಡುವೆ ಸಮತೋಲ ಏರ್ಪಟ್ಟಿದೆ.

ಪರಿಸರದ ಪ್ರಾಣಿಗಳ ಸಂರಕ್ಷಣೆ ಬಲು ಮುಖ್ಯ. ನೀರು ನಮ್ಮ ಪರಿಸರದ ಒಂದು ಮುಖ್ಯ ಘಟಕ. ಪರಿಸರದ ಒಂದು ದೊಡ್ಡ ಘಟಕ ಅರಣ್ಯ. ವೃಕ್ಷಗಳು ನಮ್ಮ ಗೆಳೆಯರಂತೆ. ಕಾಡು ಉಳಿಸಿ, ಪರಿಸರ ರಕ್ಷಿಸಿ.

ಮಲಿನತೆ ಒಂದು ಶಾಪ. ಪರಿಸರ ಮಲಿನವಾಗುವುದರಿಂದ ಮನುಷ್ಯನ ಜೀವನ ಭೂಮಿಯ ಮೇಲೆ ಕಷ್ಟವಾಗುತ್ತದೆ. ಪರಿಸರದ ಗುಣಮಟ್ಟದ ಅಪಮೌಲ್ಯ ಎಂದರೆ ಗಾಳಿ, ನೀರು ಮತ್ತು ಸಸ್ಯಗಳ ಗುಣಮಟ್ಟದ ನಾಶ. ಅರಣ್ಯ ನಾಶವಾದರೆ ಪರಿಸರವೇ ನಾಶವಾದಂತೆ.

ಗಾಳಿಯನ್ನು ಮಲಿನಗೊಳಿಸುವ ಕಾರಕಗಳೆಂದರೆ ಹೊಗೆ, ಧೂಳು, ಬೂದಿ, ಕೆಲವು ಪರಾಗರೇಣುಗಳು, ವಿಷಾನಿಲಗಳು. ಗಾಳಿ ಅಶುದ್ಧವಾಗುವುದನ್ನು ವಾಯುಮಾಲಿನ್ಯ ಎನ್ನುವರು. ನೀರು ಮಲಿನವಾಗುವುದನ್ನು ಜಲಮಾಲಿನ್ಯ ಎನ್ನುವರು. ಜಲಮಾಲಿನ್ಯದಿಂದ ರೋಗರುಜಿನಗಳು ಹೆಚ್ಚಾಗುತ್ತವೆ. ಶಬ್ದ ಮಾರಕವಾಗಬಾರದು, ಏಕೆಂದರೆ ಅದು ಅತಿಯಾದರೆ ಅಪಾಯಕಾರಿ.

ನಾವು ಪರಿಸರ ಮಾಲಿನ್ಯದ ನಿವಾರಣೆ ಕಡೆಗೆ ಗಮನ ಹರಿಸಬೇಕು. ಮನೆ ಒಳಗೆ–ಹೊರಗೆ ಚೊಕ್ಕಟವಾಗಿಡಲು ಯತ್ನಿಸಬೇಕು. ಕಸ–ಕಡ್ಡಿಗಳನ್ನು ಕಾಂಪೋಸ್ಟ್ ಪಿಟ್‌ಗಳಲ್ಲಿ ಹಾಕಬೇಕು. ಕಾರ್ಖಾನೆ ವಾಸಸ್ಥಳದಿಂದ ದೂರವಿರಬೇಕು. ಬಾವಿಯೊಳಗೆ ಕಸಬೀಳದಂತೆ ಎಚ್ಚರ ವಹಿಸಬೇಕು.

ಮರಗಳನ್ನು ಮನೆ, ಶಾಲೆ, ಕಛೇರಿಗಳ ಮುಂದೆ, ರಸ್ತೆ ಬದಿಗಳಲ್ಲಿ ಬೆಳೆಸಿ ಪರಿಸರದ ನೈರ್ಮಲ್ಯವನ್ನು ಕಾಪಾಡಬಹುದು. ಸ್ವಚ್ಛತೆಯಿಂದ ಮನಸ್ಸಿನ ಆರೋಗ್ಯ ಮತ್ತು ದೇಹಾರೋಗ್ಯ ಸುಧಾರಿಸುವುದು.

**ಡಿ. ಗಾಯಿತ್ರಿ,** ಬೆಂಗಳೂರು

**ನಾ**ವು ಭೂಮಿಯ ಮೇಲೆ ಎಲ್ಲಿ ನಿಂತರೂ, ಕುಳಿತರೂ, ನಮ್ಮ ಸುತ್ತ–ಮುತ್ತ ಏನೇನನ್ನು ನೋಡುತ್ತೇವೆಯೋ, ಏನೇನನ್ನು ಕೇಳಿಸಿಕೊಳ್ಳುತ್ತೇವೆಯೋ, ಏನೇನನ್ನು ಅನುಭವಿಸುತ್ತೇವೆಯೋ ಅದೆಲ್ಲಾ ಪರಿಸರವೆ.

ಭೂಮಿಯ ಮೇಲಿರುವ ಬೆಟ್ಟ – ಗುಡ್ಡ – ಪರ್ವತ – ತಗ್ಗು – ದಿಣ್ಣೆ – ದಿಬ್ಬ – ಮರುಭೂಮಿ – ಅಗ್ನಿ ಪರ್ವತಗಳು – ಹಳ್ಳ – ಕೊಳ್ಳ – ನದಿ – ಸಮುದ್ರ – ಸಾಗರ – ಸರೋವರ – ಪ್ರಸ್ಥಭೂಮಿ – ಕಣಿವೆ, ಕಾಡು – ಮೇಡು – ಮರ – ಗಿಡ – ಬಳ್ಳಿ – ಹುಲ್ಲುಗಾವಲುಗಳು ಎಲ್ಲವೂ ಪರಿಸರದ ಭಾಗಗಳೇ ಆಗಿವೆ.






ಭೂಮಿಯ ಮೇಲೆ ಜೀವಿಸುವ ಕೋಟಿ ಕೋಟಿಗಳಷ್ಟು ಇರುವ ಕ್ರಿಮಿ – ಕೀಟಗಳು, ಸಸ್ಯಾಹಾರಿ ಪ್ರಾಣಿಗಳು, ಮಾಂಸಾಹಾರಿ ಪ್ರಾಣಿಗಳು, ಉಭಯಾಹಾರಿ ಪ್ರಾಣಿಗಳು, ಭಯಂಕರ ಪ್ರಾಣಿಗಳಾದ ಹುಲಿ – ಸಿಂಹ – ಚಿರತೆ, ಸಾಧುಪ್ರಾಣಿಗಳಾದ ಹಸು, ಎಮ್ಮೆ, ಜಿಂಕೆ ಮುಂತಾದ ಪ್ರಾಣಿಗಳು, ಗರುಡ, ಹದ್ದು, ಬಾತುಕೋಳಿ, ಗಿಳಿ, ಗೂಬೆ ಮುಂತಾದ ಅಸಂಖ್ಯಾತ ಪಕ್ಷಿಗಳು ಇವೆಲ್ಲವೂ ನಮ್ಮ ಪರಿಸರದ ಭಾಗಗಳೇ ಆಗಿವೆ. ಸಮುದ್ರ – ಸಾಗರಗಳಲ್ಲಿ ಜೀವಿಸುವ ಮೀನು, ಮೊಸಳೆ, ತಿಮಿಂಗಿಲ ಮುಂತಾದ ಅಸಂಖ್ಯಾತ ಜಲಚರ ಪ್ರಾಣಿಗಳು, ಜಲಸಸ್ಯಗಳು ಪರಿಸರದ ಶ್ರೀಮಂತಿಕೆಯನ್ನು ಹೆಚ್ಚಿಸಿವೆ.

ಸದಾಕಾಲ ಸುರಿವ ಮಳೆ, ಹಿಂಗಾರು ಮಳೆ, ಮುಂಗಾರು ಮಳೆ, ಇವುಗಳಿಂದ ಉಂಟಾಗುವ ಜಲಪಾತಗಳು ಸಹ ಪರಿಸರದ ಅಂಶಗಳೇ ಆಗಿವೆ.

ಭೂಮಿಯ ಕಲ್ಲು–ಮಣ್ಣುಗಳಲ್ಲಿ ಅಡಕವಾಗಿರುವ ಲವಣಾಂಶಗಳು, ಖನಿಜಾಂಶಗಳು, ಮುತ್ತು, ರತ್ನ, ವಜ್ರಗಳು, ಖನಿಜ ತೈಲಗಳಾದ ಸೀಮೆಎಣ್ಣೆ, ಪೆಟ್ರೋಲ್, ಡೀಸೆಲ್ ಮುಂತಾದ ತೈಲಗಳೂ ಪರಿಸರದ ಕೊಡುಗೆಗಳೇ ಆಗಿವೆ.

ಸೌರವ್ಯೂಹಕ್ಕೆ ಅಧೀನವಾಗಿರುವ ಭೂಮಿಯ ಚಲನೆ, ಚಂದ್ರನ ಚಲನೆ, ಸೂರ್ಯನ ಕಿರಣಗಳಿಗೆ ತಕ್ಕಂತೆ ಉಂಟಾಗುವ ಶೀತೋಷ್ಣಗಳು, ಪ್ರವಾಹಗಳು, ಮಾರುತಗಳು, ಭೂಕಂಪಗಳು, ಮೋಡ – ಮಿಂಚು – ಗುಡುಗು – ಸಿಡಿಲುಗಳಿಂದ ಉಂಟಾಗುವ ಪರಿಣಾಮಗಳು ಸಹ ಪರಿಸರದ ಭಾಗಗಳೇ.

ಪರ್ವತಗಳ ಮೇಲೆ ನಿರಂತರವಾಗಿ ಬೀಳುವ ಮಂಜು, ಭೂಮಿಯ ವಾತಾವರಣ, ಅಲ್ಲಿರುವ ಅನಿಲಗಳಾದ ಆಮ್ಲಜನಕ, ಜಲಜನಕ, ಸಾರಜನಕ, ಇಂಗಾಲ ಮುಂತಾದ ಅನಿಲಗಳು, ಧೂಳು ಪರಿಸರದ ಮೇಲೆ ಪ್ರಭಾವ ಬೀರುತ್ತವೆ.

ಸ್ವಯಂಭೂವಾಗಿ, ಪ್ರಕೃತಿಸಹಜವಾಗಿ, ಯಾವು – ಯಾವುದು ಎಲ್ಲೆಲ್ಲಿ ಹೇಗೆ ಹೇಗೆ ನಿರ್ಮಾಣವಾಗಿದೆಯೋ ಅದೆಲ್ಲವೂ ಅಲ್ಲಲ್ಲೇ ಇರಬೇಕೆಂಬುದು ನಿಸರ್ಗದ ನಿಯಮ. ಇಂಥ ಪರಿಸರದಲ್ಲಿ ಸೌಂದರ್ಯವಿದೆ. ಸಂಗೀತವಿದೆ, ಮಾಧುರ್ಯವಿದೆ, ಸಮಾನತೆ ಇದೆ, ಸ್ವಾತಂತ್ರ್ಯವಿದೆ. ಇದು ಭೂಮಿಯ ಮೇಲೆ ಜೀವಿಸುವ ಸೂಕ್ಷ್ಮಾತಿಸೂಕ್ಷ್ಮ ಜೀವಿಯಿಂದ ಹಿಡಿದು, ಬೃಹತ್ ಗಾತ್ರದ ಪ್ರಾಣಿಗಳು ಹಾಗೂ ಬುದ್ಧಿವಂತನೆನಿಸಿದ ಮಾನವನವರೆಗೆ ಎಲ್ಲರಿಗೂ ಇಂಥ ಸುಂದರವಾದ ಪರಿಸರವನ್ನು ಅನುಭೋಗಿಸುವ ಅವಕಾಶವಿದೆ. ಇದು ಸ್ವಯಂಸಿದ್ಧವಾದ ಪ್ರಕೃತಿಯ ನಿಯಮವೂ ಹೌದು. ಈ ಪ್ರಕೃತಿ ತನ್ನನ್ನು ತಾನೇ ನಿಯಂತ್ರಿಸಿಕೊಳ್ಳುತ್ತದೆ. ತನ್ನಲ್ಲಿ ಉಂಟಾಗುವ ಅಸಮಾನತೆಗಳನ್ನು ತಾನೇ ಸರಿಪಡಿಸಿಕೊಳ್ಳುತ್ತದೆ. ಇಲ್ಲಿ ಜೀವಿಗಳ ಹಕ್ಕೆಂದರೆ ಪ್ರಕೃತಿ ಕೊಡುಗೆಗಳನ್ನು ಉಪಯೋಗಿಸಿಕೊಂಡು ಅದರೊಡನೆ ಸಹಬಾಳ್ವೆ ನಡೆಸಬಹುದು. ನಮ್ಮ ಇಂದಿನ ಆದ್ಯ ಕರ್ತವ್ಯವೆಂದರೆ ಪರಿಸರವನ್ನು ನಾಶಮಾಡದೆ ಬದುಕುವುದು. ತಾನೂ ಬದುಕಿ ಇತರ ಜೀವಿಗಳೂ ಬದುಕಲು ಬಿಡುವುದು.

ಆಧುನಿಕ ಮಾನವ ತನ್ನ ಅತಿ ಬುದ್ಧಿವಂತಿಕೆಯಿಂದ ಅನೇಕ ರೀತಿಯ ಕಾರ್ಖಾನೆಗಳನ್ನು ತೆರೆದ. ಕಾರ್ಖಾನೆಗಳು ಹೊರಹಾಕುವ ಹೊಗೆ, ಧೂಳು ವಾಯುಮಂಡಲವನ್ನು ನಾಶಮಾಡುತ್ತಾ ಇವೆ. ಕಾರ್ಖಾನೆಯಿಂದ ಹೊರಬಿದ್ದ ನೀರು, ನದಿ, ಸಮುದ್ರಗಳನ್ನು, ಸರೋವರಗಳನ್ನು, ಮಲಿನ ಮಾಡುತ್ತಿವೆ. ನಗರ–ಪಟ್ಟಣ – ಹಳ್ಳಿಗಳಲ್ಲಿನ ಚರಂಡಿ ನೀರು, ಗೊಬ್ಬರ ಕಾರ್ಖಾನೆಗಳಿಂದ ಹರಿದುಬರುವ ರಾಸಾಯನಿಕ ವಸ್ತುಗಳು ನದಿಗಳಿಗೆ ಸೇರುತ್ತಿವೆ. ಕಾರ್ಖಾನೆಗಳಿಂದ ಆಗುವ ಶಬ್ದ, ಅಭಿವೃದ್ಧಿಯ ಹೆಸರಿನಲ್ಲಿ ನಿರ್ಮಿಸುವ ರಸ್ತೆಗಳಿಂದ ಮರಗಳ ನಾಶ, ಅತಿಯಾದ ವಾಹನಗಳು ಬಸ್ – ಲಾರಿ – ಕಾರು – ಟ್ರೈನ್ – ವಿಮಾನ ಮುಂತಾದುವು ಹೊರಸೂಸುವ ಪೆಟ್ರೋಲ್, ಡೀಸೆಲ್‌ನ ಹೊಗೆ, ವಾಹನಗಳ ಶಬ್ದ, ರೇಡಿಯೋ, ಟಿ.ವಿ., ಮೊಬೈಲು, ಅಂತರ್ಜಾಲಗಳ ಅಲೆಗಳು ಮುಂತಾದುವುಗಳಿಂದ – ನೀರು –ಗಾಳಿ – ಭೂಮಿ – ಆಕಾಶ ಮಲಿನಗೊಂಡಿವೆ. ಕೃಷಿ ಭೂಮಿಗೆ ರಾಸಾಯನಿಕ ವಸ್ತುಗಳನ್ನು ಸೇರಿಸುತ್ತಿರುವುದರಿಂದ, ಅಲ್ಲಿ ಬೆಳೆಯುವ ಧಾನ್ಯಗಳು, ಹಣ್ಣುಗಳು, ತರಕಾರಿಗಳಲ್ಲಿ ವಿಷಕಾರಕ ಅಂಶಗಳು ಸೇರಿ ಮಾನವನ ಹಾಗೂ ಇತರ ಪ್ರಾಣಿಗಳ ಮೇಲೆ ವಿನಾಶಕಾರಿ ಪರಿಣಾಮಗಳಾಗುತ್ತಿವೆ. ಹಿಂದೆಂದೂ ಕಾಣದಂತಹ ದೈಹಿಕ ಮತ್ತು ಮಾನಸಿಕ ರೋಗಗಳು ಮಾನವನನ್ನು ಬಾಧಿಸುತ್ತಿವೆ.

ಈ ಶತಮಾನದ ಅತ್ಯಂತ ಕೆಟ್ಟ ವಸ್ತುಗಳೆಂದರೆ ಪ್ಲಾಸ್ಟಿಕ್ ಮತ್ತು ಆಹಾರ ಪದಾರ್ಥಗಳಿಗೆ ಸೇರಿಸುತ್ತಿರುವ ಬಣ್ಣಗಳು. ಇವುಗಳಿಗೆ ಕಡಿವಾಣ ಹಾಕಬೇಕು. ಮನುಷ್ಯ ಇಂದು ಸುಲಭವಾಗಿ ಹಣ ಗಳಿಸಲೋಸುಗ ಧನಪಿಶಾಚಿಯಾಗಿದ್ದಾನೆ. ತನ್ನ ಪರಿಸರವನ್ನು ತಾನು ಕೆಡಿಸುತ್ತಿದ್ದೇನೆ ಎನ್ನುವ ಪ್ರಜ್ಞೆಯೇ ಇಲ್ಲದ ರಾಕ್ಷಸನಾಗಿದ್ದಾನೆ.

ನಿಸರ್ಗದತ್ತವಾದ ಪರಿಸರ ಉಳಿಸಿ – ಬೆಳೆಸಿ ಕಾಪಾಡೋಣ. ಪರಿಸರವೇ ತಂದೆ – ತಾಯಿ – ಗುರು – ಬಂಧು – ಬಳಗ ಎಂಬುದನ್ನು ಮರೆಯದಿರೋಣ.

## ಪರಿಸರ ಚಿಂತನೆ

"ಕಡಿದು ಕಡಿದು ನಿರ್ದಯದಿ ಎತ್ತೆರೆತ್ತರದ ಮರಗಳು
ಕಟ್ಟುತ್ತಿಹರು ಹೆದ್ದಾರಿ ಬಹುಮಹಡಿ ಕಟ್ಟಡಗಳು
ಜೀವಂತ ಮರಗಳ ಸೊಂಟ ಕೈಕಾಲು ರುಂಡಗಳು
ತುಂಡು ತುಂಡಾಗಿ ಕತ್ತರಿಸುತ್ತಿವೆ ಗರಗಸ ಕೊಡಲಿಗಳು"

"ಸಸ್ಯ ಸಂಪತ್ತು ನಶಿಸಿದರೆ ನಾಶವಾದಂತೆ ಮಳೆ ಬೆಳೆಗಳು
ಪರಿಸರದ ಬೆಲೆಯನ್ನು ಅರಿಯಲೇ ಬೇಕು ಸರ್ವ ಜನಗಳು
ಜೀವಭಾವ ನಾಡುನುಡಿಗಳು ಹಸನಾಗಲು ಬೇಕು ಮರಗಳು
ಉಸಿರು ನರನಾಡಿಗಳು ಶುದ್ಧವಾಗಿರಲು ಬೇಕು ಗಿಡಮರಗಳು"

"ಪೈಪೋಟಿಗಾಗಿ ಸೃಷ್ಟಿಸಿ ವಿಷಭರಿತ ಅಣುಬಾಂಬುಗಳು
ಪರಿಸರವನ್ನೇ ಸುಡುತಿಹವು ಜಗದ ಭವ್ಯನಾಡುಗಳು
ಮಾನವನ ಕಿಚ್ಚಿನೊಳು ಮಲಿನವಾಗಿ ಸಾಗರ ನದಿ ನದಂಗಗಳು
ಸುನಾಮಿ ಭೂಕಂಪಗಳು ಅತಿವೃಷ್ಟಿ ಅನಾವೃಷ್ಟಿಗಳ ಅವಘಡಗಳು"

"ಪ್ರಕೃತಿಯ ಮಡಿಲಲ್ಲಿ ಅಗಣಿತ ಸಸ್ಯರಾಶಿ ಜೀವ ಸಂಕುಲಗಳು
ಭುವಿಯ ಸಮತೋಲನ ಕಾಪಾಡಿವೆ ಗುಡ್ಡ ಕಾಡು ಬೆಟ್ಟಗಳು
ಮನಮಸ್ತಿಷ್ಕಗಳಿಗೆ ನವಚೇತನ ಹಸಿರು ಕಂಪು ತಂಪುಗಳು
ಸರ್ವರ ಹಿತಕ್ಕಾಗಿ ಒಂದಾಗಿ ತಡೆಯೋಣ ಪರಿಸರ ಮಾಲಿನ್ಯಗಳ"



"ಜಗದ ಪರಿಸರವನ್ನೇ ನಾಶಮಾಡುವ ಭಯಾನಕ ಯುದ್ಧಗಳು
ಅಣುಬಾಂಬುಗಳ ವಿಷಾನಿಲಕ್ಕೆ ಸುಡುವವು ಶ್ವಾಸಕೋಶಗಳು
ಸರ್ವಾಧಿಕಾರದ ಜಿದ್ದಿಗೆ ಬಲಿಯಾಗುತ್ತಿವೆ, ಕೋಟಿ ಕೋಟಿ ಜೀವಗಳು
ಪರಿಸರದ ಉಳಿವಿಗಾಗಿ ಮಾಡೋಣ ಶಪಥ ಬೆಸೆಯುತ್ತಾ ಹೃದಯಗಳ"

**ಯು. ಸಿರಾಜ್ ಅಹ್ಮದ್ ಸೊರಬ,** ಬೆಂಗಳೂರು – ೫೬೨ ೧೨೩

ಪರಿಸರ ನಾಶವೇ ಮನುಕುಲದ ನಾಶ ಎಂಬುದನ್ನು ಮರೆಯದಿರೋಣ. ಎಚ್ಚರ... ಎಚ್ಚರ... ಎಚ್ಚರ...

**ಎಸ್. ಸಿ. ರಂಗನಾಥ್**, ಬೆಂಗಳೂರು

*ಜೋಗದ ಸಿರಿ ಬೆಳಕಿನಲ್ಲಿ ತುಂಗೆಯ ತೆನೆ ಬಳುಕಿನಲ್ಲಿ*
*ಸಹ್ಯಾದ್ರಿಯ ಲೋಹದದಿರ ಉತ್ತುಂಗದ ನಿಲುಕಿನಲ್ಲಿ*
*ನಿತ್ಯ ಹರಿದ್ವರ್ಣ ವನದ ತೇಗ ಗಂಧ ತರುಗಳಲ್ಲಿ*
*ನಿತ್ಯೋತ್ಸವ, ತಾಯೆ ನಿತ್ಯೋತ್ಸವ ನಿನಗೆ ನಿತ್ಯೋ...*

– ಎಂದು ಹಾಡುತ್ತ, ಹಾಡು ಕೇಳುತ್ತ ಬಂದ ನಮಗೆ ಪರಿಸರ ಸಮಸ್ಯೆಗಳುಂಟಾಗುತ್ತಿವೆ ಎಂದರೆ ಆಘಾತಕರ ಸಂಗತಿಯೇ ಸರಿ. ವಿಪರ್ಯಾಸವೆಂದರೆ ಕವಿ ನಿಸಾರ್ ಅಹ್ಮದರ ಈ ನಿತ್ಯೋತ್ಸವ ಹಾಡಿನ ಈ ಚರಣದಲ್ಲಿ ಬರುವ ಪ್ರತಿಯೊಂದು ಸಂಗತಿಯೂ ಪರಿಸರದ ಸುಸ್ಥಿತಿಯನ್ನಲ್ಲ, ದುಸ್ಥಿತಿಯತ್ತಲೇ ಬೊಟ್ಟುಮಾಡಿ ತೋರಿಸುತ್ತದೆ. ಜೋಗದ ಸಿರಿ ಬೆಳಕು, ತುಂಗೆಯ ಬೃಹತ್ ನೀರಾವರಿ, ಸಹ್ಯಾದ್ರಿಯ ಲೋಹದ ಗಣಿಗಾರಿಕೆ, ನಿತ್ಯ ಹರಿದ್ವರ್ಣ ವನದಲ್ಲಿ ತೇಗದ ತೋಪು ಹಾಗೂ ಗಂಧದ ಬೇಟೆ ಈ ಎಲ್ಲವೂ ನಮ್ಮ ಘನ ಸರ್ಕಾರದ ದೂರದೃಷ್ಟಿರಹಿತ ಧೋರಣೆಯಿಂದಾಗಿ ಹಾಗೂ ಅಸಮರ್ಪಕ ಉಸ್ತುವಾರಿಯಿಂದಾಗಿ ಪರಿಸರವನ್ನು ಮರುಭೂಮಿಯನ್ನಾಗಿ ಮಾಡಹೊರಟಿವೆ.

ಮಾನವ ಜೀವನದ ಮೂಲಭೂತ ಆಧಾರಗಳೇ ಗಾಳಿ, ನೀರು ಮತ್ತು ಆಹಾರ. ಅವನ ಬದುಕು ನಿಂತಿರುವುದು ಈ ಮೂರರ ನೆಲೆಗಟ್ಟಿನ ಮೇಲೆ. ಆದರೀಗ... ಈ ನೆಲೆಗಟ್ಟು ಕುಸಿಯುವ ಮುನ್ಸೂಚನೆಗಳು ಗೋಚರಿಸಲಾರಂಭಿಸಿವೆ. ಮುಂಬರುವ ವರ್ಷಗಳಲ್ಲಿ ಈ ಅಗತ್ಯಗಳೇ ಸಮಸ್ಯೆಗಳಾಗಿ, ಮಾನವ ಅಸ್ತಿತ್ವದ ಅಡಿಪಾಯವನ್ನೇ ಅಲುಗಾಡಿಸಲಿವೆ ಎಂಬುದಾಗಿ ಹೇಳಬಹುದು. ಪ್ರಕೃತಿ ವಿಕೋಪಗಳ ಜೊತೆಗೆ ದಿನವೂ ನೂರಾರು ಜೀವಗಳನ್ನು ಬಲಿ ತೆಗೆದುಕೊಳ್ಳುತ್ತಿರುವ ವಿವಿಧ ಬಗೆಯ ಅವಘಡಗಳನ್ನು ನಾವು ಕಾಣುತ್ತಿದ್ದೇವೆ.

ಪರಿಸರ ಸಮಸ್ಯೆಯಿಂದ ವ್ಯಕ್ತಪಡಿಸಿರುವ ಶಂಕೆಯು ಸತ್ಯಾಸತ್ಯತೆಯನ್ನು ಅರಿತುಕೊಳ್ಳಲು ಪ್ರಯತ್ನಿಸಬೇಕು. ವಸ್ತುಸ್ಥಿತಿ ತಿಳಿಯಲು ಒಂದು ತಜ್ಞರ ಸಮಿತಿಯನ್ನು ರಚಿಸಬೇಕು. ಬೆಳೆಯುತ್ತಿರುವ ಔದ್ಯೋಗೀಕರಣ, ಹೆಚ್ಚುತ್ತಿರುವ ವಾಹನಗಳು, ರಾಸಾಯನಿಕ ಸಿಂಪರಣೆಗಳು ಮತ್ತು ನದಿಯ ಒಡಲಿಗೆ ಸೇರುವ ಕಲುಷಿತ ನೀರು, ಪೃಥ್ವಿಯ ಪರಿಸರವನ್ನೇ ಮಲಿನತೆಯ ಮಡುವನ್ನಾಗಿಸಿವೆ. ಜೊತೆಗೆ ಉಪಯುಕ್ತ ಕಲ್ಮಶಗಳನ್ನು ಸಮುದ್ರದ ಒಡಲಿಗೆ ಹರಿಯಬಿಡುವ ಮುನ್ನ ಕೈಗೊಳ್ಳುವ ವಿಷಪೂರಿತ ಕಲ್ಮಶಗಳ ಪುನರ್ ಸಂಸ್ಕರಣ ಮೊದಲಾದ ಮುನ್ನೆಚ್ಚರಿಕೆ ಕ್ರಮಗಳ ಬಗ್ಗೆಯೂ ಜನತೆಗೆ ತಿಳುವಳಿಕೆ ನೀಡಬೇಕು. ಎಲ್ಲ ಬಗೆಯ ಮಾಲಿನ್ಯಗಳನ್ನು ತಜ್ಞರ ತನಿಖೆಯಿಂದ ಮೊದಲು ದೃಢಪಡಿಸಿಕೊಂಡು ನಂತರ ಜನರಿಗೆ ಮನವರಿಕೆ ಮಾಡಿಕೊಡಬೇಕು. ವಿದ್ಯುತ್ ಉತ್ಪಾದನೆಯ ಘಟಕದಿಂದ ವಾತಾವರಣಕ್ಕೆ, ಪರಿಸರಕ್ಕೆ ಹಾನಿಯಾಗುತ್ತದೆ ಎಂಬುದನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ಎಂಜಿನಿಯರುಗಳು ಕೇವಲ ವಿದ್ಯುಚ್ಛಕ್ತಿ ಕುರಿತು ಮತ್ತು ಆರ್ಥಿಕ ಲಾಭದ ಕುರಿತು ಆಲೋಚಿಸಿದರೆ ಮಾತ್ರ ಸಾಲದು, ಜೈವಿಕ ಸಂಪನ್ಮೂಲದತ್ತಲೂ ದೃಷ್ಟಿಹರಿಸಬೇಕು.

ನಮ್ಮ ಸುತ್ತಮುತ್ತಲಿನ ಪರಿಸರವನ್ನು ಚೆನ್ನಾಗಿಟ್ಟುಕೊಳ್ಳಬೇಕೆಂದು ನಾವು ಮಕ್ಕಳಿಗೆ ಹೇಳುತ್ತೇವೆ. ಆದರೆ, ಪರಿಸರ ಸಮಸ್ಯೆಗೆ ಬಹುತೇಕ ದೊಡ್ಡವರೇ ಕಾರಣ. ಇದೇ ನೀತಿ ನಮ್ಮ ಸರ್ಕಾರದ್ದೂ ಕೂಡ. ಪ್ರತಿ ನಾಗರಿಕನೂ ತನ್ನ ಮತ್ತು ಮುಂದಿನ ಪೀಳಿಗೆಯ ಅಳಿವಿನ ಮತ್ತು ಉಳಿವಿನ ಬಗ್ಗೆ ಚಿಂತನೆ ಮಾಡಬೇಕಾಗಿದೆ. ಜಾಗೃತನಾಗಿ ಪರಿಸರ ಪ್ರಜ್ಞೆ ಬೆಳೆಸಿಕೊಂಡು ಅದರ ರಕ್ಷಣೆಗೆ ಸಕ್ರಿಯವಾಗಿ ಭಾಗವಹಿಸುವ ಎದೆಗಾರಿಕೆ ತೋರಿಸಬೇಕಾಗಿದೆ. ಪ್ರತಿಯೊಬ್ಬ ನಾಗರಿಕನೂ ಪರಿಸರ ರಕ್ಷಣೆಗೆ ಮೂಲಭೂತವಾಗಿ ಮಾಡಬೇಕಾದ್ದೆಂದರೆ ತನ್ನ ಕೈಲಾದಷ್ಟು ಪರಿಸರ ಸಮಸ್ಯೆಯನ್ನು ನಿವಾರಣೆ ಮಾಡುವುದು. ಇನ್ನೊಬ್ಬರು ಏನು ಮಾಡುತ್ತಾರೆ ಎಂಬ ಬಗ್ಗೆ ಯೋಚಿಸದೆ ತಾನು ಏನು ಮಾಡಬಲ್ಲೆ ಎಂಬ ಆತ್ಮ ವಿಮರ್ಶೆ ಮಾಡಿಕೊಳ್ಳುವುದು. ಪರಿಸರದಲ್ಲಿ ತ್ಯಾಜ್ಯಗಳು ಇಲ್ಲದೆ ಇರುವುದು, ಧ್ವನಿವರ್ಧಕಗಳನ್ನು ಬಳಸದೆ ಇರುವುದು, ವಾಹನಗಳನ್ನು ಮಿತವಾಗಿ ಬಳಸುವುದು ಮತ್ತು ಗಿಡಗಳನ್ನು ಬೆಳೆಸುವುದು. ಇವುಗಳನ್ನು ಮಾಡಿದಲ್ಲಿ ಪರಿಸರ ಅವನ ಸೇವೆಯನ್ನು ಕೃತಜ್ಞತೆಯಿಂದ ನೆನಪಿಸಿಕೊಳ್ಳುವುದು.

'ಪರಿಸರವನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ.'

**ಸಂಗಮನಾಥ ರೇವತಗಾಂವ**, ಕಲಬುರಗಿ

## ಸ್ವಚ್ಛ ಭಾರತಕ್ಕೆ ಸ್ವಚ್ಛ, ಸ್ವಸ್ಥ, ಸಮೃದ್ಧ ಸಮಾಜವೂ ಬೇಡವೇ ?




ಏಷ್ಯಾದ ಅತ್ಯಂತ ಗಲೀಜು ದೇಶಗಳಲ್ಲಿ ಭಾರತಕ್ಕೆ ಮೂರನೆಯ ಸ್ಥಾನ. ಇದನ್ನು ಮನಗಂಡ ಪ್ರಧಾನಿ ನರೇಂದ್ರ ಮೋದಿಯವರು ಸ್ವಚ್ಛ ಭಾರತವನ್ನಾಗಿಸಬೇಕೆಂದು ಮಹಾನ್ ಸಂಕಲ್ಪದೊಂದಿಗೆ 'ಸ್ವಚ್ಛ ಭಾರತ ಆಂದೋಲನ'ವನ್ನು ಆರಂಭಿಸಿದರು ಮತ್ತು ತಾನೇ ಪೊರಕೆ ಹಿಡಿದು ಆಂದೋಲನಕ್ಕೆ ಚಾಲನೆಯನ್ನೂ ನೀಡಿದರು.

ಇದನ್ನು ಕಾಂಗ್ರೆಸ್ ಕೆಂಗಣ್ಣಿನಿಂದ ನೋಡಿತು. ಇದು ಗಾಂಧೀಜಿಯವರ ಕೊಡುಗೆ. ಅವರು ಆರಂಭಿಸಿದ ಒಂದು ತತ್ವ ಪ್ರಣಾಲಿಕೆ ಎಂದು ಹೇಳಿತು. ಆದುದರಿಂದ ಈ ಆಂದೋಲನದಲ್ಲಿ ಭಾಗವಹಿಸಿದ, ಭಾಗವಹಿಸಲು ಬಯಸಿದ ಕಾಂಗ್ರೆಸಿಗರ ಮೇಲೆ ವಕ್ರದೃಷ್ಟಿ ಬೀರಲು ಆರಂಭಿಸಿತು. ಉದಾಹರಣೆಗೆ, ತಿರುವನಂತಪುರ ಮತದಾರ ಕ್ಷೇತ್ರದಿಂದ ಲೋಕಸಭೆಗೆ ಆರಿಸಿ ಹೋದ ಸದಸ್ಯನೊಬ್ಬನನ್ನು ಕಾಂಗ್ರೆಸ್ಸಿನ ಪ್ರಚಾರಕ ಸ್ಥಾನಮಾನದಿಂದ ಹೊರತಳ್ಳಿತು. ಕಾಂಗ್ರೆಸ್ಸಿನ ಕೃಪೆಯಿಂದ ರಾಜ್ಯಸಭಾ ಸದಸ್ಯರಾದ ಕ್ರಿಕೆಟಿಗ ಸಚಿನ್ ತೆಂಡುಲ್ಕರ್ ಮೇಲೆ ಮುನಿಸಿಕೊಂಡಿತು.

ಇಂತಹ ಒಂದು ಉತ್ತಮ, ಸರ್ವಹಿತ ಸಾಧಕ ರಾಷ್ಟ್ರೀಯ ಕಾರ್ಯಕ್ರಮದಲ್ಲೂ ಕಾಂಗ್ರೆಸ್ ಪಕ್ಷಕ್ಕೆ ಕಟುವಾಸನೆ ಬರುತ್ತಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ಇರಲಿ, ಆದರೆ ಶೇ. ೭೦ರಷ್ಟು ಅಶಿಕ್ಷಿತರೇ ಇರುವ ನಮ್ಮ ದೇಶದಲ್ಲಿ ಮೋದಿಯವರ ನಿಶ್ಚಿತ ಅವಧಿಯೊಳಗೆ ಭಾರತ ಸಂಪೂರ್ಣ ಸ್ವಚ್ಛ ಭಾರತವಾಗಿ ಕಂಗೊಳಿಸುವುದು ಅನುಮಾನವೆಂದೇ ಹೇಳಬೇಕು. ಯಾಕೆಂದರೆ ಹೆಚ್ಚು ತಿಳುವಳಿಕೆಯಿಲ್ಲದ ಅನೇಕ ಬಡಜನರು ಹೊಲಸಿನಲ್ಲೇ ಹುಟ್ಟಿದವರಾಗಿರುತ್ತಾರೆ. ಹೊಲಸಿನಲ್ಲೇ ಬೆಳೆಯುತ್ತಾರೆ. ಹೊಲಸಿನಲ್ಲೇ ಕೊನೆಯುಸಿರೆಳೆಯುತ್ತಾರೆ. ಅಂತಹವರಿಗೆ ಹೊಲಸು ಎಂಬುದು ಜೀವನದ ಒಂದು ಅವಿಭಾಜ್ಯ ಅಂಗವಾಗಿಬಿಟ್ಟಿದೆ. ಅದೊಂದು ಸಂಸ್ಕೃತಿಯಾಗಿ ರೂಪುಗೊಂಡಿದೆ. ಅಂತಹ ಜನರು ಅದರಿಂದ ಹೊರಬರಲು ಎಂದೂ ಪ್ರಯತ್ನಿಸಲಾರರು. ಅದೇ ಅವರ ಜೀವನ. ಅದೇ ಅವರ ಪ್ರಪಂಚ.

ನಮ್ಮೂರಲ್ಲಿ ಒಬ್ಬ ಮೀನು ಮಾರುವ ಸಾಬಿ ಇದ್ದ. ಅವನ ಅಂಗಡಿಯಲ್ಲಿ ಬೇರೆ ಬೇರೆ ಜಾತಿಯ ಮೀನುಗಳು ಮಾರಾಟಕ್ಕಿದ್ದುವಲ್ಲದೆ ಬೇರೇನೂ ಇರಲಿಲ್ಲ. ಅಲ್ಲೇ ಅವನ ಊಟ, ವಸತಿ ಕೂಡ. ಮನೆಯ ಹತ್ತಿರವೇ ಅಂಗಡಿ ಇದ್ದುದರಿಂದ ಅವನಿಗಾಗಲಿ, ಅವನ ಚಿಕ್ಕ ಪರಿವಾರಕ್ಕಾಗಲಿ ಸಮಸ್ಯೆಗಳೇನೂ ಇರಲಿಲ್ಲ. ಹೊರ ಪ್ರಪಂಚದ ದೃಷ್ಟಿಯಲ್ಲಿ ಅವನು ಅಪರಿಚಿತ. ಆದರೆ ಒಳ್ಳೆಯ ಮನುಷ್ಯ.

ಒಂದು ಸಲ ನಾನು ಅವನನ್ನು ನನ್ನ ಹತ್ತಿರದ ಸಂಬಂಧಿಕರೊಬ್ಬರಲ್ಲಿಗೆ ಕರೆದು ಕೊಂಡು ಹೋದೆ ಅವನಿಗೆ ಸ್ವಲ್ಪ ಹೊರ ಪ್ರಪಂಚವನ್ನು ತೋರಿಸೋಣವೆಂದು. ರಾತ್ರಿ ಊಟ ಮಾಡಿ ಹೊರ ಜಗಲಿಯಲ್ಲಿ ಮಲಗಿದವ ಬೆಳಗಾಗುವ ಮೊದಲೇ ಎದ್ದು ಕುಳಿತುಕೊಂಡಿದ್ದ. ಅವನನ್ನು ನೋಡಿ ನಾನು, "ಏನು ಸೇಕೆ, ರಾತ್ರಿ ನಿದ್ದೆ ಬರಲಿಲ್ಲವೇ ?" ಎಂದು ಕೇಳಿದೆ. ಅವನ ಹೆಸರು ಸೇಕ ಬ್ಯಾರಿ ಎಂದು. ಎಲ್ಲರೂ ಸೇಕೇ ಎಂದೇ ಕರೆಯುತ್ತಿದ್ದರು. "ಇಲ್ಲಣ್ಣಾ, ಸ್ವಲ್ಪವೂ ನಿದ್ದೆ ಬರಲಿಲ್ಲ. ಮೀನಿನ ವಾಸನೆ ಮೂಗಿಗೆ ಬಡಿಯದೆ ರಾತ್ರಿಯಿಡೀ ನಿದ್ದೆ ಬಾರದೆ ಒದ್ದಾಡಿಯೇ ಕಳೆಯಬೇಕಾಯಿತು."ಎಂದು ಬೇಸರದಿಂದ ಹೇಳಿದ. ಗಲೀಜು, ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ನಮ್ಮ ಅನೇಕ ಬಡಜನರ ಪಾಡೂ ಇದಕ್ಕಿಂತ ಭಿನ್ನವಾಗಿರುವುದಿಲ್ಲ, ಗೊಬ್ಬರದ ಹುಳುವಿನಂತೆ. ಹೊಲಸು ಎಂದೂ ಅವರಿಗೆ ಅಪಥ್ಯವಾಗದು. ಇಂತಹವರು ಮನೆಯ ಮುಂದೆ ಇರುವ ಮೋರಿಯನ್ನು ತಿಪ್ಪೆ ಎಂದೇ ಭಾವಿಸಿಕೊಂಡಿರುತ್ತಾರೆ. ಹಾಗಾಗಿ ಕಸ, ಕಡ್ಡಿ, ಚಿಕ್ಕ ಮಕ್ಕಳ ಅಮೇಧ್ಯ – ಏನಿದ್ದರೂ ಮೋರಿಗೆ ಎಸೆದುಬಿಡುವುದನ್ನು ರೂಢಿ ಮಾಡಿಕೊಂಡಿರುತ್ತಾರೆ. ಅಲ್ಲೇ ಸ್ನಾನ ಮಾಡುತ್ತಾರೆ. ಬಟ್ಟೆ ಒಗೆಯುತ್ತಾರೆ. ಬೆಳಗಾಗುವ ಮೊದಲೇ ಮೋರಿಯ ಬದಿಯಲ್ಲಿ ಕುಳಿತುಕೊಂಡು ಮಲಮೂತ್ರ ಮಾಡುವವರೂ ಇರುತ್ತಾರೆ. ಚಿಕ್ಕ ಮಕ್ಕಳ ವಿಚಾರವಂತೂ ಹೇಳಲೇಬೇಕಾಗಿಲ್ಲ. ಇಂತಹವರು ಜಾಗೃತಗೊಳ್ಳುವುದು, ಗೊಳಿಸುವುದು ಸುಲಭದ ಕೆಲಸವಲ್ಲ. ಸ್ನಾನದ ಮನೆ, ಶೌಚಾಲಯಗಳೇ ಇಲ್ಲದ




ಮೇಲೆ ಇನ್ನೆಲ್ಲಿಗೆ ಹೋಗಬೇಕು ಅವರು ? ಸ್ವಚ್ಛ ಭಾರತಕ್ಕೆ ಇದೆಲ್ಲಾ ಶೋಭೆಯೇ ? ಮೋದಿಯವರು ಇತ್ತ ಗಮನ ಹರಿಸಬೇಡವೇ ? ಭಾರತ ಹೊರಮೈ ಯಲ್ಲಿ ಮಾತ್ರ ಸ್ವಚ್ಛವಾದರೆ ಸಾಕೇ ?

ಇನ್ನೊಂದು ಮುಖ್ಯ ವಿಚಾರ ಎಂದರೆ ಸ್ವಚ್ಛತಾ ಆಂದೋಲನಕ್ಕೆ ದೊಡ್ಡ ನಗರಗಳಲ್ಲಿ ಸಿಕ್ಕುವ ಪ್ರೋತ್ಸಾಹ, ಕಂಡುಬರುವ ಉತ್ಸಾಹ ಹಾಗೂ ಕಾರ್ಯಸಿದ್ಧಿ ನಗರಗಳ ಹೃದಯ ಭಾಗದಿಂದ ಹೊರ ಪ್ರದೇಶಗಳಲ್ಲಿ, ಉದಾಹರಣೆಗೆ ಹೇಳುವುದಾದರೆ ಬೆಂಗಳೂರು ನಗರ ಪಾಲಿಕೆಗೆ ಹೊಸತಾಗಿ ಸೇರಿದ ಗ್ರಾಮಗಳಲ್ಲಿ, ಚಿಕ್ಕ ಚಿಕ್ಕ ಪಟ್ಟಣಗಳಲ್ಲಿ ಕಂಡುಬರುವುದಿಲ್ಲ.

ಇನ್ನು ಬೆಂಗಳೂರು ಸಿಟಿಯನ್ನೇ ತೆಗೆದುಕೊಂಡರೆ ಸದಾಶಿವನಗರ, ಜಯನಗರ, ರಾಜಾಜಿನಗರ, ಬಸವನಗುಡಿ ಮೊದಲಾದ ಕಡೆಗಳಲ್ಲಿ, ಮುಖ್ಯ ರಸ್ತೆಗಳು, ಚರಂಡಿಗಳು, ಸ್ವಚ್ಛವಾಗಿ ಕಂಡುಬಂದರೆ ಬೇರೆ ಕಡೆ, ಸ್ವಲ್ಪ ದೂರಕ್ಕೆ ಸರಿದರೆ ಪರಿಣಾಮವೇನೂ ಕಂಡುಬರುವುದಿಲ್ಲ. ನಾಯಿಗಳ ಓಡಾಟ, ಕಿರುಚಾಟ (ಕೆಲವರು ನಾಲ್ಕಾರು ನಾಯಿಗಳನ್ನು ಸಾಕುವುದೂ ಇದೆ), ಅವುಗಳ ಮೇಲೆ ಯಾರಾದರೂ ಕಲ್ಲೆಸೆದರೆ ಅವುಗಳಲ್ಲ, ಮನೆಯ ಯಜಮಾನ ಗುರ್ರೆನ್ನುತ್ತಾನೆ. ದನಕರುಗಳ ಸಗಣಿ, ಗಂಜಲ, ಅಂಗಡಿಗಳ ಬದಿಯಲ್ಲಿ ಎಸೆಯುವ ಹಣ್ಣುಗಳ ಸಿಪ್ಪೆ, ಕಸ, ಕಡ್ಡಿ, ಕೊಳೆತ ತರಕಾರಿ ...ಇತ್ಯಾದಿ ಇತ್ಯಾದಿ ಎಂದಿನಂತೆ ಕಣ್ಣಿಗೆ ಗೋಚರಿಸುತ್ತಿವೆ.

ಆದುದರಿಂದ ಸ್ವಯಂಸ್ಫೂರ್ತಿಯಿಂದ ಸ್ವಚ್ಛತಾ ಕೆಲಸದಲ್ಲಿ ತೊಡಗಿಕೊಂಡವರು, ನಗರ ಪಾಲಿಕೆಯ ಬಡ ಮಾಲಿಗಳು, ಈ ಕಡೆಗೂ ಸ್ವಲ್ಪ ಗಮನಹರಿಸಬೇಕು. ಅಲ್ಲಿಯ ಜನರಿಗೆ ತಿಳುವಳಿಕೆ ಕೊಡಬೇಕು. ಕ್ರಮೇಣ ಹಳ್ಳಿಗಳತ್ತವೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸುತ್ತಾ ಸಾಗಬೇಕು. ಸ್ವಚ್ಛತಾ ಕಾರ್ಯಕ್ರಮಕ್ಕಾಗಿ ಸರ್ಕಾರ ಒದಗಿಸುವ ಹಣ, ಸಾಮಗ್ರಿಗಳ ಸದುಪಯೋಗವಾಗುವಂತೆ ನೋಡಿಕೊಳ್ಳಬೇಕು. ಯಾಕೆಂದರೆ ಇಂದು ಎಲ್ಲಾ ಇಲಾಖೆಗಳಲ್ಲೂ, ಎಲ್ಲರಲ್ಲೂ ಭ್ರಷ್ಟಾಚಾರ ಕಂಡುಬರುತ್ತಿದ್ದು, ಸಂಬಂಧ ಪಟ್ಟವರು ಕೋಟಿ ಕೋಟಿ ಹಣ ಗುಳುಂ ಮಾಡುತ್ತಿದ್ದಾರೆ. ಕೇಳುವವರು ಹೇಳುವವರು ಯಾರೂ ಇಲ್ಲದಿರುವುದರಿಂದ ಹೊಲವನ್ನು ಬೇಲಿ ಚೆನ್ನಾಗಿ ಮೇಯುತ್ತಿದ್ದಾರೆ.

ಕರ್ನಾಟಕದ ಒಂದು ದೊಡ್ಡ ನಗರದಲ್ಲಿ ನಗರ ಪಾಲಿಕೆಯ ಅಧಿಕಾರಿಗಳು ಕಸ ಕೂಡಿಹಾಕಲೆಂದು ಕಸದ ಡಬ್ಬಗಳ ಖರೀದಿಗೆ ಖರ್ಚು ಮಾಡಿದ ಹಣ ಕೆಲವು ಸಾವಿರ ಬಿಲ್ಲು ತೋರಿಸಿ ನುಂಗಿದ ಹಣ ಕೆಲವು ಕೋಟಿ. ಪಟ್ಟಣಗಳಲ್ಲಿ ಇನ್ನೊಂದು ಕೊರತೆಯೆಂದರೆ ಕಸಕಡ್ಡಿಗಳನ್ನು, ತ್ಯಾಜ್ಯ ವಸ್ತುಗಳನ್ನು ಒಂದು ಕಡೆ ಹಾಕಿ ಬರಲು ಬೇಕಾದಷ್ಟು ಅನುಕೂಲತೆಗಳು ಇಲ್ಲದಿರುವುದು. ಅಲ್ಲಲ್ಲಿ ಒಂದೊಂದು ಸಿಮೆಂಟಿನಿಂದ ತಯಾರಿಸಿದ ಚಕ್ರಾಕಾರದ ಚಟಿಕೆಗಳಿದ್ದರೂ ಅವುಗಳಲ್ಲಿ ತುಂಬಿದ ತ್ಯಾಜ್ಯಗಳನ್ನು ಸಮಯಕ್ಕೆ ಸರಿಯಾಗಿ ಸ್ವಚ್ಛಗೊಳಿಸದಿರುವುದು. ಇನ್ನು ಅನೇಕ ಕಡೆ ಇಂತಹ ಸೌಲಭ್ಯಗಳಿದ್ದರೂ ಜನರು ಅವುಗಳೊಳಗೆ ತ್ಯಾಜ್ಯವನ್ನು ಸುರಿಯದೆ ಹೊರಗೆ ಬದಿಯಲ್ಲಿ ಸುರಿದು ಬರುತ್ತಾರೆ. ಕೆಲವು ಕಡೆ ಕಸಕಡ್ಡಿಗಳನ್ನು, ಕೊಳೆತ ವಸ್ತುಗಳನ್ನು ಕೂಡಿಹಾಕಿ ಅವುಗಳಿಗೆ ಬೆಂಕಿ ಹಚ್ಚುತ್ತಾರೆ. ಇದರಿಂದ ಪರಿಸರ ಪ್ರದೂಷಣಗೊಂಡು ಅನೇಕ ಬಗೆಯ – ಅದರಲ್ಲೂ ಮುಖ್ಯವಾಗಿ, ಅಸ್ತಮಾ, ಕಣ್ಣುರಿ ಮುಂತಾದ ಕಾಯಿಲೆಗಳು ಉಂಟಾಗುತ್ತವೆ.

ನಮ್ಮ ನಗರಗಳಲ್ಲಿ ಶೌಚಾಲಯಗಳ ಅಭಾವ ಹೇಳತೀರದು. ಎಲ್ಲೋ ಒಂದೊಂದು ಕಡೆ ಇದ್ದರೆ ಅಲ್ಲಿ ನೀರಿರುವುದಿಲ್ಲ. ಸ್ವಚ್ಛತೆಯ ಮಾತು ಬಿಡಿ, ಒಳಗೆ ಕಾಲಿಡುವಂತಿಲ್ಲ. ಎಷ್ಟೋ ಜನರು ಹೊರಗೇ ಶೌಚ ಮಾಡಿ ಬರುತ್ತಾರೆ.

ವೀಳ್ಯ ಜಗಿದು ರಸ್ತೆಯ ಮೇಲೆ, ಗೋಡೆಗಳ ಮೇಲೆ, ಅಂಗಡಿಗಳ ಮುಂದೆ ಉಗುಳುವುದು ಸಾಮಾನ್ಯ ಸಂಗತಿ. ನಾನೊಮ್ಮೆ ಕರ್ನಾಟಕದ ಹೈಕೋರ್ಟಿನ ಮೆಟ್ಟಿಲುಗಳನ್ನು ಏರುತ್ತಾ ಮಹಡಿಗೆ ಹೋಗುತ್ತಿದ್ದಾಗ ಗೋಡೆಯ ಮೇಲೆ ಹಳ್ಳಿಯ ಜನರು ವೀಳ್ಯ ಜಗಿದು ಉಗುಳಿ ವಿರೂಪಗೊಳಿಸಿದ್ದನ್ನು ಕಂಡಿದ್ದೇನೆ. ಈ ಎಲ್ಲಾ ಅಶೌಚಗಳನ್ನು, ಅನಾಗರಿಕ ಕೆಲಸಗಳನ್ನು ಮೊದಲು ನೀಗಬೇಕು. ಜನರಿಗೆ ತಿಳುವಳಿಕೆ ಕೊಡಬೇಕು. ಜನಹಿತ ಕಾರ್ಯಗಳ ಅಧ್ಯಯನಕ್ಕೆಂದು ಸಿಂಗಾಪುರ, ಅಮೆರಿಕ, ಚೀನಾ ಮೊದಲಾದ ದೇಶಗಳಿಗೆ ನಮ್ಮ ಮಂತ್ರಿಗಳು ನಗರ ಪಾಲಿಕೆಯ ಸದಸ್ಯರು ಪ್ರತಿ ವರ್ಷ ಹೋಗಿಬರುತ್ತಾರೆ. ಇದರಿಂದ ತೆರಿಗೆ ಹಣ ಪೋಲಾಗುತ್ತದೆ, ಅಷ್ಟೆ. ಅವರ ವಿದೇಶಯಾತ್ರೆಯಿಂದ ಬೇರೇನಾದರೂ ಪ್ರಯೋಜನ ವಾಗುತ್ತಿದೆಯೇ ? ಆದದ್ದು ಇದೆಯೇ ? ಆ ದೇಶಗಳಲ್ಲಿ ಸ್ವಚ್ಛತಾಕಾರ್ಯ ಹೇಗೆ ನಡೆಯುತ್ತಿದೆ ಎಂಬುದನ್ನಷ್ಟೇ ತಿಳಿದು ಬಂದು ಇಲ್ಲಿ ಆ ರೀತಿ ಜಾರಿಗೊಳಿಸಲು ಅಲ್ಪ ಪ್ರಯತ್ನ ಮಾಡಿದ್ದರೂ ಅವರ ವಿದೇಶಯಾತ್ರೆ ವ್ಯರ್ಥವಾಗುತ್ತಿರಲಿಲ್ಲ. ಜನರಿಗೆ ಸ್ವಲ್ಪವಾದರೂ ಪ್ರಯೋಜನವಾಗುತ್ತಿತ್ತು.

ಅನುಭವದಿಂದ ಬೆಂಗಳೂರು ನಗರದ ಮಟ್ಟಿಗೆ ಹೇಳುವುದಾದರೆ ಇದನ್ನು ಸಂಪೂರ್ಣ ಸ್ವಚ್ಛ, ಸುಂದರ ನಗರವನ್ನಾಗಿ ಮಾಡುವುದು ಯಾರಿಂದಲೂ ಸಾಧ್ಯವಾಗದೆಂದೇ ಅನ್ನಿಸುತ್ತಿದೆ. ಯಾಕೆಂದರೆ ಹೊರಗಿನಿಂದ ಬಂದ ಮತ್ತು ಸ್ಥಳೀಯ ಭೂಮಾಫಿಯಾದವರು, ಖಾಸಗಿ ಶಿಕ್ಷಣ ಸಂಸ್ಥೆಗಳು, ಕಾರ್ಖಾನೆಗಳು, ಪ್ರಭಾವಿ ರಾಜಕೀಯ ಪುಢಾರಿಗಳು, ಭ್ರಷ್ಟ ಅಧಿಕಾರಿಗಳು, ಗುತ್ತಿಗೆದಾರರು, ಜಲಮಂಡಳಿಯ ನೀರಾನೆಗಳು, ಹಾಲಿ, ಮಾಜಿ ಮಂತ್ರಿಗಳು, ಶಾಸಕರು ಈ ನಗರವನ್ನು ನರಕಕೂಪಕ್ಕೆ ತಳ್ಳಿಬಿಟ್ಟಿದ್ದಾರೆ. ಇದನ್ನು ಮತ್ತೆ ಮೇಲೆತ್ತುವುದು ಸುಲಭದ ಕೆಲಸವಲ್ಲ. ಭಗೀರಥನೇ ಹುಟ್ಟಿಬರಬೇಕಾದೀತು. ಹೆಚ್ಚಿನ ನಾಗರಿಕರಲ್ಲೂ ಈ ನಗರವನ್ನು ಸ್ವಚ್ಛವಾಗಿಡಬೇಕೆಂಬ ಉತ್ಕಟ ಆಕಾಂಕ್ಷೆ ಇಲ್ಲ. ಒಟ್ಟಿನಲ್ಲಿ, ನಗರ ಇಂದು ರೌಡಿಗಳ, ಅತ್ಯಾಚಾರಿಗಳ, ಕಳ್ಳರ ಅಡ್ಡೆಯಾಗಿಬಿಟ್ಟಿದೆ.

**ಎಂ. ವಿ. ಭಟ್ (ಶ್ರೀ ಮಿತ್ತೂರ್), ಬೆಂಗಳೂರು**

## ಪರಿಸರ ಮಾಲಿನ್ಯದ ಡಮರುಗ ಬಾರಿಸುತ್ತಿದೆ

ಓ ಮಾನವ...
ನಿನಗೆ ನಿಲ್ಲಲೊಂದು ಭೂಮಿ ಇದೆ
ಇರಲು ಒಂದು ಆಕಾಶ
ಅಗ್ನಿ–ನೀರು–ವಾಯುಗಳೇ
ನಿನ್ನ ಜೀವನಕ್ಕೆ ಆಧಾರ.

ನಿನ್ನ ಸುತ್ತಮುತ್ತ ಇರುವ
ಕಲ್ಲು–ಮಣ್ಣು, ಬೆಟ್ಟ–ಗುಡ್ಡ–ಪರ್ವತ
ಕಾಡು–ಮೇಡು, ನದಿ–ಸರೋವರ
ಕೊಲ್ಲಿ, ಸಮುದ್ರ, ಸಾಗರ, ಇವೇ ನಿನಗೆ ಆಗರ.

ಪಶು ಪಕ್ಷಿ ಪ್ರಾಣಿಗಳು
ನಿನ್ನ ಸುತ್ತ ನೆರೆದಿವೆ
ಅವುಗಳಲ್ಲಿ ನೀನು ಒಬ್ಬ
ನೆಮ್ಮದಿಯಿಂದ ಬದುಕಲೋ...

ಭೂಮಿಯೊಂದು ರಂಗಭೂಮಿ
ಸೂರ್ಯಚಂದ್ರರೇ ಜ್ಯೋತಿಗಳು
ರಂಗಕ್ಕೆ ರಂಗೇರಿಸುವ ನಕ್ಷತ್ರಗಳ ಜ್ಯೋತಿರ್ಲೋಕ
ಇಲ್ಲಿ ನಿನ್ನ ಪಾತ್ರ ಆಡಿ ಅಮರನಾಗಲೋ...

ನೀ ಕವಿಯಾದರೆ ಈ ದಿವ್ಯಲೋಕವ ವರ್ಣಿಸು
ಕೋಗಿಲೆಯಂತೆ ಹಾಡಿ, ನವಿಲಿನಂತೆ ನರ್ತಿಸಿ
ಜ್ಞಾನಿಯಾಗಿ, ಯೋಗಿಯಾಗಿ, ಮೌನಮುದ್ರೆಯಿಂದ
ಮಾನವನಾಗಿ... ದೇವಮಾನವನಾಗಿ ಬಾಳಲೋ...

ನಿನ್ನ ಸುತ್ತ ದಿವ್ಯ–ಭವ್ಯ ಲೋಕವಿದೆ
ಹಚ್ಚಹಸಿರು ಹಾಸು ಇದೆ
ನಿಂತು ನಲಿವ ಸಸ್ಯರಾಶಿ
ಜಲ ಜಲಿಸುವ ಜಲತರಂಗ ಸಮ್ಮೋಹನಗೊಳಿಸಿದೆ.

ಮಾನವ... ಇದು ನಿನ್ನ ಲೋಕ, ಸಕಲ ಜೀವಿಗಳ ಲೋಕ
ಭೂಮಿ ಕೆಡಿಸಿ, ಜಲವ ಕೆಡಿಸಿ, ವಾಯು ಕೆಡಿಸಿ, ಶಬ್ದ ಮಾಡಿ
ದುರಾಸೆ ದುರ್ಬುದ್ಧಿಯಿಂದ ಕೆಡಿಸಬೇಡ ಪರಿಸರ.
ಮಾನವ... ನಿನಗಿಲ್ಲೇ ನರಕ, ನೀ ಕೆಡಿಸಿದರೆ ಪರಿಸರ.

ಪರಿಸರ ಮಾಲಿನ್ಯದ ಡಮರುಗ ಬಾರಿಸುತ್ತಿದೆ
ಮಾಲಿನ್ಯ... ಮಾಲಿನ್ಯ ಎಂದು ಘಂಟೆ–ಜಾಗಟೆಗಳು
ಝೇಂಕರಿಸುತ್ತಿವೆ
ಮನುಕುಲದ ನಾಶಕ್ಕೆ ಚರಮಗೀತೆ ಹಾಡುತಿದೆ
ಜಾಗೃತನಾಗಿ, ನಿನ್ನ ಪರಿಸರವ ನೀ ಕಾಪಾಡಿಕೋ...

**ಎಸ್. ಸಿ. ರಂಗನಾಥ್**
ನಿವೃತ್ತ ಉಪನ್ಯಾಸಕರು, ಮನೆ ನಂ. ೩೨೩, ೧ನೇ ಮಹಡಿ
೧೪ನೇ ಮುಖ್ಯರಸ್ತೆ, ೧೬ನೇ ಅಡ್ಡರಸ್ತೆ, ಜೆ. ಪಿ. ನಗರ
೫ನೇ ಹಂತ, ಬೆಂಗಳೂರು – ೫೬೦ ೦೭೮

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

